# ಇತಿಹಾಸ ಆಕರಗಳ ಸಂಗ್ರಹಕಾರ
# ಕರ್ನಲ್ ಮೆಕ್ಕೆಂಝಿ-ಚಾರಿತ್ರಿಕ ವಿಶ್ಲೇಷಣೆ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಚರಿತ್ರ ವಿಭಾಗಕ್ಕೆ ಸಾದರ ಪಡಿಸಿದ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಲಕ್ಷ್ಮಿ.ಜಿ.ಆರ್.**

ರಿ.ನಂ **KRSM/H-00237**

ಮಾರ್ಗದರ್ಶಕರು

**ಡಾ. ಬಿ.ಎಸ್. ಪುಟ್ಟಸ್ವಾಮಿ**

ಇತಿಹಾಸ ಸಹ ಪ್ರಾಧ್ಯಾಪಕರು

ವಿ.ವಿ.ಪುರಂ ಕಲೆ ಮತ್ತು ವಾಣಿಜ್ಯ ಪದವಿ ಕಾಲೇಜು

ಬೆಂಗಳೂರು-560 004.





**ಕರ್ನಾಟಕ ಸಂಘ (ರಿ.) ಮಂಡ್ಯ**

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಡ ವಿಶ್ವವಿದ್ಯಾಲಯ ಹಂಪಿಯಿಂದ ಮಾನತೆ ಪಡೆದಿದೆ)

**2019**

# ಇತಿಹಾಸ ಆಕರಗಳ ಸಂಗ್ರಹಕಾರ
# ಕರ್ನಲ್ ಮೆಕೆಂಝಿ–ಚಾರಿತ್ರಿಕ ವಿಶ್ಲೇಷಣೆ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ವಿಭಾಗಕ್ಕೆ ಸಾದರ ಪಡಿಸಿದ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ಲಕ್ಷ್ಮಿ.ಜಿ.ಆರ್.**

ರಿ.ನಂ **KRSM/H-00237**

ಮಾರ್ಗದರ್ಶಕರು

**ಡಾ. ಬಿ.ಎಸ್. ಪುಟ್ಟಸ್ವಾಮಿ**

ಇತಿಹಾಸ ಸಹ ಪ್ರಾಧ್ಯಾಪಕರು

ವಿ.ವಿ.ಪುರಂ ಕಲೆ ಮತ್ತು ವಾಣಿಜ್ಯ ಪದವಿ ಕಾಲೇಜು

ಬೆಂಗಳೂರು–560 004.





**ಕರ್ನಾಟಕ ಸಂಘ (ರಿ.) ಮಂಡ್ಯ**

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಮಾನ್ಯತೆ ಪಡೆದಿದೆ)

**2019**

# ಮಾರ್ಗದರ್ಶಕರ ದೃಢೀಕರಣ ಪತ್ರ

ಲಕ್ಷ್ಮಿ.ಜಿ.ಆರ್., ಇವರು ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ.), ಮಂಡ್ಯ (ಕನ್ನಡ ವಿಶ್ವವಿದ್ಯಾಲಯ ಹಂಪಿ ಇಂದ ಮಾನ್ಯತೆ ಪಡೆದಿದೆ), ಈ ಸಂಸ್ಥೆಯ ಮೂಲಕ ಇತಿಹಾಸ ಆಕರಗಳ ಸಂಗ್ರಹಕಾರ ಕರ್ನಲ್ ಮೆಕೆಂಝಿ–ಚಾರಿತ್ರಿಕ ವಿಶ್ಲೇಷಣೆ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಮಹಾಪ್ರಬಂಧವನ್ನು ಸಂಶೋಧಕರಾಗಿ ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಈ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಭಾಗಶಃವಾಗಲಿ ಅಥವಾ ಪೂರ್ಣವಾಗಲಿ ಯಾವ ವಿಶ್ವವಿದ್ಯಾಲಯಕ್ಕಾಗಲಿ ಇನ್ಯಾವುದೇ ಸಂಸ್ಥೆಗಾಗಲಿ, ಯಾವುದೇ ಪದವಿ, ಡಿಪ್ಲೊಮೊಗೆ ಸಲ್ಲಿಸಿರುವುದಿಲ್ಲವೆಂದು ಧೃಡೀಕರಿಸುತ್ತೇನೆ.

BS Putt

ದಿನಾಂಕ : 22/12/2019
ಸ್ಥಳ : ಮಂಡ್ಯ

(ಡಾ. ಬಿ.ಎಸ್.ಪುಟ್ಟಸ್ವಾಮಿ)
ಇತಿಹಾಸ ಸಹ ಪ್ರಾಧ್ಯಾಪಕರು
ವಿ.ವಿ. ಪುರಂ ಕಲಾ ಮತ್ತು ವಾಣಿಜ್ಯ ಪದವಿ ಕಾಲೇಜು
ಬೆಂಗಳೂರು – 560004

Dr. B.S. Puttaswamy. M.A., Ph.D.
Associate Professor & HOD.
Dept. of History, V.V. Puram Degree
College of Arts and Commerce,
K.R. Road, Bengaluru - 560 004.

# ಸಂಶೋಧಕರ ಪ್ರಮಾಣ ಪತ್ರ

ಇತಿಹಾಸ ಆಕರಗಳ ಸಂಗ್ರಹಕಾರ ಕರ್ನಲ್ ಮೆಕೆಂಝಿ– ಚಾರಿತ್ರಿಕ ವಿಶ್ಲೇಷಣೆ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಮಹಾಪ್ರಬಂಧವನ್ನು ಡಾ. ಬಿ.ಎಸ್.ಪುಟ್ಟಸ್ವಾಮಿ ಇತಿಹಾಸ ಸಹ ಪ್ರಾಧ್ಯಾಪಕರು, ವಿ.ವಿ.ಪುರಂ ಕಲಾ ಮತ್ತು ವಾಣಿಜ್ಯ ಪದವಿ ಕಾಲೇಜು, ಬೆಂಗಳೂರು–560004 ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ.), ಮಂಡ್ಯ (ಕನ್ನಡ ವಿಶ್ವವಿದ್ಯಾಲಯ ಹಂಪಿ ಇಂದ ಮಾನ್ಯತೆ ಪಡೆದಿದೆ), ಈ ಸಂಸ್ಥೆಯ ಮೂಲಕ ಪಿಎಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಈ ಮಹಾಪ್ರಬಂಧವು ಮೂಲವಾಗಿದ್ದು ಈ ಮೊದಲು ಭಾಗಶಃವಾಗಲಿ ಅಥವಾ ಪೂರ್ಣವಾಗಲಿ ಯಾವ ವಿಶ್ವವಿದ್ಯಾಲಯಕ್ಕಾಗಲಿ ಇನ್ಯಾವುದೇ ಸಂಸ್ಥೆಗಾಗಲಿ, ಯಾವುದೇ ಪದವಿ, ಡಿಪ್ಲೊಮೊಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 22/12/2019
ಸ್ಥಳ : ಮಂಡ್ಯ

ಲಕ್ಷ್ಮಿ.ಜಿ.ಆರ್.
ಸಂಶೋಧಕರು
ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
ಕರ್ನಾಟಕ ಸಂಘ (ರಿ.)
ಮಂಡ್ಯ

# ಪರಿವಿಡಿ

## ಅಧ್ಯಾಯ-ಒಂದು

# ಇತಿಹಾಸ ಆಕರಗಳ ಸಂಗ್ರಹಕಾರ ಕರ್ನಲ್ ಮೆಕೆಂಝಿ-ಚಾರಿತ್ರಿಕ ವಿಶ್ಲೇಷಣೆ

### ೧.೧ ಪ್ರಸ್ತಾವನೆ

ಜಗತ್ತಿನಲ್ಲಿಯೇ ಭಾರತವು ಸನಾತನ ಪರಂಪರೆಯನ್ನು ಹೊಂದಿದ ದೇಶವಾಗಿದೆ ಹಾಗೂ ಶತ ಶತಮಾನಗಳ ಇತಿಹಾಸವನ್ನು ಹೊಂದಿದೆ. ಭಾರತವು ವೇದಕಾಲೀನ ಸಂಸ್ಕೃತಿಯ ಕಾಲಮಾನದಿಂದಲೂ ಅವಿನಾಭಾವ ಮಾನವೀಯ ಮೌಲ್ಯಗಳನ್ನು ಬೆಸೆದುಕೊಂಡಿದ್ದು ಇದು ಭಾರತೀಯತೆಯ ಕುರುಹಾಗಿದೆ ಎಂಬುದು ಇತಿಹಾಸದಿಂದ ದಾಖಲಿತವಾದ ಸತ್ಯವಾಗಿದೆ. "ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೈಶ್ಚ ದಕ್ಷಿಣಂ ವರ್ಷಂ ತತ್ ಭಾರತಂ ನಾಮ ಭಾರತೀ ಯತ್ರ ಸಂತತಿ" ಎಂಬ ಸುಭಾಷಿತೋಕ್ತಿಯಂತೆ ಭಾರತ ಉಪಖಂಡದ ಅತ್ಯುನ್ನತ ಸಾಂಸ್ಕೃತಿಕ ಮೇರು ಶಿಖರವಾಗಿ ಬೆಳಗುತ್ತಿತ್ತು ಮತ್ತು ಮಾದರಿ ಸಂಸ್ಕೃತಿಯಾಗಿದ್ದಿತು ಎಂಬುದು ಸರ್ವ ವೇದ್ಯವಾದ ವಿಚಾರವಾಗಿದೆ. ಭಾರತದ ಸನಾತನ ಪರಂಪರೆ ಮತ್ತು ಇತಿಹಾಸವು ಅನೇಕ ವೈವಿಧ್ಯಮಯ ಮಜಲುಗಳನ್ನು ಹಾಗೂ ಅಂತಗರ್ಭಿತ ಆಯಾಮಗಳನ್ನು ಹೊಂದಿದ್ದು, ಭಾರತದ ಸಂಸ್ಕೃತಿಯು ಈ ಎಲ್ಲಾ ಕವಲುಗಳನ್ನು ಸಮೀಕರಿಸಿಕೊಂಡು ಕ್ರೋಡೀಕೃತವಾಗಿ ಅನಾವರಣಗೊಂಡಿದೆ. ಅಲ್ಲದೇ ಕಾಲ ಕಾಲಕ್ಕೆ ತತ್ಸಮಾನ ಸಮಾಜೋ-ಸಾಂಸ್ಕೃತಿಕ ಸಂಘರ್ಷಗಳನ್ನು ಒಳಗೊಂಡಂತೆ ಸಂಸ್ಕೃತಿಯ ತಾಯಿ ಬೇರುಗಳನ್ನು ಕಳೆದುಕೊಳ್ಳದೇ ದೇದೀಪ್ಯಮಾನವಾಗಿ ಪ್ರಕಾಶಿತಗೊಂಡಿದೆ.

ಆದರೆ ಇತಿಹಾಸದಲ್ಲಿ ದಾಖಲಾದ ಚಾರಿತ್ರಿಕ ಘಟನೆಗಳನ್ನು ಆಧರಿಸಿ ಹೇಳುವುದಾದರೆ ಭಾರತದ ಭೌಗೋಳಿಕ ನೆಲೆ ಮತ್ತು ಪ್ರದೇಶಗಳು ಅರಬ್ಬರು, ತುರ್ಕರು, ಗ್ರೀಕರು, ಪಾರ್ಥಿಯನ್ನರು, ಶಕರು, ಪರ್ಷಿಯನ್ನರು, ಮೊಗಲರ, ದಾಳಿಗೆ ಒಳಗಾಯಿತು. ತತ್ ಸಂಬಂಧದ ಸಾಂಸ್ಕೃತಿಕ ಆಕ್ರಮಣ ನಡೆದಿದ್ದು ಭಾರತದ ಸನಾತನ ಸಂಸ್ಕೃತಿಯು ಕಾಲ ಕಾಲಕ್ಕೆ ಘರ್ಷಣೆಗೆ ಒಳಗಾಗಿರುವುದು ಕಂಡು ಬರುತ್ತದೆ. ತದನಂತರ ಭಾರತಕ್ಕೆ ಯುರೋಪಿಯನ್ನರ ಆಗಮನವಾಯಿತು. ಕ್ರಮವಾಗಿ ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಬ್ರಿಟಿಷರು ಭಾರತದ ಪ್ರದೇಶದಲ್ಲಿ ವ್ಯಾಪಾರ ನೆಲೆಗಳನ್ನು ಸ್ಥಾಪಿಸಲು ಯಶಸ್ವಿಯಾದರು. ಅಲ್ಲದೆ ದೇಶೀಯ ರಾಜರೊಂದಿಗೆ ಕದನಕ್ಕೂ ಇಳಿದು ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು ಹಾಗೂ ಯುದ್ಧಗಳು,

ಒಪ್ಪಂದಗಳು, ಷರತ್ತುಗಳು, ಕಾನೂನುಗಳ ಮೂಲಕ ಇಡೀ ಭಾರತದ ಭೌಗೋಳಿಕ ಪ್ರದೇಶಗಳ ಮೇಲೆ ಅಧಿಕಾರವನ್ನು ಹಿಡಿತವನ್ನು ಸ್ಥಾಪಿಸಿದರು. ಇದರಿಂದ ಭಾರತವು ಆರ್ಥಿಕ ಮತ್ತು ಸಾಮಾಜಿಕ, ಧಾರ್ಮಿಕ ಶೋಷಣೆಗೆ ಒಳಗಾಯಿತು. ಭಾರತವನ್ನು ತಮ್ಮ ಸಾಮ್ರಾಜ್ಯಶಾಹಿ ಧೋರಣೆಗಳಿಗೆ ಬಳಸಿಕೊಂಡ ಬ್ರಿಟಿಷರು ಭಾರತದ ಮೇಲೆ ಮತ್ತಷ್ಟು ನಿಯಂತ್ರಣ ಸಾಧಿಸುವ ದೃಷ್ಟಿಯಿಂದ ಭಾರತೀಯತೆಯನ್ನು ಅಭ್ಯಸಿಸಲೇ ಬೇಕಾಯಿತು. ಭಾರತದ ಸಂಸ್ಕೃತಿಯಿಂದ ಆಕರ್ಷಿತರಾಗಿ ಅದನ್ನು ಬೌದ್ಧಿಕವಾಗಿ ಅಭ್ಯಸಿಸುವ ಮತ್ತು ಅದರ ಮೂಲಕ ಭಾರತವನ್ನು ಮತ್ತಷ್ಟು ಬಿಗಿಯಾಗಿ ಹಿಡಿದಿಟ್ಟುಕೊಳ್ಳುವ ಪ್ರಯತ್ನ ಮಾಡಿದರು. ಇದು ಅವರಿಗೆ ಆಡಳಿತತಾತ್ಮಕವಾಗಿ ಅನಿವಾರ್ಯವೂ ಮತ್ತು ರಾಜಕೀಯವಾಗಿ ಉಪಯುಕ್ತವೂ ಆಗಿದ್ದಿತು. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೭೬೫ ರ ನಂತರ ಭಾರತದ ಬಂಗಾಳ, ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯಗಳಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಮೇಲ್ವಿಚಾರಣೆ ಹೊಂದಿದ ಆಂಗ್ಲ ಆಡಳಿತ ವ್ಯವಸ್ಥೆಯು ಜಾರಿಗೆ ಬಂದಿತು.

ಭಾರತವನ್ನು ನಿರಂತರವಾಗಿ ತನ್ನ ಮುಷ್ಠಿಯಲ್ಲಿಟ್ಟುಕೊಳ್ಳಲು ಭಾರತದ ಭಾಷೆ ಭಾರತೀಯರ ಸಾಮಾಜಿಕ ನಿಲುವುಗಳು ಹಾಗೂ ಬೌದ್ಧಿಕ ಶಕ್ತಿಯ ಸಮತೋಲಿತ ಪ್ರತಿಬಿಂಬಗಳು ಅನಿವಾರ್ಯವಾದುದರಿಂದ ಭಾರತಕ್ಕೆ ಕಳುಹಿಸಲ್ಪಟ್ಟ ಅಧಿಕಾರಿಗಳೂ ಸಹ ಭಾರತೀಯತೆಯನ್ನು ಕುರಿತು ಪೂರ್ವಾಧ್ಯಯನ ಮಾಡಿ ಬಂದವರೇ ಆಗಿರುತ್ತಿದ್ದರು. ಅಲ್ಲದೆ ಇವರು ಭಾರತಕ್ಕೆ ಬಂದ ನಂತರ ಸ್ಥಳೀಯ ಸಂಸ್ಕೃತ ಪಂಡಿತರು ಮತ್ತು ವಿದ್ವಾಂಸರ ಸಹಾಯದಿಂದ ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಯನ್ನು ಕಲಿತು ಅದನ್ನು ಆಳವಾಗಿ ಅಭ್ಯಸಿಸಿ ಆ ಮೂಲಕ ಭಾರತೀಯ ಪರಂಪರೆಯ ಕೊಂಡಿಗಳನ್ನು ಅರಿಯುವ ನಿರಂತರ ಪ್ರಯತ್ನದಲ್ಲಿ ತೊಡಗಿಕೊಂಡರು.

ಸ್ಥಳೀಯ ಭಾಷೆಗಳನ್ನು ಕಲಿತು ಸ್ಥಳೀಯರೊಂದಿಗೆ ವ್ಯವಹರಿಸಲು ಅನುಕೂಲವಾಗುವಂತೆ ಭಾಷಾ ಜ್ಞಾನವನ್ನು ಪಡೆದುಕೊಂಡು, ಕಾಲ ಕ್ರಮೇಣ ಅಧ್ಯಯನಶೀಲರಾಗಿ ಸ್ಥಳೀಯ ಭಾಷೆಯಲ್ಲಿ ಆಡಳಿತ ವ್ಯವಹಾರಕ್ಕೆ ನೆರವು ನೀಡುವಂತಹ ಸಂಶೋಧನೆಗಳನ್ನು ಕೈಗೊಂಡು, ಪುಸ್ತಕಗಳನ್ನು ಪ್ರಕಟಿಸುತ್ತಾ, ಸ್ಥಳಿಯ ಇತಿಹಾಸದ ಲೇಖನ ಸಾಮಗ್ರಿಗಳನ್ನು ಪೂರಕವಾಗಿಟ್ಟುಕೊಂಡು, ಆಡಳಿತದಲ್ಲಿ ಕಾರ್ಯಪ್ರವೃತ್ತರಾದರು. ಭಾರತೀಯ ಸನಾತನತೆಯ ಸಾರವಾದ ವೇದೋಪನಿಷತ್ತುಗಳನ್ನು ಅನುವಾದಿಸಿದ ಜರ್ಮನಿಯ ಪ್ರಖ್ಯಾತ ಇತಿಹಾಸಕಾರನಾದ ಮ್ಯಾಕ್ಸ್ ಮುಲ್ಲರ್, ಭಾರತೀಯ ಭಾಷಾ ಪರಿವೀಕ್ಷಣೆ ಸಮೀಕ್ಷೆ ನಡೆಸಿದ ಜಾರ್ಜ್ ಗ್ರಿಯರ್‌ಸನ್,

ಉಪನಿಷತ್ತುಗಳನ್ನು ವ್ಯಾಖ್ಯಾನಿಸಿದ ಡ್ಯೆಸನ್, ವೈವಿಧ್ಯಮಯ ಭಾರತೀಯ ಕಲೆ ವಾಸ್ತುಶಿಲ್ಪವನ್ನು ವಿಮರ್ಶಿಸಿದ ಪರ್ಸಿ ಬ್ರೌನ್, ಕನ್ನಡದ ಪರಿಪೂರ್ಣ ನಿಘಂಟು ರಚಿಸಿದ ಫರ್ಡಿನೆಂಟ್ ಕಿಟೆಲ್, ಕನ್ನಡ ವ್ಯಾಕರಣ ಗ್ರಂಥವನ್ನು ರಚಿಸಿದ ಜಾನ್ ಮೆಕ್ಯಾರಲ್, ಶಾಸನ ತಜ್ಞರಾದ ಬಿ.ಎಲ್.ರೈಸ್ ಮುಂತಾದವರು ಭಾರತದ ಚರಿತ್ರೆಗೆ ನೀಡಿದ ಪ್ರಮುಖ ಕೊಡುಗೆಗಳಾಗಿವೆ. ಇದರಲ್ಲಿ ಕೈಫಿಯತ್ತುಗಳನ್ನು ಸಂಗ್ರಹಿಸುವ ಮೂಲಕ ಭಾರತದ ಮೌಖಿಕ ಇತಿಹಾಸಕ್ಕೆ ಕರ್ನಲ್ ಮೆಕೆಂಝಿ ಚರಿತ್ರೆಯ ಅಧ್ಯಯನಕ್ಕೆ ಕಾರಣೀಭೂತರಾಗಿದ್ದಾರೆ. ನಮ್ಮ ನಾಡಿನ ಇತಿಹಾಸ ರಚನೆಗೆ ಪೂರಕವಾದ ದಾಖಲೆಗಳನ್ನು ನೀಡಿದ ಒಬ್ಬ ಶ್ರೇಷ್ಠ ಸಂಶೋಧಕನಾಗಿ, ಸಂಗ್ರಹಕಾರನಾಗಿ, ಜೀವನ ಮತ್ತು ಸಾಧನೆಯನ್ನು ಅಧ್ಯಯನ ಮಾಡುವುದು ಚರಿತ್ರೆಯ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ನಾಡಿನ ಇತಿಹಾಸದಲ್ಲಿ ಆಸಕ್ತರಾಗಿರುವ ಪ್ರತಿಯೊಬ್ಬರಿಗೂ ಮುಖ್ಯವಾದ ಕರ್ತವ್ಯವೆಂದು ಹೇಳಬಹುದು. ಈ ಸಂಶೋಧನೆಯಲ್ಲಿ ಕರ್ನಲ್ ಮೆಕೆಂಝಿಯವರ ಸಂಗ್ರಹಗಳನ್ನು ಕುರಿತು ಚಾರಿತ್ರಿಕವಾಗಿ ವಿಶ್ಲೇಷಣೆ ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಕರ್ನಲ್ ಮೆಕೆಂಝಿ ಅವರು ಸಂಗ್ರಹಿಸಿದ ಕೈಫಿಯತ್ತುಗಳನ್ನು ಅನೇಕ ವಿದ್ವಾಂಸರು ಸಂಪಾದಿಸಿ ಪ್ರಕಟಿಸಿದರೂ, ಈ ಆಂಗ್ಲ ಅಧಿಕಾರಿಯ ಇತಿಹಾಸ ಸೇವೆಯನ್ನು ಇದುವರೆಗೂ ಯಾರೂ ಸಂಪೂರ್ಣವಾಗಿ ದಾಖಲಿಸಲು ಪ್ರಯತ್ನಿಸಲಿಲ್ಲ. ಹಾಗೆಯೇ ಅವರು ಸಂಗ್ರಹಿಸಿದ ವಿವಿಧ ಕೈಫಿಯತ್ತುಗಳ ಸತ್ಯಾಸತ್ಯತೆಯನ್ನು ಓರೆಗಲ್ಲಿಗೆ ಹಚ್ಚಲು ಪ್ರಯತ್ನಿಸಲಿಲ್ಲ. ಈ ಸಂಶೋಧನೆಯ ಅಧ್ಯಯನದಲ್ಲಿ ಇತಿಹಾಸ ಆಕರಗಳ ಸಂಗ್ರಹಗಳಲ್ಲಿ ಕರ್ನಲ್ ಮೆಝಿಂಝಿಯರವರ ಪಾತ್ರವನ್ನು ಚಾರಿತ್ರಿಕವಾಗಿ ವಿಶ್ಲೇಷಣೆ ಮಾಡಲಾಗಿದೆ.

ಕರ್ನಲ್ ಮೆಕೆಂಝಿ ಅವರ ಸಂಗ್ರಹದಲ್ಲಿರುವ ಶಾಸನಗಳು, ಹಸ್ತಪ್ರತಿಗಳು, ಕಡತಗಳು, ತಾಳೆಗರಿಗಳು, ಬಖೈರುಗಳು, ನಾಣ್ಯಗಳು, ನಕ್ಷೆಗಳು ಇವುಗಳನ್ನು ಕುರಿತು ಸಮಗ್ರ ಅಧ್ಯಯನವು ನಡೆದಿಲ್ಲ. ಕೆಲವು ಬಾರಿ ಈ ಆಕರಗಳನ್ನು ನಿರ್ಲಕ್ಷ್ಯ ಮಾಡಲಾಗಿದೆ. ಇತಿಹಾಸ ರಚನೆಯಲ್ಲಿ ತೊಡಗಿಕೊಳ್ಳುವವರು ಯಾವ ಆಕರಗಳನ್ನು ಕಡೆಗಣಿಸಬಾರದೆಂಬುದನ್ನು ಈ ಸಂಶೋಧನೆಯ ಅಧ್ಯಯನದಿಂದ ನಿರೂಪಿಸಲಾಗಿದೆ.

ಈ ಮಹಾ ಪ್ರಬಂಧವು ಕರ್ನಲ್ ಮೆಕೆಂಝಿರವರ ಒಟ್ಟಾರೆ ಇತಿಹಾಸ ಸಂಶೋಧನಾ ಕಾರ್ಯದ ಕೊಡುಗೆಯನ್ನು ಕುರಿತು ಒಂದು ವಿಮರ್ಶಾತ್ಮಕವಾದ

ಅಧ್ಯಯನ ಮಾಡಲಾಗಿದೆ ಹಾಗೂ ಸಮಕಾಲೀನ ಇತಿಹಾಸ ಸಂಶೋಧನೆಯಲ್ಲಿ ತೊಡಗಿಕೊಳ್ಳುವವರಿಗೆ ಕರ್ನಲ್ ಮೆಕೆಂಝಿ ಅವರು ಇತಿಹಾಸಕ್ಕೆ ನೀಡಿದ ಕೊಡುಗೆಗಳನ್ನು ಈ ಸಂಶೋಧನೆ ಮೂಲಕ ನಿರೂಪಿಸಲಾಗಿದೆ.

ಭಾರತೀಯರಲ್ಲಿ ಇತಿಹಾಸ ಚಾರಿತ್ರಿಕ ದಾಖಲೆಗಳ ಬಗ್ಗೆ ಇದ್ದ ಅಸಡ್ಡೆ, ಅವಿದ್ಯೆ, ನಿರ್ಲಕ್ಷತೆ ಅಜ್ಞಾನವನ್ನು ತೊಲಗಿಸಿ ಅವುಗಳ ಮಹತ್ವವನ್ನು ತೋರಿಸಿಕೊಟ್ಟ ಕರ್ನಲ್ ಮೆಕೆಂಝಿಯ ಕಾರ್ಯಕ್ಷಮತೆ ಮತ್ತು ಸಾಧನೆಯನ್ನು ಈ ಸಂಶೋಧನೆಯಿಂದ ಅರಿಯಲಾಗಿದೆ.

ಪ್ರಸ್ತುತ ಸಂಶೋಧನೆಯ ಮುಖ್ಯ ಉದ್ದೇಶ ಭಾರತದಲ್ಲಿನ ಅಮೂಲ್ಯ ಚಾರಿತ್ರಿಕ ದಾಖಲೆಗಳನ್ನು ಆಂಗ್ಲ ಅಧಿಕಾರಿಯಾದ ಕರ್ನಲ್ ಮೆಕೆಂಝಿ ಸಂಗ್ರಹಿಸಿ ಸಂರಕ್ಷಿಸಿ ಅವುಗಳನ್ನು ಮುಂದಿನ ಪೀಳಿಗೆಗೆ ಸಂಶೋಧನೆಗೆ ಅವಕಾಶ ಮಾಡಿಕೊಟ್ಟರು ಎಂಬುದನ್ನು ಸಂಶೋಧನೆಯಿಂದ ಚಾರಿತ್ರಿಕವಾಗಿ ನಿರೂಪಿಸಲಾಗಿದೆ.

ಭಾರತೀಯರು ನಿರ್ಲಕ್ಷಿಸಿದ್ದ ತಮ್ಮ ದೇಶದ ಇತಿಹಾಸವನ್ನು ಪುನರುಜ್ಜೀವನ ಗೊಳಿಸಲು ಹಾಗೂ ಪುನರ್ ನಿರ್ಮಿಸಲು, ಅಧ್ಯಯನ ಮಾಡಲು ಕರ್ನಲ್ ಮೆಕೆಂಝಿಯವರು ಮಾಡಿದ ಕೈಫಿಯತ್ತುಗಳು ಮತ್ತು ಇತರೆ ಸಂಗ್ರಹಗಳನ್ನು ಕ್ರಮಬದ್ಧವಾಗಿ ಸಂಶೋಧನೆಯ ಮೂಲಕ ಅವಲೋಕಿಸಲಾಗಿದೆ.

೧೮ನೇ ಶತಮಾನದಲ್ಲಿ ವಸಹತುಶಾಹಿ ಆಳ್ವಿಕೆಯಿಂದ ಭಾರತೀಯರ ಬಗ್ಗೆ ಅಸಹನೆಯನ್ನು ತೋರುತ್ತಿದ್ದ ಬ್ರಿಟಿಷ್ ಅಧಿಕಾರಿಗಳು, ನೌಕರ ವರ್ಗ ದ್ವೇಷ ತಾತ್ಸಾರಕ್ಕೆ ಪ್ರತಿಯಾಗಿ ಕರ್ನಲ್ ಮೆಕೆಂಝಿ ಭಾರತ ಸಂಸ್ಕೃತಿ, ಪರಂಪರೆ, ಚರಿತ್ರೆ ಬಗ್ಗೆ ಆಸಕ್ತಿ ತೋರಿ ದಾಖಲೆಗಳನ್ನು ಸಂಗ್ರಹಿಸಿ ಅವುಗಳಿಗೆ ಸ್ಪಷ್ಟ ರೂಪವನ್ನು ನೀಡಿದರು. ಇದನ್ನು ಈ ಸಂಶೋಧನೆಯಲ್ಲಿ ವಸ್ತುನಿಷ್ಠವಾಗಿ ದಾಖಲಿಸಲಾಗಿದೆ.

ಕರ್ನಲ್ ಮೆಕೆಂಝಿ ಅವರ ಸಂಗ್ರಹದಲ್ಲಿರುವ ಶಾಸನಗಳು, ನಾಣ್ಯಗಳು, ನಕ್ಷೆಗಳು, ಬಖೈರುಗಳು, ಕಡತಗಳು, ಹಸ್ತಪ್ರತಿಗಳು, ಸ್ಥಳನಾಮಗಳು, ಚಿತ್ರಗಳು, ಪ್ರಾಚ್ಯ ವಸ್ತುಗಳು ಪ್ರಮುಖವಾಗಿವೆ. ಇವುಗಳನ್ನು ಕುರಿತು ಸಮಗ್ರ ಅಧ್ಯಯನವು ನಡೆದಿಲ್ಲ. ಇವುಗಳನ್ನು ಕಾಲಾನುಕ್ರಮವಾಗಿ ಅಧ್ಯಯನದ ಮೂಲಕ ಅನಾವರಣಗೊಳಿಸಲಾಗಿದೆ.

ಇತಿಹಾಸವು ಮಾನವನ ಉಗಮ ಮತ್ತು ವಿಕಾಸದ ಬಗೆಗೆ ತಿಳುವಳಿಕೆ ನೀಡುವುದರ ಜೊತೆಗೆ ನಮ್ಮ ಪ್ರಾಚೀನ ಪರಂಪರೆಯ ಮೇಲೂ ಬೆಳಕು ಚೆಲ್ಲುತ್ತದೆ.

ಒಂದು ಸಮಾಜದ ಸರ್ವತೋಮುಖವಾದ ಅಭಿವೃದ್ಧಿಯ ಒಟ್ಟು ಚಿತ್ರಣವನ್ನು ನೀಡುವ ಐತಿಹಾಸಿಕ ಜ್ಞಾನ ಮಾನವ ಜ್ಞಾನದ ಪೂರ್ಣತೆಗೆ ಅವಶ್ಯಕವಾದುದು. ಈ ಕಾರಣಗಳಿಂದ ಕರ್ನಲ್ ಮೆಕೆಂಝಿ ಸಂಗ್ರಹದ ಅಧ್ಯಯನವು ಮಹತ್ವವನ್ನು ಪಡೆಯುತ್ತದೆ.

ಇಂತಹ ಮಹಾನ್ ಸಂಶೋಧಕನ ಬಗ್ಗೆ ಅವನು ಸಂಗ್ರಹಿಸಿದ ಆಕರಗಳ ಬಗ್ಗೆ, ಹಸ್ತಪ್ರತಿಗಳು, ಶಾಸನಗಳು, ನಾಣ್ಯಗಳು, ಬಖೈರುಗಳು, ಕಡತಗಳು, ಸ್ಥಳನಾಮಗಳು, ಸ್ಮಾರಕಗಳ ಬಗ್ಗೆ ಸಂಶೋಧನೆಯನ್ನು ಕೈಗೊಳ್ಳದಿರುವುದು ದೃರದೃಷ್ಟಕರವಾದುದು. ಈ ಕಾರಣಕ್ಕಾಗಿ "ಇತಿಹಾಸ ಆಕರಗಳ ಸಂಗ್ರಹಕಾರ ಕರ್ನಲ್ ಮೆಕೆಂಝಿ-ಚಾರಿತ್ರಿಕ ವಿಶ್ಲೇಷಣೆ" ಎಂಬ ವಿಷಯದ ಮೇಲೆ ಸಂಶೋಧನೆಯನ್ನು ಮಾಡುವ ಉದ್ದೇಶವನ್ನು ಈ ಸಂಶೋಧನೆ ಹೊಂದಿದೆ.

ನಮ್ಮ ಇತಿಹಾಸ ಅಧ್ಯಯನ ಕ್ರಮವು ಚಾರಿತ್ರಿಕ ಕಾಲಘಟ್ಟದ ಸರಳ ರೇಖಾತ್ಮಕ ನೆಲೆಯಲ್ಲಿ ನಡೆಯಿತೇ ಹೊರತು, ಆ ಕಾಲದ ಇತಿಹಾಸದ ಅಧ್ಯಯನದ ಪರಿಕ್ರಮಗಳ ಹಿಂದಿನ ಮನುಷ್ಯನ ಹೆಜ್ಜೆ ಗುರುತುಗಳನ್ನೇ ಹುಡುಕಿ, ಜೀವಸ್ಥೆ ನೆಲೆಗಳನ್ನು ಅಧ್ಯಯನ ಮಾಡಿ ಹೈದರ್ ಮತ್ತು ಟಿಪ್ಪುಸುಲ್ತಾನರ ಕಾಲದ ಇತಿಹಾಸ ರೂಪುಗೊಂಡ ವಿಧಾನಗಳನ್ನೇ ಕೈಫಿಯತ್ತುಗಳ ಮೂಲಕ ತಿಳಿಸುವುದೇ ಈ ಅಧ್ಯಯನ ಉದ್ದೇಶವಾಗಿದೆ.

ಇಂತಹ ಒಬ್ಬ ಅದ್ವಿತೀಯ ಸಂಶೋಧಕ ಸಂಗ್ರಹಕಾರನ ಜೀವನ ಮತ್ತು ಸಾಧನೆಯನ್ನು ಪರಿಶೋಧಿಸಿ ಆತನ ಕೊಡುಗೆಯನ್ನು ವಿಶ್ಲೇಷಿಸುವುದು ಪ್ರಸ್ತುತ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

## ೧.೩ ಅಧ್ಯಯನದ ಮಹತ್ವ

ಭಾರತದ ಇತಿಹಾಸ ರಚನಾಶಾಸ್ತ್ರದಲ್ಲಿ ಕರ್ನಲ್ ಮೆಕೆಂಝಿಗೆ ಒಂದು ಮಹತ್ವದ ಸ್ಥಾನವಿದೆ. ಆತನು ಸಂಗ್ರಹಿಸಿದ ಅಪಾರ ಸಂಖ್ಯೆಯ ಕೈಫಿಯತ್ತುಗಳು ಇತಿಹಾಸ ರಚನೆಗೆ ಅಮೂಲ್ಯವಾದ ಆಧಾರಗಳಾಗಿವೆ. ೧೯ನೆಯ ಶತಮಾನದಲ್ಲಿ ಈತ ಭಾರತದ ಅನೇಕ ಭಾಗಗಳಲ್ಲಿ ಸಂಚರಿಸಿ ಸ್ಥಳೀಯ ಇತಿಹಾಸಕ್ಕೆ ಸಂಬಂಧಿಸಿದ ದಾಖಲೆಗಳು ಸ್ಥಳನಾಮಗಳು, ಪುರಾವೆಗಳು, ಕಡತಗಳು ಇತ್ಯಾದಿಗಳನ್ನು ಸಂಗ್ರಹಿಸಲು ಪ್ರಾರಂಭಿಸಿದಾಗ ಇತಿಹಾಸ ರಚನೆಯಲ್ಲಿ ಒಂದು ಹೊಸ ಯುಗ ಆರಂಭವಾಯಿತು. ಕರ್ನಲ್ ಮೆಕೆಂಝಿಯ ಸಂಗ್ರಹ ಎಷ್ಟು ಉಪಯುಕ್ತವೋ ಅಷ್ಟೆ ಸಮಸ್ಯಾತ್ಮಕವಾದುದು.

ಅದನ್ನು ವ್ಯಾಖ್ಯಾನಿಸುವುದು ಸುಲಭದ ಕಾರ್ಯವಲ್ಲ, ಅದೊಂದು ಕಠಿಣ ಸವಾಲು. ೧೮ನೇ ಶತಮಾನದ ಭಾಷೆ, ಆಗ ಬಳಕೆಯಲ್ಲಿದ್ದ ರೆವಿನ್ಯೂ ಪರಿಭಾಷಿಕ ಶಬ್ದಗಳನ್ನು ಅರಿತು ವ್ಯಾಖ್ಯಾನಿಸುವುದು ಬಹು ಕಷ್ಟಕರವಾದ ಕೆಲಸವೇ ಸರಿ.

ರೆ.ಫರ್ಡಿನೆಂಟ್ ಕಿಟೆಲ್ ರೆ.ಮೊಗ್ಲಿಂಗ್, ಫ್ಲೀಟ್, ಹಡ್ಸನ್, ಮೆರ್ಕೆಲ್, ಸಿ.ಪಿ.ಬ್ರೌನ್ ಮುಂತಾದವರು ದಕ್ಷಿಣ ಭಾರತದಲ್ಲಿ ಜನಜೀವನ ಆರ್ಥಿಕ ಇತಿಹಾಸ ಕುರಿತು ಹಲವಾರು ಗ್ರಂಥಗಳನ್ನು ರಚಿಸಿದರು. ವ್ಯಾಕರಣ, ಭಾಷಾಶಾಸ್ತ್ರ, ಗ್ರಂಥ ಸಂಪಾದನೆಯಂತಹ ಶಾಸ್ತ್ರೀಯ ವಿಷಯಗಳಲ್ಲಿಯೂ ಪಾಶ್ಚಿಮಾತ್ಯರು ಕೆಲವು ಕ್ಷೇತ್ರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಇವರ ಸಾಲಿನಲ್ಲಿ ಕೈಫಿಯತ್ತುಗಳನ್ನು ಸಂಗ್ರಹಿಸಿ, ಅಧ್ಯಯನ ಮಾಡಿ, ಭಾರತ ಚರಿತ್ರೆಗೆ ಕರ್ನಲ್ ಮೆಕೆಂಝಿ ನೀಡಿದ ಕೊಡುಗೆಯನ್ನು ಈ ಸಂಶೋಧನೆಯ ಮೂಲಕ ಅಧ್ಯಯನ ಮಾಡಿದ್ದು ಮಹತ್ವವನ್ನು ಪಡೆದುಕೊಂಡಿದೆ.

ವಿನಾಶದ ಅಂಚಿನಲ್ಲಿದ್ದ ಅಪಾರ ಪ್ರಮಾಣದ ವಸ್ತುಗಳ – ದಾಖಲೆಗಳು, ಗ್ರಂಥಗಳು, ನಾಣ್ಯಗಳು, ವಿಗ್ರಹಗಳು, ಅಮೂಲ್ಯ ಕೃತಿ, ಹಸ್ತಪ್ರತಿಗಳು, ಕೈಫಿಯತ್ತುಗಳು, ಬಖೈರುಗಳು, ಕಡತಗಳು ಇತ್ಯಾದಿಗಳನ್ನು ಸಂರಕ್ಷಿಸಿದ ಮಾತ್ರವಲ್ಲದೆ ಅವುಗಳ ಮಹತ್ವವನ್ನು ಭಾರತೀಯರು ಹಾಗೂ ಆಳರಸರು ಅರಿತುಕೊಳ್ಳುವಂತೆ ಮಾಡಿದುದು ಕರ್ನಲ್ ಮೆಕೆಂಝಿಯ ಸಾಧನೆಯಾಗಿದ್ದು, ಹೀಗಾಗಿ ಇದು ಅಧ್ಯಯನದ ಮಹತ್ವವಾಗಿದೆ.

ಇತಿಹಾಸದ ಆಧಾರಗಳನ್ನು ನಿರ್ಲಕ್ಷಿಸಿದ್ದ ಭಾರತೀಯರಿಗೆ ಅವರು ಐತಿಹಾಸಿಕ ಆಧಾರಗಳನ್ನು ಸಂಗ್ರಹಿಸಿ ಅವುಗಳ ಮಹತ್ವವನ್ನು ಸಕಾಲಿಕವಾಗಿ ತಿಳಿಸಿಕೊಟ್ಟವರು ಕರ್ನಲ್ ಮೆಕೆಂಝಿ. ಐತಿಹಾಸಿಕ ಪ್ರಜ್ಞೆಯ ಕೊರತೆಯಿಂದ ವಿನಾಶದ ಅಂಚಿನಲ್ಲಿದ್ದ ಹಲವಾರು ಪ್ರಾಥಮಿಕ, ಐತಿಹಾಸಿಕ ಮತ್ತು ಭಾರತೀಯರಿಂದ ನಿರ್ಲಕ್ಷಿತವಾಗಿದ್ದ ಉಪಯುಕ್ತ ಆಧಾರಗಳನ್ನು ಆಮೂಲಾಗ್ರವಾಗಿ ಸಂಗ್ರಹಿಸಿ ಕನ್ನಡ ನಾಡಿಗೆ ಮಾತ್ರವಲ್ಲದೇ ದಕ್ಷಿಣ ಭಾರತದ ಇತಿಹಾಸ ರಚನೆಗೆ ಒಂದು ಹೊಸ ಯುಗವನ್ನು ಪ್ರಾರಂಭಿಸಿದ್ದುದು ಮಹತ್ವವಾಗಿದೆ.

ಕರ್ನಲ್ ಮೆಕೆಂಝಿ ಅವರ ಸಂಗ್ರಹ ಕಾರ್ಯಗಳಲ್ಲಿ ಇತಿಹಾಸದ ಆಕರಗಳನ್ನು ಸಂಗ್ರಹಿಸುವ, ಸಂಪಾದಿಸುವ ಮತ್ತು ಸಂರಕ್ಷಿಸುವ ಗುಣವು ಭಾರತದಲ್ಲಿ ಪುರಾತತ್ವಜ್ಞರ ಒಂದು ಸಮೂಹವೇ ಸೃಷ್ಟಿಯಾಗಲು ಮೂಲ ಪ್ರೇರಣೆಯಾಗಿದ್ದನ್ನು ಮಹತ್ವ ಎಂದು ಹೇಳಬಹುದು

ಕರ್ನಲ್ ಮೆಕೆಂಝಿ ಭಾರತದಲ್ಲಿ ಪುರಾತನ ನಾಣ್ಯಗಳ ಸಂಗ್ರಹ, ಶಿಲಾಯುಧಗಳ ಸಂಗ್ರಹ, ಪ್ರಾಚೀನ ಅವಶೇಷಗಳ ಸಂಗ್ರಹ, ಪ್ರಾಚ್ಯ ವಸ್ತುಗಳ ಸಂಗ್ರಹ ಇವೇ ಮೊದಲಾದ ಕಾರ್ಯದಲ್ಲಿ ಸಕಾರಾತ್ಮವಾಗಿ ತೊಡಗಿಕೊಂಡಿದ್ದುದು ಈ ಎಲ್ಲಾ ಸಂಶೋಧನೆಗೆ ಒಂದು ಕಾರ್ಯಪಡೆ ಸೃಷ್ಟಿಯಾಯಿತು ಇದು ಅಧ್ಯಯನದ ಮಹತ್ವ ಎಂದು ಹೇಳಬಹುದು.

ಭಾರತದ ಇತಿಹಾಸವನ್ನು ಅರಿಯುವ, ಅದರ ಪರಂಪರಾನುಗತ ಆಳ ಅಧ್ಯಯನದಲ್ಲಿ ತೊಡಗಿಕೊಳ್ಳುವ ಸಂಕಲ್ಪಿತ ಮನಸ್ಸುಗಳನ್ನು ಹೊಂದಿದ ಯುವ ಸಮೂಹವನ್ನು ಸೃಷ್ಟಿಸಲು ಕರ್ನಲ್ ಮೆಕೆಂಝಿಯವರ ಸಂಗ್ರಹದ ದಾಖಲೆಗಳ ಕಾರ್ಯ ಪ್ರಭಾವ ಬೀರಿತು. ಅಲ್ಲದೆ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಲು ಪ್ರೇರಣೆ ನೀಡಿದ್ದು ಮಹತ್ವ ಎಂದು ಹೇಳಬಹುದು.

## ೧.೪ ಅಧ್ಯಯನದ ವ್ಯಾಪ್ತಿ

೧೮ನೇ ಶತಮಾನದ ಒಬ್ಬ ಬ್ರಿಟೀಷ್ ಅಧಿಕಾರಿಯಾಗಿ ಕರ್ನಲ್ ಮೆಕೆಂಝಿಯ ಜೀವನದ ವಿಶಿಷ್ಟ ಸಾಧನೆಯ ವಸ್ತುನಿಷ್ಠ ಅಧ್ಯಯನವಾಗಿರುತ್ತದೆ. ಪ್ರಸ್ತುತ ಸಂಶೋಧನೆಯಲ್ಲಿ ಕರ್ನಲ್ ಮೆಕೆಂಝಿಯ ಜೀವನವನ್ನೂ ಸಂಕ್ಷಿಪ್ತವಾಗಿ ವಿಶ್ಲೇಷಿಸಿ ಆತ ಭಾರತದಲ್ಲಿ ಜೀವಿಸಿದ್ದ ೪೦ ವರ್ಷಗಳ ಅವಧಿಯಲ್ಲಿ ಕೈಗೊಂಡ ಕಾರ್ಯ ಅವುಗಳ ಐತಿಹಾಸಿಕ ಮಹತ್ವವು ಅಧ್ಯಯನ ವ್ಯಾಪ್ತಿಯಾಗಿದೆ. ಈ ಸಂಶೋಧನೆಯ ವ್ಯಾಪ್ತಿಯಲ್ಲಿ ಈ ಅವಧಿಯಲ್ಲಿ ನಡೆದ ರಾಜಕೀಯ ವಿದ್ಯಮಾನಗಳನ್ನು ಅಂದಿನ ಕಾಲದ ಪ್ರಮುಖ ರಾಜಕಾರಣಿಗಳು ಅಧಿಕಾರಿಗಳ ಜೀವನ ವಿವರಗಳನ್ನು ಇಲ್ಲಿ ವಿವರಿಸಲಾಗಿಲ್ಲ. ಈ ಸಂಶೋಧನೆಯ ವ್ಯಾಪ್ತಿ ಕರ್ನಲ್ ಮೆಕೆಂಝಿ ಭಾರತದ ಇತಿಹಾಸವನ್ನು ಅತ್ಯಂತ ಆಸಕ್ತಿಯಿಂದ ಅಧ್ಯಯನ ಮಾಡಿ ಅದಕ್ಕೆ ಸಂಬಂಧಿಸಿದ ಐತಿಹಾಸಿಕ ಉಪಯುಕ್ತ ದಾಖಲೆಗಳನ್ನು, ವಸ್ತುಗಳನ್ನು ಸಂಗ್ರಹಿಸಿ ಮುಂದಿನ ಪೀಳಿಗೆಗೆ ಆತ ಬಿಟ್ಟು ಹೋದ ಅಂಶವನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ. ಕರ್ನಲ್ ಮೆಕೆಂಝಿಯ ಕಛೇರಿಯ ಆಫಿಷಿಯಲ್ ಚಟುವಟಿಕೆಗಳನ್ನು ಹಾಗೂ ಆತ ನಿರ್ವಹಿಸಿದ ವಿವಿಧ ಹುದ್ದೆಗಳನ್ನು ಹೆಚ್ಚಾಗಿ ಪ್ರಸ್ತಾಪಿಸಲಾಗಿಲ್ಲ. ಆತ ತನ್ನ ೪೦ ವರ್ಷಗಳ ಕಾಲಾವಧಿಯಲ್ಲಿ ಅನುಸರಿಸಿದ ಕಾರ್ಯವಿಧಾನವನ್ನು ಉದಾಹರಣೆಗಳನ್ನು ವಿವರಿಸಲಾಗಿದೆ. ಆಧುನಿಕ ಸೌಲಭ್ಯಗಳು ಸಂಶೋಧನಾ ಉಪಕರಣಗಳು ಸಿಗದ ಅವಧಿಯಲ್ಲಿ ಕರ್ನಲ್ ಮೆಕೆಂಝಿ ಬಹಳ ಶ್ರಮಪಟ್ಟು ಸ್ವಂತ ಆಸಕ್ತಿಯಿಂದ ಹಳ್ಳಿಯಿಂದ ಹಳ್ಳಿಗೆ ಬೆಟ್ಟ, ಗುಡ್ಡ, ಕಾಡು, ನದಿ,

ಬಯಲುಗಳೆನ್ನದೆ ಸಂಚಾರ ಕೈಗೊಂಡು ಸ್ವಾರಸ್ಯಕರವಾದ ದಾಖಲೆಗಳನ್ನು ಹೆಚ್ಚು ಹೆಚ್ಚು ಸಂಗ್ರಹಿಸುತ್ತ ಹೋದುದು ನಮ್ಮ ಭಾರತ ಚರಿತ್ರೆಯ ಬೆಳವಣಿಗೆಗೆ ಪೂರಕವಾಗಿದೆ ಎಂಬುದು ಸಂಶೋಧನೆ ವ್ಯಾಪ್ತಿ ಒಳಗೊಂಡಿದೆ.

ಪ್ರಸ್ತುತ ಅಧ್ಯಯನವು ಒಂದು ಬೌದ್ಧಿಕ ಎಕ್ಸ್‌ಸೈನ್ ಆಗಿದ್ದು ಆಡಳಿತಾತ್ಮಕ, ರಾಜಕೀಯ ವ್ಯವಹಾರಗಳನ್ನು ಒಳಗೊಂಡಿರುವುದಿಲ್ಲ. ಹಾಗೆಯೇ ೧೮ನೇ ಶತಮಾನದಲ್ಲಿ ನಡೆದ ಈಸ್ಟ್ ಇಂಡಿಯಾ ಕಂಪನಿ ನೀತಿ ನಿಯಮಗಳು, ಸಾಧನೆಗಳು, ಬೆಳವಣಿಗೆಗಳನ್ನು ವಿವರಿಸಲು ತೊಡಗಿಸಿಕೊಂಡಿಲ್ಲ. ಮೆಕೆಂಝಿಯ ವೈಯಕ್ತಿಕ ಜೀವನದ ಪ್ರತಿಯೊಂದು ಸೂಕ್ಷ್ಮ ವಿವರಗಳನ್ನು ಕೂಡ ಅಧ್ಯಯನ ಮಾಡಲು ಇಲ್ಲಿ ಪ್ರಯತ್ನವನ್ನು ಕೈಗೊಂಡಿರುವುದಿಲ್ಲ. ಇದು ಕೇವಲ ಒಂದು ಸಾಂಸ್ಕೃತಿಕ ಕ್ಷೇತ್ರಕ್ಕೆ ಮೀಸಲಾದ ಸಂಶೋಧನಾ ಪ್ರಬಂಧವಾಗಿದ್ದು ಸೀಮಿತ ಉದ್ದೇಶ ಹಾಗೂ ವ್ಯಾಪ್ತಿಯನ್ನು ಹೊಂದಿರುತ್ತದೆ. ವೈವಿಧ್ಯಮಯದ ದಾಖಲೆಗಳ ಸಂಗ್ರಹ ಅವುಗಳ ಚಾರಿತ್ರಿಕ ಮಹತ್ವದ ವಿಶ್ಲೇಷಣೆಯಷ್ಟೇ ಈ ಸಂಪ್ರಬಂಧದ ಉದ್ದೇಶವಾಗಿದ್ದು ರಾಜಕೀಯ ಆಡಳಿತಾತ್ಮಕ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿಲ್ಲ.

ಪ್ರಸ್ತುತ ಈ ಸಂಶೋಧನೆಯು ತನ್ನ ಅಧ್ಯಯನ ವಿಷಯಗಳ ವಿವಿಧ ಮುಖಗಳನ್ನು ಒಳಗೊಂಡಿದೆ. ಭಾರತ, ಕರ್ನಾಟಕ ಮತ್ತು ದಕ್ಷಿಣ ಭಾರತದ ಸುತ್ತಮುತ್ತಲಿನ ಪ್ರದೇಶದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಚಿತ್ರಣವನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

ಈ ಅಧ್ಯಯನದ ಕಾಲ ವ್ಯಾಪ್ತಿಯು ಸೀಮಿತವಾದ ಕಾಲಾವಧಿಯನ್ನು ಒಳಗೊಂಡಿದೆ. ಈ ಅವಧಿಯಲ್ಲಿ ಕಂಡುಬರುವ ವಿವಿಧ ಆಯಾಮಗಳ ಬಗ್ಗೆ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ಸಾಂಸ್ಕೃತಿ ವಿಷಯಗಳು ಕೈಫಿಯತ್ತುಗಳಲ್ಲಿ ಕನ್ನಡ ನಾಡಿನ ಚರಿತ್ರೆ, ಕೈಫಿಯತ್ತುಗಳ ಮೂಲಕ ಭಾರತದ ಮತ್ತು ಕನ್ನಡ ನಾಡಿನ ಚರಿತ್ರೆಯ ರಚನೆ ಮತ್ತು ಅಧ್ಯಯನಕ್ಕೆ ಒಳಪಡುವ ಎಲ್ಲಾ ವಿಷಯಗಳು ಹಾಗೂ ವಸ್ತುಗಳನ್ನು ಅಧ್ಯಯನ ಮಾಡಲಾಗಿದೆ.

### ೧.೫ ಅಧ್ಯಯನ ವಿಧಿ-ವಿಧಾನಗಳು

ಈ ಸಂಶೋಧನೆಯಲ್ಲಿ ಕರ್ನಲ್ ಮೆಕೆಂಝಿ ಅವರು ಸಂಗ್ರಹಿಸಿದ ಐತಿಹಾಸಿಕ ವಸ್ತುಗಳನ್ನು, ಪತ್ರಗಳನ್ನು, ಇತಿಹಾಸದ ಆಕರಗಳನ್ನು, ಮೌಖಿಕ ಆಧಾರಗಳನ್ನು,

ಸಂಗ್ರಹಿತ ದಾಖಲೆಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಕ್ಕಾಗಿ ಕರ್ನಲ್ ಮೆಕೆಂಝಿ ಅವರನ್ನು ಕುರಿತು ಈವರೆಗೆ ಪ್ರಕಟವಾಗಿರುವ ಸಂಗ್ರಹಗಳನ್ನು, ಗ್ರಂಥಗಳನ್ನು ಪರಿಶೀಲಿಸಲಾಗಿದೆ. ಮೆಕೆಂಝಿ ಅವರ ಸಂಗ್ರಹದ ಕೈಫಿಯತ್ತುಗಳಲ್ಲಿ ದೊರಕುವ ಅಪಾರ ಮಾಹಿತಿಯ ಭಂಡಾರವನ್ನು ಇತಿಹಾಸ ಸಂಶೋಧನೆಯ ದೃಷ್ಠಿಯಿಂದ, ಐತಿಹಾಸಿಕ ಪ್ರಾಮುಖ್ಯತೆಯ ದೃಷ್ಠಿಯಿಂದ, ವೈಚಾರಿಕ ಸಮರ್ಥನೆಯ ದೃಷ್ಠಿಯಿಂದ ಪರೀಕ್ಷಿಸಲಾಗಿದೆ.

ಪ್ರಸ್ತುತ ಸಂಶೋಧನೆಯಲ್ಲಿ ಇತಿಹಾಸ ಸಂಶೋಧನಾ ಮಾರ್ಗದ ತತ್ವಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದರ ಅನ್ವಯ ಮೂಲ ಪ್ರಾಥಮಿಕ ಹಾಗೂ ಅನುಷಂಗಿಕ ಆಕರಗಳಾದ ಕರ್ನಲ್ ಮೆಕೆಂಝಿಯನ್ನು ಕುರಿತ ಕಾಗದಪತ್ರಗಳು, ಕೃತಿಗಳು, ಪ್ರಕಟಣೆಗಳು, ಲೇಖನ ಸಂಗ್ರಹಗಳನ್ನು ಆಧಾರಗಳನ್ನಾಗಿ ಬಳಸಿಕೊಳ್ಳಲಾಗಿದೆ. ವಿಷಯ ಸಂಗ್ರಹಿಸಿ ಅವುಗಳನ್ನು ಬಾಹ್ಯ ಮತ್ತು ಆಂತರಿಕ ವಿಮರ್ಶೆಗೆ ಒಳಪಡಿಸಲಾಗಿದೆ. ಸಂಗ್ರಹಿಸಿದ ದಾಖಲೆಗಳನ್ನು ವಿಶ್ಲೇಷಣಾ ಕ್ರಮ ಮತ್ತು ನಿರೂಪಣಾ ತತ್ವಗಳನ್ನು ಸಂಶೋಧನೆಯಲ್ಲಿ ಅನಾವರಣಗೊಳಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ವಸ್ತು ವಿಷಯವನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಲಾಗಿದೆ. ಕಾಲಾನುಕ್ರಮವಾಗಿ ಅಧ್ಯಾಯಗಳನ್ನು ವಿಂಗಡಿಸಿ ಅಧ್ಯಯನ ಮಾಡುವುದರ ಜೊತೆಗೆ ಬೇರೆ ಬೇರೆ ಆಕರಗಳ ಪರಿಕಲ್ಪನೆಗಳನ್ನು ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ.

ಇತಿಹಾಸ ಸಂಶೋಧನಾ ಸೂತ್ರಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಇತಿಹಾಸಕ್ಕೆ ಆಕರಗಳ ಸಂಗ್ರಹಣೆ, ವಿಷಯ ಸಂಗ್ರಹಣೆ ಬಾಹ್ಯ ಮತ್ತು ಆಂತರಿಕ ವಿಮರ್ಶೆಯ ವಿಧಾನಗಳು, ವಿಶ್ಲೇಷಣಾ ಕ್ರಮಗಳು, ಕೈಫಿಯತ್ತುಗಳ ಐತಿಹಾಸಿಕ ಅಂಶಗಳು, ಕೈಫಿಯತ್ತುಗಳ ವೈಜ್ಞಾನಿಕ ವಿಶ್ಲೇಷಣೆ, ಕೈಪಿಯತ್ತುಗಳ ಅಭ್ಯಾಸಕ್ರಮದಲ್ಲಿ ಎದುರಾಗುವ ಸಮಸ್ಯೆಗಳು, ಕೈಫಿಯತ್ತುಗಳಲ್ಲಿ ಅಡಕವಾಗಿರುವ ಅಂಶಗಳನ್ನು ಈ ಸಂಶೋಧನೆಯಲ್ಲಿ ಕಾಲಾನುಕ್ರಮವಾಗಿ, ವಿಷಯಾನುಕ್ರಮವಾಗಿ ಅಳವಡಿಸಿಕೊಳ್ಳಲಾಗಿದೆ ಹಾಗೂ ಅಧಯ್ಯನ ಮಾಡಲಾಗಿದೆ.

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಆಕರಗಳ ವಿಶ್ಲೇಷಣಾ ಕಾರ್ಯ ರೀತಿಗಳು, ಇತರೆ ಸಂಗ್ರಹಗಳು ಕೈಫಿಯತ್ತುಗಳು ಬಖೈರುಗಳು, ಹಸ್ತಪ್ರತಿಗಳು, ಕಡತಗಳು, ಸ್ಥಳಪುರಾಣ, ಸ್ಥಳನಾಮಗಳ ಬಗ್ಗೆ ತರ್ಕ ಮತ್ತು ವಾಸ್ತವಿಕತೆಯನ್ನು ಸಂಯೋಜನಾತ್ಮಕವಾಗಿ ಕಾರ್ಯನಿರ್ವಹಿಸಲಾಗಿದೆ.

ನಿಶ್ಚಯಾತ್ಮಕ ಅರ್ಥನಿರ್ಣಯ, ಸೂಕ್ಷ್ಮ ಪರಿಶೀಲನೆಗಳು, ಅಂಕಿ-ಅಂಶಗಳ ತುಲನಾತ್ಮಕ ಹೋಲಿಕೆಗೆ ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

ಆಕರಗಳು ಅಥವಾ ಮೂಲ ಸಾಮಗ್ರಿಗಳು ಇರುವಲ್ಲಿಗೆ ಹೋಗಿ ವಿಷಯ ಸಂಗ್ರಹಣೆ ಮಾಡುವುದನ್ನು ಕನ್ನಡದಲ್ಲಿ ಕ್ಷೇತ್ರಕಾರ್ಯವೆಂದೂ, ಇಂಗ್ಲೀಷ್‌ನಲ್ಲಿ Field work ಎಂತಲೂ ಕರೆಯಲಾಗುತ್ತದೆ. ಕ್ಷೇತ್ರಕಾರ್ಯವು ಅನುಕ್ರಮವಾಗಿ ಮಾಹಿತಿ ಸಂಗ್ರಹ (Matter collection) ಸಂದರ್ಶನ (inter view), ನಿರೀಕ್ಷಣ (observation) ರೂಪದ್ದಾಗಿರುತ್ತದೆ. ಇವುಗಳಲ್ಲಿ ಕರ್ನಲ್ ಮೆಕೆಂಝಿಯು ತನ್ನ ಭೂ ಸಮೀಕ್ಷೆ ಕಾರ್ಯದಲ್ಲಿ, ಮಾಹಿತಿ ಸಂಗ್ರಹಣಾ ಕಾರ್ಯದಲ್ಲಿ ಆಕರಗಳ ಸಂಗ್ರಹಣಾ ವಿಧಾನಗಳಲ್ಲಿ ಕೈಫಿಯತ್ತುಗಳು, ಬಖೈರುಗಳು, ಕಡತಗಳು, ಹಸ್ತಪ್ರತಿಗಳು, ಶಾಸನಗಳು, ನಾಣ್ಯಗಳು ಇತ್ಯಾದಿಗಳು ಸಂಗ್ರಹಣಾ ಕಾರ್ಯದಲ್ಲಿ ವ್ಯವಸ್ಥಿವಾಗಿ, ಸರ್ವೆ ಕಾರ್ಯವನ್ನು ಮಾಡಿದನು. ಆದುದರಿಂದಲೇ ಈತನನ್ನು ಭಾರತದ ಪ್ರಪ್ರಥಮ ಸರ್ವೆಯ್ಯ ಜನರಲ್ ಎಂಬುದಾಗಿ ವಿಶ್ಲೇಷಿಸಲಾಗಿದೆ. ತನ್ನ ವೃತ್ತಿಯಲ್ಲಿ ವಿವಿಧ ಹುದ್ದೆಗಳನ್ನು ಅಲಂಕರಿಸಿ ಅವನೇ ಸಮರ್ಥನಾಗಿ ನಿಭಾಯಿಸುತ್ತಾ, ಇದರ ಜೊತೆಗೆ ಆಕರಗಳ ಸಂಗ್ರಹಿಸುವ ಕಾರ್ಯದಲ್ಲಿ ಒಬ್ಬ ಸಂಶೋಧಕನಾಗಿ, ಸರ್ವೆಯರ್ ಆಗಿ, ಪುರಾತತ್ವಜ್ಞನಾಗಿ ಈತನ ಸಾಧನೆ ಶ್ಲಾಘನೀಯವಾದುದು.

ಕರ್ನಲ್ ಮೆಕೆಂಝಿಗೆ ಕ್ಷೇತ್ರ ಕಾರ್ಯದ ಮೂಲಕ ಆಕರಗಳನ್ನು ಸಂಗ್ರಹಿಸುವುದು ಸುಲಭವಲ್ಲದಿದ್ದರೂ, ತನ್ನ ಶ್ರಮದಾಯಕ, ಧನವ್ಯಯ ಮತ್ತು ಖರ್ಚು-ವೆಚ್ಚವನ್ನು ತನ್ನ ಸ್ವಂತ ವೇತನದಿಂದಲೇ ಭರಿಸುವ ಮಟ್ಟಕ್ಕೆ ಕ್ಷೇತ್ರಕಾರ್ಯ ಭೂ ಸಮೀಕ್ಷೆ, ಆಕರಗಳ ಸಂಗ್ರಹಣಾ ಕಾರ್ಯದಲ್ಲಿ ವಿಭಿನ್ನ ವ್ಯಕ್ತಿಗಳಿಂದ ದೊರೆತ ಮಾಹಿತಿಗಳು ನಂಬಿಕೆ, ಸಂಪ್ರದಾಯಕಗಳು, ಲೇಖನಗಳು, ಚಿತ್ರಗಳು, ಐತಿಹ್ಯಗಳು, ಚಾರಿತ್ರಿಕ ಐತಿಹಾಸಿಕ ಆಕರಗಳು, ಇತ್ಯಾದಿ ಹಲವಾರು ಆಕರಗಳ ವಿಧಾನಗಳನ್ನು ಈ ಸಂಶೋಧನೆಯಲ್ಲಿ ಅಳವಡಿಸಲಾಗಿದ್ದು, ಇದರಿಂದ ಸಂಶೋಧನೆಗೆ ಹೆಚ್ಚಿನ ಬೆಲೆ ಬರುವಂತೆ ನಿಯೋಜಿಸಲಾಗಿದೆ.

ಒಂದು ಪ್ರದೇಶದ ಚಾರಿತ್ರಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳ ಇತಿಹಾಸವನ್ನು ಅರಿತುಕೊಳ್ಳಲು ಹಲವಾರು ಸಾಧನ ಸಾಮಗ್ರಿಗಳ ಮೊರೆ ಹೋಗಬೇಕಾಗುತ್ತದೆ. ಮೂಲ ಮತ್ತು ಅನುಷಂಗಿಕ ಆಕರಗಳನ್ನು

ಆಧಾರವಾಗಿಟ್ಟುಕೊಂಡು ಗುಣಾತ್ಮಕ ಮತ್ತು ಪರಿಣಾತ್ಮಕ ಆಧಾರದ ಮೇಲೆ ವಸ್ತುನಿಷ್ಠ ವಿಷಯಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಆಕರಗಳನ್ನು ವೈಜ್ಞಾನಿಕವಾಗಿ ಈ ಸಂಶೋಧನೆಯಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಐತಿಹಾಸಿಕ ಗ್ರಂಥಗಳು, ಸಾಹಿತ್ಯ ಕೃತಿಗಳು, ಪ್ರವಾಸ ಕಥನಗಳು ರಾಜ್ಯ ಪತ್ರಾಗಾರದಲ್ಲಿನ ದಾಖಲೆಗಳು, ಕೆಲವು ಸಂಶೋಧನಾ ಲೇಖನಗಳು, ಸಾಂಸ್ಕೃತಿಕ ಕೃತಿಗಳು, ಕಲ್ಕತ್ತ ಮತ್ತು ಮದ್ರಾಸ್‌ನಲ್ಲಿಯೂ ಮೆಕೆಂಝಿ ಸಂಗ್ರಹಗಳು ಇತ್ಯಾದಿಗಳನ್ನು ಬಳಸಿಕೊಂಡು ರಚಿಸಲಾಗಿದೆ.

ಕರ್ನಲ್ ಮೆಕೆಂಜಿ ತನ್ನ ಭೂ ಸಮೀಕ್ಷೆ ಕಾರ್ಯದಲ್ಲಿ ದೊರೆಕಿರುವ ಮೌಖಿಕ ಆಧಾರಗಳು ಚರಿತ್ರೆಯ ರಚನೆ ಮತ್ತು ಅಧ್ಯಯನಕ್ಕೆ ತುಂಬಾ ಸಹಾಯಕವಾಗಿದೆ. ಕರ್ನಲ್ ಮೆಕೆಂಝಿಯ ವಿವಿಧ ಪ್ರದೇಶಗಳಲ್ಲಿನ ಕ್ಷೇತ್ರಕಾರ್ಯ ಹಿರಿಯರ, ಪಂಡಿತರ, ಶ್ಯಾನುಭೋಗ, ಪಟೇಲ, ಅನುಭವಸ್ಥ ಹಿರಿಯರ ಸಂದರ್ಶನ ಮಾಡಿ ಜನಸಮುದಾಯದ ನೆನಪುಗಳಲ್ಲಿ ನೆಲೆಗೊಂಡಿರುವ ಮಾಹಿತಿಯನ್ನು ಮೌಖಿಕ ಆಧಾರದ ಹಿನ್ನೆಲೆಯಲ್ಲಿ ಈ ಸಂಶೋಧನೆಗೆ ಬಳಸಿಕೊಳ್ಳಲಾಗಿದೆ.

## ೧.೬ ಅಧ್ಯಯನದ ಸಮೀಕ್ಷೆ

ಕರ್ನಲ್ ಮೆಕೆಂಝಿಯ ಜೀವನ ಮತ್ತು ಕೈಫಿಯತ್ತುಗಳ ಕುರಿತು ಅನೇಕ ಗ್ರಂಥಗಳು ವಿವಿಧ ಭಾಷೆಗಳಲ್ಲಿ ಪ್ರಕಟವಾಗಿವೆ. ಅವರ ಕುರಿತು ವಿದ್ವಾಂಸರು, ಸಂಶೋಧಕರು, ಬ್ರಿಟೀಷ್ ಅಧಿಕಾರಿಗಳು ಕರ್ನಲ್ ಮೆಕೆಂಝಿ ಜೀವನ ಮತ್ತು ಹಲವಾರು ಸಾಧನೆಗಳ ಬಗ್ಗೆ ಲೇಖನಗಳನ್ನು ಗ್ರಂಥಗಳನ್ನು ಸಂಪ್ರಬಂಧಗಳನ್ನು ರಚಿಸಿದ್ದಾರೆ. ಅವರು ಭಾರತದಲ್ಲಿ ಕೈಗೊಂಡ ವಿವಿಧ ಸಾಧನೆಗಳನ್ನು ವಿವರಿಸುವ ಅನೇಕ ಕೃತಿಗಳು ಪ್ರಕಟವಾಗಿವೆ. ಕರ್ನಲ್ ಮೆಕೆಂಝಿ ಜೀವನದ ವಿವಿಧ ಆಯಾಮಗಳನ್ನು ಆತನ ಜೀವನ ದೃಷ್ಟಿಯನ್ನು ವಿದ್ವಾಂಸರು ವಿಶ್ಲೇಷಿಸಿದ್ದಾರೆ. ಭಾರತ ಮತ್ತು ಲಂಡನ್ನಿನಲ್ಲಿರುವ ಸಾಹಿತ್ಯಾಧಾರಗಳನ್ನು ಅಧ್ಯಯನ ಮಾಡಿ ಅನೇಕ ಸಂಶೋಧಕರು ಕರ್ನಲ್ ಮೆಕೆಂಝಿ ಸಂಗ್ರಹದ ಮಹತ್ವವನ್ನು ಸಾರಿದ್ದಾರೆ. ಅವುಗಳಲ್ಲಿ ಅನೇಕ ಗ್ರಂಥಗಳು ಆತನ ಸಂಗ್ರಹಗಳ ವಿವರಗಳನ್ನು ತಿಳಿಸುತ್ತವೆ. ಕರ್ನಲ್ ಮೆಕೆಂಝಿ ರಚಿಸಿ ಸಂಗ್ರಹಿಸಿದ ನಕ್ಷೆಗಳು. ಚಿತ್ರಗಳು, ನಕಾಶೆಗಳನ್ನು ಕುರಿತು ಕೆಲವು ಅಮೂಲ್ಯ ಗ್ರಂಥಗಳು ಪ್ರಕಟವಾಗಿವೆ. ಇವುಗಳಲ್ಲಿ ಪ್ರಥಮವಾಗಿ **ಬಿ.ರಾಮ್‌ರಾವ್ ಮತ್ತು ಸಂಗಡಿಗರು** ೧೯೨೪ ರಲ್ಲಿಯೇ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಕೈಫಿಯತ್ತುಗಳ ಬಗ್ಗೆ ಲೇಖನಗಳನ್ನು

ಪ್ರಕಟಿಸಿದ್ದಾರೆ. **ಟಿ.ಚಂದ್ರಶೇಖರ** ಅವರ **An alphabetical index of Kannada Manuscripts in the Government Oriental manuscripts library, Madras (Mackenzie's collection)** ಹೆಸರಿನ **ಕೆಟಲಾಗ್** ಪ್ರಕಟಿಸಿದ್ದು, ಕೈಫಿಯತ್ತುಗಳ ಬಗ್ಗೆ ವಿದ್ವಾಂಸರಿಗೆ ಇದು ಪ್ರಮುಖ ಆಕರವಾಯಿತು. ತದನಂತರ ಕೈಫಿಯತ್‌ನ್ನು ಅಧ್ಯಯನ ಮಾಡಿದರು. **ಜಿ.ವರದರಾಜ್‌ರಾವ್‌ರವರು** ಕೆಲವು ಕೈಫಿಯತ್ತು ಸೂಕ್ತ ರೀತಿಯಲ್ಲಿ ಬಳಸಿಕೊಂಡು ಅಧ್ಯಯನ ಮಾಡಿದ್ದಾರೆ. **ಎಂ.ಎಂ.ಕಲಬುರ್ಗಿ**ಯವರ ಸಂಪಾದಕತ್ವದಲ್ಲಿ ಹೊರ ಬಂದಿರುವ **ಕರ್ನಾಟಕದ ಕೈಫಿಯತ್ತುಗಳು** ಎಂಬ ಗ್ರಂಥವು ೧೯೯೪ ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ಪ್ರಕಟವಾಗಿದೆ. ಈ ಕೃತಿಯಲ್ಲಿ ಮದ್ರಾಸಿನ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿದ್ದ ಕೈಫಿಯತ್ತುಗಳನ್ನು ಆರಿಸಿ ಅವುಗಳ ಪಾಠವನ್ನು ಸಂಗ್ರಹಿಸಲಾಗಿದೆಯಲ್ಲದೆ, ಕಲಬುರ್ಗಿಯವರು ಪ್ರೌಢವಾದ ಪ್ರಸ್ತಾವನೆಯನ್ನು ಬರೆದು ಕೈಫಿಯತ್ತುಗಳ ಚಾರಿತ್ರಿಕ ಮಹತ್ವವನ್ನು ತೋರಿಸಿಕೊಟ್ಟಿದ್ದಾರೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ವಿಶಿಷ್ಟವಾದ ಮಾಹಿತಿಯನ್ನು ಒಳಗೊಂಡಿರುವ ಈ ಗ್ರಂಥವು ಹಲವಾರು ಸಂಶೋಧಕರ ಅಧ್ಯಯನಕ್ಕೆ ಬಹು ಉಪಯುಕ್ತವಾದ ಗ್ರಂಥವಾಗಿದೆ. ಕೈಫಿಯತ್ತುಗಳು ಎಂದರೇನು? ಅವುಗಳಲ್ಲಿರುವ ಚಾರಿತ್ರಿಕ ಅಂಶಗಳೇನು ಅವುಗಳ ವ್ಯಾಪ್ತಿ ಮತ್ತು ಗುರಿಯೇನು ಎಂಬುದು ಈ ಗ್ರಂಥದ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಈ ಗ್ರಂಥದಲ್ಲಿ ಕರ್ನಾಟಕದ ಕೆಲವು ರಾಜಕೀಯ ವ್ಯಕ್ತಿಗಳ ಜೀವನವನ್ನು ಕುರಿತು ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆ. ಕರ್ನಾಟಕಕ್ಕೆ ಸಂಬಂಧಿಸಿದ ಕೆಲವು ಕೈಫಿಯತ್ತುಗಳ ಸಾರಾಂಶವನ್ನು ನೀಡಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಈ ಗ್ರಂಥವು ಸಂಶೋಧನೆಗೆ ಮಹತ್ವದ ದಾಖಲೆಯಾಗಿದೆ ಎಂದು ಹೇಳಬಹುದು.

**ಜೆನ್ನಿಫರ್ ಹೌಸ್ ರಚಿಸಿರುವ ಇಲ್ಲಸ್ಟ್ರೇಟಿಂಗ್ ಇಂಡಿಯಾ ದಿ ಅರ್ಲಿ ಕಲೋನಿಯಲ್ ಇನ್‌ವೆಸ್ಟಿಂಗ್ಸ್ ಆಫ್ ಕಾಲಿನ್ ಮೆಕೆಂಝಿ** ೧೭೮೪-೧೮೨೧ ಈ ಕೃತಿಯು ಕರ್ನಲ್ ಮೆಕೆಂಝಿಯವರ ಜೀವನ ಮತ್ತು ಸಾಧನೆಯನ್ನು ವಿವರಿಸುವ ಒಂದು ಮಹತ್ವಪೂರ್ವ ಕೃತಿಯಾಗಿದೆ. ದೀರ್ಘಕಾಲದವರೆಗಿನ ಕರ್ನಲ್ ಮೆಕೆಂಝಿಯವರನ್ನು ಕುರಿತು ಹಾಗೂ ೧೮ನೇ ಶತಮಾನದ ರಾಜಕೀಯ ಬೆಳವಣಿಗೆಗಳನ್ನು ಕುರಿತು ಮೂಲ ದಾಖಲೆಗಳನ್ನು ಅಭ್ಯಾಸ ಮಾಡಿ ಕರ್ನಲ್ ಮೆಕೆಂಝಿಯವರ ಸಾಧನೆಯನ್ನು ಇಲ್ಲಿ ವಿವರಿಸಲಾಗಿದೆ. ಈ ಗ್ರಂಥದ ಹೆಸರೇ ಹೇಳುವಂತೆ ಅದು ಮಾತುಗಳಿಗಿಂತಲೂ ಚಿತ್ರಗಳ ಮೂಲಕ ಕರ್ನಲ್ ಮೆಕೆಂಝಿಯ ಬಗ್ಗೆ ಆತನ ಕೊಡುಗೆಯ ಬಗ್ಗೆ ಸಂಪೂರ್ಣ ಚಿತ್ರಣವನ್ನು ನೀಡುತ್ತದೆ.

ಕರ್ನಲ್ ಮೆಕೆಂಝಿಯವರ ಕಾಲದ ಸಮಕಾಲೀನ ರಾಜಕೀಯ ಜೀವನವನ್ನು ಕರ್ನಲ್ ಮೆಕೆಂಝಿಯ ಜೀವನದಲ್ಲಿ ಪ್ರವೇಶ ಮಾಡಿದ ಪ್ರಮುಖ ವ್ಯಕ್ತಿಗಳನ್ನು ಚಿತ್ರಿಸಲಾಗಿದೆ. ಜೆನ್ನಿಫರ್ ಹೌಸ್ ತಮ್ಮ ಗ್ರಂಥದಲ್ಲಿ ನೀಡಿರುವ ನಕಾಶೆಗಳು, ಭೂಪಟಗಳು, ರೇಖಾ ಚಿತ್ರಗಳು ಸಮಕಾಲೀನ ಜೀವನದ ಸತ್ಯ ಚಿತ್ರಣವನ್ನು ನೀಡುವಲ್ಲಿ ಯಶಸ್ವಿಯಾಗಿವೆ. ಕರ್ನಲ್ ಮೆಕೆಂಝಿ ಜೀವನದಲ್ಲಿ ಬಂದು ಹೋದ ಭಾರತೀಯ ಮತ್ತು ಐರೋಪ್ಯ ವ್ಯಕ್ತಿಗಳ ಜೀವನವನ್ನು ಸಂಗ್ರಹಿಸಿ ತಿಳಿಸಲಾಗಿದೆ. ಈ ಕೃತಿಯು ಆಂಗ್ಲಭಾಷೆಯಲ್ಲಿದ್ದು, ಮಹತ್ವಪೂರ್ಣವಾದ ದಾಖಲೆಗಳನ್ನು ಒಳಗೊಂಡಿದ್ದು, ಸಂಶೋಧನೆಗೆ ಮಹತ್ವದ ವಿಷಯಗಳನ್ನು ಒದಗಿಸುತ್ತದೆ.

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡವು **ಕೈಫಿಯತ್ತು ಮತ್ತು ಮೈಸೂರು ರಾಜರ ಚರಿತ್ರೆಯ ವಚನ ಕಾವ್ಯವು ಎಂಬ ಪುಸ್ತಕವನ್ನು ೧೯೭೪ರಲ್ಲಿ ಪ್ರಕಟಿಸಿದೆ. ಬಿ.ಎಸ್.ಕುಲಕರ್ಣಿ**ಯವರು ಗ್ರಂಥದ ಸಂಪಾದಕರಾಗಿದ್ದಾರೆ. ಮೈಸೂರು ರಾಜರ ಚರಿತ್ರೆಯ ಬಗ್ಗೆ ವಚನ ಕಾವ್ಯವು ಪ್ರಧಾನವಾಗಿ ಚರ್ಚಿಸಲ್ಪಟ್ಟಿರುವ ಗ್ರಂಥವಾಗಿದೆ. ಇದರಲ್ಲಿ **ಹೊಳೆಹೊನ್ನೂರ ಕೈಫಿಯತ್ತು, ಹರಿಹರನ ಕೈಫಿಯತ್ತು, ಮೈಸೂರು ರಾಜರ ಚರಿತ್ರೆ,** ವಚನ ಕಾವ್ಯಗಳ ನಿರೂಪಣೆ ಇವೆ. ಈ ಗ್ರಂಥದಲ್ಲಿ ಹಲವಾರು ಪೌರಾಣಿಕ ಸಾಮಾಜಿಕ ಅಂಶಗಳಲ್ಲಿ ಐತಿಹ್ಯಗಳನ್ನು ಮೈಸೂರು ರಾಜರನ್ನು ಕುರಿತ ಕೆಲವು ಚಾರಿತ್ರಿಕ ಕಥನವನ್ನು ಒಳಗೊಂಡಿದೆ. ಈ ಗ್ರಂಥವು ಸಂಶೋಧನೆಗೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ.

**ರಾ.ಗ. ಅಜ್ಜಿಬಾಳ ಬರೆದಿರುವ ಕರ್ನಲ್ ಮೆಕೆಂಝಿ ಎಂಬ ಗ್ರಂಥವನ್ನು ೧೯೭೪ರಲ್ಲಿ ಇಂಡಿಯಾ ಬುಕ್ ಹೌಸ್** ಪ್ರಕಟಿಸಿದೆ. ೪೦ ಪುಟಗಳುಳ್ಳ ಈ ಪುಟ್ಟ ಗ್ರಂಥವು ಮೆಕೆಂಝಿ ವ್ಯಕ್ತಿತ್ವ, ಸಂಗ್ರಹ ಮತ್ತು ಸಂಗ್ರಹಿಸಿರುವ ಕನ್ನಡ ಕೈಫಿಯತ್ತುಗಳ ಪಟ್ಟಿಯನ್ನು ಕೊಟ್ಟಿದೆ. ಇಲ್ಲಿ ಲೇಖಕರು ಕರ್ನಲ್ ಮೆಕೆಂಝಿಯ ಜೀವನ ಮತ್ತು ಸಾಧನೆಯನ್ನು ಬಹು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಈ ಪುಸ್ತಕದಲ್ಲಿ ಕರ್ನಲ್ ಮೆಕೆಂಝಿ ಅಧ್ಯಯನಕ್ಕೆ ಸಂಬಂಧಪಟ್ಟ ಅನೇಕ ಚಿತ್ರಗಳ ಬಗ್ಗೆಯೂ ವಿವರಣೆ ನೀಡಿದ್ದಾರೆ. ಲೇಖಕರು **ಕನ್ನಡ ನಾಡಿನಲ್ಲಿ ಮೆಕೆಂಝಿ** ಎನ್ನುವ ಅಧ್ಯಾಯದಲ್ಲಿ ಕರ್ನಲ್ ಮೆಕೆಂಝಿ ಪ್ರಾಚ್ಯವಸ್ತುಗಳನ್ನು ಸಂಗ್ರಹಿಸಲು ಪ್ರೇರಣೆ ಯಾವ ಕೃತಿಯ ಮೂಲಕ ಬಂದಿತ್ತು ಎಂಬುದನ್ನು ಚರ್ಚಿಸುತ್ತಾರೆ. ಕರ್ನಲ್ ಮೆಕೆಂಝಿ ಸಂಗ್ರಹದಲ್ಲಿ ಸ್ಥಳ ಪುರಾಣಕ್ಕೆ ಸಂಬಂಧಿಸಿದ ಅನೇಕ ಕೈಫಿಯತ್ತುಗಳು ಸಿಗುತ್ತವೆಂದು ಲೇಖಕರು ತಿಳಿಸುತ್ತಾರೆ. ಕರ್ನಲ್ ಮೆಕೆಂಝಿಯವರ ಪ್ರಮುಖ ಗ್ರಂಥಗಳನ್ನು ತಿಳಿಸಿಕೊಡುತ್ತಾರೆ. ಕನ್ನಡ ನಾಡಿಗೆ

ಸಂಬಂಧಿಸಿದ ಕೆಲವು ಕೈಫಿಯತ್ತುಗಳು ಮತ್ತು ಬಖೈರುಗಳು ಕಥಾ ಸಂಗ್ರಹವನ್ನು ಈ ಲೇಖಕರು ಸಂಕ್ಷಿಪ್ತವಾಗಿ ಸೂಚಿಸಿದ್ದಾರೆ. ಈ ಗ್ರಂಥವು ಸಂಶೋಧನೆಯ ಅಧ್ಯಯನಕ್ಕೆ ಮಹತ್ವದ ದಾಖಲೆಗಳನ್ನು ಒದಗಿಸಿದೆ.

**ಎಂ.ಜಿ.ಮಂಜುನಾಥ್** ಸಂಪಾದಕತ್ವದ **ಬೆಂಗಳೂರಿನ ಬಖೈರುಗಳು** ಎಂಬ ಪುಸ್ತಕವು ಬೆಂಗಳೂರಿನ ಸಾಂಸ್ಕೃತಿಕ ಕ್ಷೇತ್ರದ ಬಗ್ಗೆ ಪರಿಚಯ ಮಾಡಿಕೊಡುತ್ತದೆ. ಇದರಲ್ಲಿ ೧೨ ಲೇಖನಗಳಿವೆ. ಯಲಹಂಕ ನಾಡಪ್ರಭುಗಳ ಆಳ್ವಿಕೆಗೆ ಸಂಬಂಧಿಸಿದ ನಾಲ್ಕು ಸ್ವಾರಸ್ಯಕರ ಲೇಖನಗಳನ್ನು ಕರ್ನಲ್ ಮೆಕೆಂಝಿ ಪ್ರಭಾವಗಳನ್ನು ಉಲ್ಲೇಖಿಸುತ್ತವೆ.

**ಐ.ಮಾ.ಮುತ್ತಣ್ಣನವರು** ಬರೆದಿರುವ **ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ಮೇಲೆ ಪ್ರಾಶ್ಚಾತ್ಯರ** ಪ್ರಭಾವ ಎನ್ನುವ ಗ್ರಂಥದಲ್ಲಿ ಕರ್ನಲ್ ಮೆಕೆಂಝಿಯವರು ಇತಿಹಾಸ ರಚನೆಗೆ ನೀಡಿರುವ ಕೊಡುಗೆಯನ್ನು ವಿವರಿಸಲಾಗಿದೆ. ಸಂಶೋಧನೆಗೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ.

**ಶ್ರೀನಿವಾಸ ಹಾವನೂರು** ಅವರ **'ಹೊಸಗನ್ನಡ ಅರುಣೋದಯ'** ಎಂಬ ಗ್ರಂಥದಲ್ಲಿ ಕರ್ನಲ್ ಮೆಕೆಂಝಿಯ ಇತಿಹಾಸ ಹಾಗೂ ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ ಕೊಡುಗೆಯನ್ನು ವಿಮರ್ಶಾತ್ಮಕವಾಗಿ ವಿವರಿಸಲಾಗಿದೆ. ಹಾವನೂರರು ಕರ್ನಲ್ ಮೆಕೆಂಝಿಯ ಇತಿಹಾಸ ಪ್ರಜ್ಞೆಯನ್ನು ಕುರಿತು ಪ್ರಬುದ್ಧ ಕರ್ನಾಟಕ ಮೊದಲಾದ ನಿಯತಕಾಲಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದಾರೆ. ಇದು ಸಂಶೋಧನೆಗೆ ಅಗತ್ಯವಾದ ದಾಖಲೆಗಳನ್ನು ಒದಗಿಸುತ್ತದೆ.

**ಬಿ.ಎಸ್.ಪುಟ್ಟಸ್ವಾಮಿರವರ** ೨೦೦೭ ರಲ್ಲಿ **ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ** ಮತ್ತು ೨೦೧೨ ರಲ್ಲಿ **ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು** ಎಂಬ ಎರಡು ಸಂಶೋಧನಾ ಕೃತಿಗಳು ಪ್ರಕಟವಾಗಿವೆ. ಅವುಗಳನ್ನು **ಮನೋಜ್ ಪಬ್ಲಿಕೇಷನ್, ಬೆಂಗಳೂರು** ಪ್ರಕಟಿಸಿದೆ. ಇವುಗಳಲ್ಲಿ ಐತಿಹಾಸಿಕ ಆಕರಗಳಾದ ಕೈಫಿಯತ್ತುಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಪ್ರಧಾನ ವಾಹಿನಿಯ ವಿದ್ವಾಂಸರು ಸ್ಥಾಪಿಸಿರುವ ರಾಜಮಾರ್ಗವನ್ನು ಬದಲಿಸಿ ಕಾಲುದಾರಿಯಲ್ಲಿ ಚಲಿಸಿ, ಯಾರೂ ಪರಿಗಣಿಸದ ಅಸಡ್ಡೆಗೊಳಗಾದ ಸಂಗತಿಗಳನ್ನು ಜನಸಾಮಾನ್ಯರು ಹೇಗೆ ನೋಡಿದ್ದಾರೆಂಬುದನ್ನು ಕರ್ನಲ್ ಮೆಕೆಂಝಿಯ ಕೈಫಿಯತ್ತುಗಳ ಮೂಲಕ ದಾಖಲಿಸಿದ್ದಾರೆ. ಈ ಕೈಫಿಯತ್ತುಗಳ ಮೂಲಕ ಮೈಸೂರು ರಾಜಕೀಯ ಚರಿತ್ರೆಯನ್ನು

ಅದರ ಭೂತ ಮತ್ತು ವರ್ತಮಾನಗಳ ಮೂಲಕ ಭಿನ್ನವಾಗಿ ನಿರೂಪಿಸಿದ್ದಾರೆ. ಅವುಗಳಲ್ಲಿ ರಾಜಕೀಯ ವಿಚಾರಗಳನ್ನು ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಮಾಡಿದ್ದಾರೆ. ಮೈಸೂರು ಮತ್ತು ಬಳ್ಳಾರಿ ಪ್ರದೇಶದ ಕೈಫಿಯತ್ತುಗಳನ್ನು ಅಧ್ಯಯನದ ಮೂಲಕ ರಾಜಕೀಯ ಚರಿತ್ರೆಯನ್ನು ವಿಶ್ಲೇಷಿಸಿದ್ದಾರೆ.

ಕರ್ನಲ್ ಮೆಕೆಂಝಿಯವರ ಸಂಗ್ರಹಗಳನ್ನು ಕುರಿತು ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಲೇಖನಗಳು ಮತ್ತು ಮಹಾಪ್ರಬಂಧಗಳ ಬಗ್ಗೆ ಅಧ್ಯಯನವಾಗಿವೆ. ಅವುಗಳಲ್ಲಿ ಪ್ರಮುಖವಾಗಿ **ಫಾದರ್.ಎಂ. ಪಿಂಟೋ ರವರ ಕರಾವಳಿ ಪ್ರದೇಶದ ಕೈಫಿಯತ್ತುಗಳು** ಸೋಮಶೇಖರ.ಎ. ರವರ ಮೈಸೂರು ಪ್ರದೇಶದ ಕೈಫಿಯತ್ತುಗಳು **ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ**. ಡಾ. ಸುನಿತಾರವರ **'ಕೈಫಿಯತ್ತುಗಳಲ್ಲಿ ಸ್ತ್ರೀಯರ ಸ್ಥಾನಮಾನ'** ಈ ಪ್ರಬಂಧಗಳಲ್ಲಿ ಕರ್ನಲ್ ಮೆಕೆಂಝಿಯವರ ಕೈಫಿಯತ್ತುಗಳ ಬಗ್ಗೆ ಮೈಸೂರು ಪ್ರದೇಶ ಹಾಗೂ ಕರಾವಳಿ ಪ್ರದೇಶಗಳ ಬಗ್ಗೆ ದಾಖಲೆಗಳಿಂದ ರಚಿಸಿದ್ದು, ಅವುಗಳ ಮಹತ್ವವನ್ನು ನಿರೂಪಿಸುತ್ತದೆ.

ಇವುಗಳಲ್ಲದೆ ಆಂಗ್ಲಭಾಷೆಯಲ್ಲಿ ಕರ್ನಲ್ ಮೆಕೆಂಝಿಯ ಕುರಿತು ಗ್ರಂಥಗಳು, ಲೇಖನಗಳು, ಕೃತಿಗಳು ಪ್ರಕಟಗೊಂಡಿವೆ. ಇವುಗಳು ಸಂಶೋಧನೆಗೆ ಅಗತ್ಯವಾದ ದಾಖಲೆಗಳನ್ನು ಒದಗಿಸುತ್ತವೆ. ಅವುಗಳ ಗ್ರಂಥದ ಹೆಸರು, ಲೇಖಕರು, ಪ್ರಕಾಶನಗೊಂಡ ಸಂಸ್ಥೆ ಮತ್ತು ವರ್ಷ ಈ ಕೆಳಕಂಡಂತಿದೆ.

Blake.D, 1992. Catalogue of the European Manuscripts in the Oriental and India Office Collections of the British Library. Volume-1, Part-2, The Mackenzie General and Miscellaneous Collections. London : Birish Library.

Boriah, Kavali Venkata, 1804 a. 'Account of the Marda Gooroos Collected while Major Mackenzie was at Hurryhurr, 24th August 1800', Asiatic Annual Register, vol. 6.

Boriah, Kavali Venkate, 1804 b. 'History of the Angoondy Rajas taken from a verbal account of Timappah, the present

Representative of that Family, at Camlapor, 10th January, 1801', Asiatic Annual Register, vol. 6.

Boriah, Kavali Venkata, 1809, 'Account of the Jains', Asiatic Researches, vol. IX

Buchanan.F. 1807, A Journey from Madras through the Counitres of Mysore, Canara and Malabar. London : W. Bulmer and Co.

Howes.J. 2002, 'Colin Mackenzie and the Stupa at Amaravati', South Asian Studies, vol. 18.

Boriah, Kavali Venkata, 2004. 'The Mackenzie Parsvanath in the V and A : Research in Progress on the British Library's Mackenzie Collection', South Asia Archive & Library Group Newsletter (November 2004).

Boriah, Kavali Venkata, 2009 a, 'A colonial history of Sculptures from the Amaravati Stupa', in J. Hawkes and A. Shimada (eds), Buddhist Stupas in South Asia. New Delhi, Oxford University Press.

Boriah, Kavali Venkata. b, 'Colin Mackenzie, the Madras School of Orientalism, and Investigations at Mahabalipuram', in T.Trautmann (ed.), The Madrea School of Orientalism : Producing Knowledge in Colonial South India. New Delhi : Oxford University Press.

Mackenzie.C, 1809 a, 'Account of the Jains', Asiatick Researches, vol. 9.

Boriah, Kavali Venkata. 1809 b. ‘Account of Extracts of a Hournal by Major C. Mackenzie, Feb. 24, 1797’, Asiatick Researches, vol. 9.

Boriah, Kavali Venkata, 1808, ‘Account of the Pagoda at Perwuttum, 1794’, Asiatick Researches, vol.5.

Boriah, Kavali Venkata, 1834, ‘Biographical Sketch of the Literary Career of the Late Colonel Colin Mackenzie.... in a letter... to Alexander Johnston’, Journal of the Royal Asiatic Society, vol. 1.

Boriah, Kavali Venkata, 1835, ‘Biographical Sketch of Colin Mackenzie... communicate4d by Colonel Mackenzie in 1817 to Sir Alexander Johnston’, Madras Journal of Literature and Science, vol. 2.

Mackenzie, W.C, 1952, Colonel Colin Mackenzie : First Surveyour - General of India. Edinburgh and London : W.R. Chambers Ltd.

Ramachandra Rao, C.V, 2003, The Kavali Brothers, Col. Colin Mackenzie and the Reconstruction of South Indiam History and Cultural Resurgence in South India. Nellore : Manasara Publications.

Ramaswami, Kavali Venkata, 1828, Descriptive and Historical Sketches of Cities and Places in the Dekkam. Calcutta : W. Thacker & Co.

Boriah, Kavali Venkata, 1829, Biographical Sketches of Dekkan Poets. Calcutta.

Boriah, Kavali Venkata, 1836, Modern Culinary Receipts of the Hindoos. A Sanskrit text on cookery translated into English by C.V. Ramaswamy Pundit. Madras.

Robb.P, 1998, 'Completing "Our Stock of Geography" or an Object "Still More Sublime" : Colin Mackenzie's Survery of Mysore, 1799-1810 ', Journal of the Royal Asiatic Society, Series 3, 8(2), pp. 181-206.

Sewell.R,1878, Report on the Amaravati Tope. London : H.M. Stationery.

Wilson.H.H,1828, Descriptive Catalogue of the Mackenzie Collection. Calcutta : Asiatic Press.

Boriah.K.V, 1799, Account of the Ruins and Sculptures at Mahavellypooram, British Library, Mss Sur Mackenzie Gen 21.

Boriah, Kavali Venkata, 1801. Account of Boya or Bedar People taken in 1800-1801 by directionof Colin Mackenzie. British Library, Mss Eur Mackenzie Gen 21.

Ellis.F.W,1806, Letter to Colin Mackenzie. British Library, Mss Eur Mackenzie Gen 40.

Laksmiah.K.V, 1803-8, Account of Mysore Kings. British Library, Mss Eur Mackenzie Gen 3.

Mackenzie.C, Miscellaneous letters to Henry Traill. British Library, Mss Eur F-228

ಈ ಮೇಲ್ಕಂಡ ಆಂಗ್ಲ ಗ್ರಂಥಗಳು ಕರ್ನಲ್ ಮೆಕೆಂಝಿಯ ಜೀವನ ಸಾಧನೆಗಳನ್ನು ನಿರೂಪಿಸುತ್ತವೆ. ಆದರೆ ಕನ್ನಡ ನಾಡಿನಲ್ಲಿ ಕರ್ನಲ್ ಮೆಕೆಂಝಿ

ಸಂಗ್ರಹಿಸಿದ ಕೈಫಿಯತ್ತುಗಳ ಆಕರಗಳ ಕುರಿತು ವಿಶ್ಲೇಷಿಸಿದ್ದು ಕಡಿಮೆ. ಹೀಗಾಗಿ ಕನ್ನಡದಲ್ಲಿ ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳನ್ನು ಕುರಿತು ಚಾರಿತ್ರಿಕ ದೃಷ್ಟಿಕೋನದಲ್ಲಿ ಅವಲೋಕನಗೊಂಡ ಕೃತಿಗಳ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಈ ಕೊರತೆಯನ್ನು ಹೋಗಲಾಡಿಸುವಲ್ಲಿ ಈ ಸಂಶೋಧನೆಯ ಮೂಲಕ ನಿರೂಪಿಸಲಾಗಿದೆ.

ಸಂಶೋಧಕರ ಆಕರ ಸಾಮಾಗ್ರಿಗಳು ಪ್ರಧಾನವೇ ಇರಲಿ, ಪೋಷಕವಾಗಿಯೇ ಇರಲಿ ಅಥವಾ ಪೂರಕವಾಗಿಯೇ ಇರಲಿ ಒಟ್ಟಾರೆ ಆಕರಗಳನ್ನು ಗುರ್ತಿಸಲಾಗಿದೆ. ಒಂದು ನಾಡಿನ ದೇಶದ ಇತಿಹಾಸವನ್ನು ಅರಿತುಕೊಳ್ಳಲು ಹಲವಾರು ಸಾಧನ ಸಾಮಗ್ರಿಗಳ ಮೊರೆಹೋಗಬೇಕಾಗುತ್ತದೆ. ಪ್ರಸ್ತುತ ಪ್ರಬಂಧ ರಚನೆಗೆ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಶಾಸನಗಳು, ಕೈಫಿಯತ್ತುಗಳು, ಪ್ರಾಚ್ಯವಸ್ತು, ಸಂಶೋಧನಾ ಇಲಾಖೆಯ ವರದಿಗಳು, ಸಾಹಿತ್ಯ ಕೃತಿಗಳು, ಪ್ರವಾಸೀ ಕಥನಗಳು, ಐತಿಹಾಸಿಕ ಗ್ರಂಥಗಳ ಸಹಾಯವನ್ನು ಪಡೆದುಕೊಂಡು ಕಲ್ಕತ್ತ, ಮದ್ರಸ್ ಪತ್ರಗಾರ ಇಲಾಖೆಗಳಲ್ಲಿರುವ ಕೈಫಿಯತ್ತುಗಳು ದಾಖಲೆಗಳನ್ನು ಬಳಸಿಕೊಳ್ಳಲಾಗಿದೆ. ಮೈಸೂರು ರಾಜ್ಯದ ಸಂಸ್ಕೃತಿ ಮತ್ತು ಇತಿಹಾಸವನ್ನು ತಿಳಿಯಲು ವಿವಿಧ ರಾಜರ ವಂಶಾವಳಿ ಹಾಗೂ ಸಾಹಿತ್ಯ ಕೃತಿಗಳನ್ನು ಬಳಸಿಕೊಳ್ಳಲಾಗಿದೆ.

**ನಲ್ಲಪ್ಪರವರ 'ಹೈದರ್‌ನಾಮೆ'** ಎಂಬ ದಾಖಲೆಯನ್ನು **ತಿ.ತಾ.ಶರ್ಮರ**ವರು **'ಚಾರಿತ್ರಿಕ ದಾಖಲೆಗಳಲ್ಲಿ'** ಸಂಗ್ರಹಿಸಿದ್ದು ಇದರಲ್ಲಿ ಹೈದರನ ಬಗ್ಗೆ ಮಾಹಿತಿ ದೊರೆಯುತ್ತದೆ.

**ರಾಮಶಾಸ್ತ್ರಿ.ಆರ್**. ಸಂಪಾದಕತ್ವದ **'ಗೋವಿಂದ ವೈದ್ಯ ಕೃತ ಕಂಠೀರವ ನರಸರಾಜ ವಿಜಯಂ"** ಕೃತಿಯು ಆರಂಭದ ಮೈಸೂರಿನ ಒಡೆಯರಾದ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಜರುಗುತ್ತಿದ್ದ ದಸರಾ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ನೀಡುತ್ತದೆ.

**ಶ್ರೀನಿವಾಸ್‌ಮೂರ್ತಿ.ಎಸ್.ಎಲ್**.ರವರ ಸಂಪಾದಕತ್ವದ **'ಜಂಗಲ್‌ನಾಮೆ'**ವು (ಹಸ್ತಪ್ರಿ) ಟಿಪ್ಪುವಿನ ಬಗ್ಗೆ ಮತ್ತು 4ನೇ ಆಂಗ್ಲೋಮೈಸೂರು ಯುದ್ಧಗಳ ಬಗ್ಗೆ ಮಾಹಿತಿ ನೀಡುತ್ತದೆ.

ಇವುಗಳ ಜೊತೆಗೆ ಹಲವಾರು ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ವಿವಿಧ ವಿಷಯಗಳ ಆಯಾಮಗಳಿಗೆ ತಕ್ಕಂತೆ

ಆಯಾಯ ವಿಷಯಕ್ಕೆ ಸಂಬಂಧಿಸಿದ ವರದಿಗಳು, ನಿಯತಕಾಲಿಕ ಲೇಖನಗಳು, ವೃತ್ತ ಪತ್ರಿಕೆಗಳು ಮತ್ತು ಅಂತರ್ಜಾಲ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ.

## ೧.೭ ಅಧ್ಯಾಯಗಳ ವಿಂಗಡಣೆ

**ಮೊದಲನೇ ಅಧ್ಯಾಯ**ವು ಪ್ರಸ್ತಾವನೆ ರೂಪದಲ್ಲಿದ್ದು ಅದರಲ್ಲಿ ಅಧ್ಯಯನದ ಉದ್ದೇಶಗಳು ಮತ್ತು ಮಹತ್ವವನ್ನು ಹೊಂದಿದೆ ಹಾಗೂ ಅಧ್ಯಯನಕ್ಕೆ ಅನುಸರಿಸಿದ ಸಂಶೋಧನಾ ವಿಧಿ-ವಿಧಾನ ಮತ್ತು ಅಧ್ಯಯನ ವ್ಯಾಪ್ತಿ, ಕರ್ನಲ್ ಮೆಕೆಂಝಿಯ ಭಾರತದಲ್ಲಿ ಸಂಗ್ರಹಿಸಿದ ಆಕರಗಳನ್ನು ತಾತ್ವಿಕ ವಿಚಾರಗಳಿಗೆ ಸೀಮಿತಗೊಳಿಸಲಾಗಿದೆ. ಕರ್ನಲ್ ಮೆಕೆಂಝಿಗೆ ಸಂಬಂಧಪಟ್ಟ ಇದುವರೆಗೂ ಆಗಿರುವ ಅಧ್ಯಯನಗಳ ಬಗ್ಗೆ ಚರ್ಚಿಸಲಾಗಿದೆ.

**ಎರಡನೇಯ ಅಧ್ಯಾಯ**ದಲ್ಲಿ ಕರ್ನಲ್ ಮೆಕೆಂಝಿಯ ಬಾಲ್ಯ ಮತ್ತು ವೃತ್ತಿ ಜೀವನದ ಆಯಾಮಗಳು, ಆತನ ಮೇಲೆ ಬೀರಿದ ಭೌಗೋಳಿಕ ಪ್ರಭಾವ, ವ್ಯಕ್ತಿಗಳ ಪ್ರಭಾವವನ್ನು ವಿಶ್ಲೇಷಿಸಲಾಗಿದೆ. ತದನಂತರ ಭಾರತಕ್ಕೆ ಕರ್ನಲ್ ಮೆಕೆಂಝಿಯ ಪ್ರವೇಶ, ವೃತ್ತಿ ಜೀವನದ ಬಗ್ಗೆ ಕಾಲಾನುಕ್ರಮವಾಗಿ ದಾಖಲಿಸಲಾಗಿದೆ. ಅಲ್ಲದೆ ಭಾರತ ಇತಿಹಾಸ ಆಕರಗಳ ಸಂಗ್ರಹಕಾರ್ಯದಲ್ಲಿ ಕರ್ನಲ್ ಮೆಕೆಂಝಿಯ ಪಾತ್ರ, ಅನುಸರಿಸಿದ ಕಾರ್ಯವಿಧಾನ, ಮಹತ್ವದ ಬಗ್ಗೆ ವಸ್ತುನಿಷ್ಠವಾಗಿ ದಾಖಲಿಸಲಾಗಿದೆ.

**ಮೂರನೇ ಅಧ್ಯಾಯ**ದಲ್ಲಿ ಇತಿಹಾಸ ಆಕರಗಳಾದ ಕೈಫಿಯತ್ತುಗಳ ಸಂಗ್ರಹದಲ್ಲಿ ಕರ್ನಲ್ ಮೆಕೆಂಝಿಯ ಪಾತ್ರವನ್ನು ಸಂಶೋಧನೆಯ ಮೂಲಕ ವಿಸ್ತೃತವಾಗಿ ದಾಖಲಿಸಲಾಗಿದೆ. ಅಲ್ಲದೆ ಕೈಫಿಯತ್ತು ಪದದ ಅರ್ಥ, ಅದು ಒಳಗೊಂಡಿರುವ ವಿಷಯ, ಕೈಫಿಯತ್ತುಗಳ ವರ್ಗೀಕರಣ, ವೈಜ್ಞಾನಿಕ ವಿಶ್ಲೇಷಣೆ, ಸಂಗ್ರಹದಲ್ಲಿ ಅನುಸರಿಸಿದ ಕಾರ್ಯವಿಧಾನ, ಎದುರುದಾರ ತೊಡಕುಗಳು, ಕನ್ನಡ ನಾಡಿನ ಚರಿತ್ರೆಯ ರಚನೆಯಲ್ಲಿ ಕೈಫಿಯತ್ತುಗಳ ಮಹತ್ವವನ್ನು ಸಂಶೋಧನೆಯ ಮೂಲಕ ಅನಾವರಣಗೊಳಿಸಲಾಗಿದೆ.

**ನಾಲ್ಕನೇ ಅಧ್ಯಾಯ**ದಲ್ಲಿ ಚರಿತ್ರೆಯ ರಚನೆಯಲ್ಲಿ ಕರ್ನಲ್ ಮೆಕೆಂಝಿಯ ಸಂಗ್ರಹದ ಇತರೆ ಆಕರಗಳಾದ ಹಸ್ತಪ್ರತಿಗಳು, ಶಾಸನ, ನಾಣ್ಯ, ವಿಗ್ರಹ, ನಕಾಶೆಗಳ ಬಗ್ಗೆ ವಿವರಿಸಲಾಗಿದೆ. ಈ ಆಕರಗಳ ಸಂಗ್ರಹ ಕಾರ್ಯದಲ್ಲಿ ಕರ್ನಲ್ ಮೆಕೆಂಝಿಗೆ ಸಹಾಯಕರಾಗಿದ್ದ, ದೇಶೀಯ ಪಂಡಿತರು ಹಾಗೂ ಇತರೆ ಸಹಾಯಕರ ಪಾತ್ರ

ಆಕರಗಳ ಸಂಗ್ರಹದ ಬಗ್ಗೆ ಇತಿಹಾಸಕಾರರ ಅಭಿಪ್ರಾಯವನ್ನು ನೈಜವಾಗಿ ದಾಖಲಿಸಲಾಗಿದೆ.

**ಐದನೆಯ ಅಧ್ಯಾಯ**ದಲ್ಲಿ ಕರ್ನಲ್ ಮೆಕೆಂಝಿ ಆಕರ ಸಂಗ್ರಹಗಳ ಪ್ರಸ್ತುತತೆಯ ಬಗ್ಗೆ ವಸ್ತುನಿಷ್ಠವಾಗಿ ಚರ್ಚಿಸಲಾಗಿದೆ. ಅದರೊಂದಿಗೆ ಅವುಗಳು ನೀಡುವ ಸಂದೇಶ ಮತ್ತು ಪ್ರಭಾವವನ್ನು ವಿಮರ್ಶಾತ್ಮಕವಾಗಿ ಸಂಶೋಧನೆ ಮೂಲಕ ನಿರೂಪಿಸಲಾಗಿದೆ. ಕರ್ನಲ್ ಮೆಕೆಂಝಿಯ ಮರಣದ ನಂತರದಲ್ಲಿ ಭಾರತದ ಚರಿತ್ರೆಯ ರಚನೆಯಲ್ಲಾದ ಸ್ಥಿತ್ಯಂತರಗಳ ಬಗ್ಗೆ ವಿಮರ್ಶಾತ್ಮವಾಗಿ ವಿಶ್ಲೇಷಿಸಲಾಗಿದೆ.

**ಆರನೇ ಅಧ್ಯಾಯ**ದಲ್ಲಿ ಇತಿಹಾಸ ಆಕರಗಳ ಸಂಗ್ರಹಕಾರನಾದ ಕರ್ನಲ್ ಮೆಕೆಂಝಿಯ ಒಟ್ಟಾರೆ ಜೀವನವನ್ನು ಮತ್ತು ಇತಿಹಾಸ ಆಕರಗಳ ಸಂಗ್ರಹದಲ್ಲಿ ಆತನ ಪಾತ್ರವನ್ನು ಒಟ್ಟಾರೆಯಾಗಿ ದಾಖಲಿಸಲಾಗಿದೆ. ಅಲ್ಲದೆ ಅಧ್ಯಯನದಿಂದ ತೆಗೆದುಕೊಳ್ಳಬಹುದಾದ ತೀರ್ಮಾನಗಳನ್ನು ಫಲಿತಗಳ ಮೂಲಕ ಕ್ರೋಢೀಕರಿಸಲಾಗಿದೆ. ಇದರೊಂದಿಗೆ ಕರ್ನಲ್ ಮೆಕೆಂಝಿಗೆ ಸಂಬಂಧಪಟ್ಟ ಭಾವಚಿತ್ರಗಳು ಅಲ್ಲದೆ ಸಂಗ್ರಹಿಸಿದ ಆರಕಗಳ ಚಿತ್ರಗಳನ್ನು ಒಳಗೊಂಡಿದೆ ಮತ್ತು ಅನುಬಂಧವನ್ನು ಒಳಗೊಂಡಿದೆ.

ಈ ರೀತಿಯಲ್ಲಿ ಮಹಾಪ್ರಬಂಧವು ಮಹಾನ್ ಸಾಧಕನೊಬ್ಬನ ಜೀವನ ಸಾಧನೆಯನ್ನು ಮೂಲ ಆಧಾರಗಳ ಸಹಾಯದಿಂದ ವಿಶ್ಲೇಷಿಸುವ ಮೂಲಕ **ಇತಿಹಾಸ ಆಕರಗಳ ಸಂಗ್ರಹಕಾರ ಕರ್ನಲ್ ಮೆಕೆಂಝಿ ಚಾರಿತ್ರಿಕ ವಿಶ್ಲೇಷಣೆ** ಎಂಬ ಶೀರ್ಷಿಕೆಯಡಿಯಲ್ಲಿ ಇತಿಹಾಸ ಸಂಶೋಧನೆಯ ಮೂಲಕ ಅವನ ಕೊಡುಗೆಯನ್ನು ನಿರೂಪಿಸಲಾಗಿದೆ.

## ಅಧ್ಯಾಯ –೨

# ಕರ್ನಲ್ ಮೆಕೆಂಝಿಯ ಬಾಲ್ಯ ಮತ್ತ ವೃತ್ತಿ ಜೀವನದ ಆಯಾಮಗಳು

೧೮ನೇ ಶತಮಾನದ ಕಾಲಘಟ್ಟದಲ್ಲಿ ಭಾರತದಲ್ಲಿ ಬ್ರಿಟಿಷರು ವಸಾಹತುಶಾಹಿ ವ್ಯವಸ್ಥೆಯ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕವಾಗಿ ಸಂಪೂರ್ಣ ನಿಯಂತ್ರಣವನ್ನು ಸಾಧಿಸಿದ್ದರು. ಈ ಕಾಲಘಟ್ಟದಲ್ಲಿಯೇ ಯುರೋಪಿನ ಈಸ್ಟ್ ಕಂಪನಿಯ ನೌಕರನಾಗಿ ಕರ್ನಲ್ ಮೆಕೆಂಝಿ ಭಾರತಕ್ಕೆ ಭೇಟಿ ನೀಡಿದನು. ಇತಿಹಾಸದ ಆಕರಗಳನ್ನು ಸಂಗ್ರಹಿಸುವುದೊಂದಿಗೆ ಕನ್ನಡ ಸಾಹಿತ್ಯಕ್ಕೆ ಹಾಗೂ ಕರ್ನಾಟಕ ಚರಿತ್ರೆಗೆ ದೊಡ್ಡ ಕೊಡುಗೆಗಳನ್ನು ನೀಡಿದ್ದಾನೆ.

ಕರ್ನಲ್ ಮೆಕೆಂಝಿ ಅವರ ಬಾಲ್ಯ, ಪ್ರಾರಂಭಿಕ ಜೀವನ, ಶೈಕ್ಷಣಿಕ ಪ್ರಗತಿ, ವಿದ್ಯಾಭ್ಯಾಸ ಮತ್ತು ಭಾರತಕ್ಕೆ ಭೇಟಿ ನೀಡಲು ಪ್ರೇರಣೆ ನೀಡಿದ ಘಟನೆಗಳು. ಭೇಟಿ ನೀಡಿದ ನಂತರದಲ್ಲಾದ ಜೀವನದಲ್ಲಿನ ಬೆಳವಣಿಗೆಗಳನ್ನು ಈ ಅಧ್ಯಯದಲ್ಲಿ ಅವಲೋಕಿಸಲಾಗಿದೆ. ಅಲ್ಲದೆ ಇತಿಹಾಸದ ಆಕರಗಳ ಸಂಗ್ರಹದಲ್ಲಿ ಕರ್ನಲ್ ಮೆಕೆಂಝಿ ತೊಡಗಿಸಿಕೊಂಡಿದ್ದನ್ನು ಸಂಶೋಧನೆಯಿಂದ ನಿರೂಪಿಸಲಾಗಿದೆ. ಕರ್ನಲ್ ಮೆಕೆಂಝಿಯ ಜೀವನವೂ ಸ್ಕಾಟ್‌ಲ್ಯಾಂಡಿನಿಂದ ಭಾರತದವರೆಗೂ ನಡೆದುಬಂದಿದ್ದು, ಅಲ್ಲದೆ ಅವರ ಚರಿತ್ರೆಯ ಆಕರಗಳ ಸಂಗ್ರಹ ಕಾರ್ಯವೂ ಭಾರತದ ಚರಿತ್ರೆಗೆ ನೀಡಿದ ದೊಡ್ಡ ಕೊಡುಗೆಯಾಗಿದೆ. ಅಲ್ಲದೆ ಕರ್ನಲ್ ಮೆಕೆಂಝಿ ಅವರು ತಮ್ಮ ಸ್ವಂತ ಪರಿಶ್ರಮ ಮತ್ತು ಆಸಕ್ತಿಯಿಂದ ಕರ್ನಾಟಕದ ಇತಿಹಾಸಕ್ಕೆ ಯಾವ ರೀತಿಯ ಕೊಡುಗೆಯನ್ನು ನೀಡಿದ್ದಾರೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಇತಿಹಾಸ ಕ್ಷೇತ್ರವಲ್ಲದೆ ಇತರ ಕ್ಷೇತ್ರಗಳಿಗೂ ಕರ್ನಲ್ ಮೆಕೆಂಝಿ ಅವರು ನೀಡಿರುವ ಕೊಡುಗೆಯನ್ನು ಈ ಅಧ್ಯಾಯದಲ್ಲಿ ವಿಮರ್ಶಾತ್ಮಕವಾಗಿ ಪರಿಶೀಲಿಸಲಾಗಿದೆ. ಭಾರತದ ಇತಿಹಾಸದ ರಚನೆಗೆ ಅವರ ಸಂಶೋಧನೆಗಳು ಬೀರಿದ ಪ್ರಭಾವ ಮತ್ತು ವಸಾಹತುವಾದಿ ವೈರುಧ್ಯತೆಗಳು ಯಾವ ಯಾವ ಮಜಲುಗಳಲ್ಲಿ ಸಾಗಿ ಬಂದಿತು ಎಂಬುದನ್ನು ಸಂಪೂರ್ಣವಾಗಿ ಈ ಸಂಶೋಧನೆಯಿಂದ ಅಭಿವ್ಯಕ್ತಗೊಳಿಸಲಾಗಿದೆ.

## ೨.೧ ಬಾಲ್ಯ ಜೀವನ

ಕರ್ನಲ್ ಮೆಕೆಂಝಿಯವರ ಜೀವನವು ಯುರೋಪ್‌ಖಂಡದ ಸ್ಕಾಟ್‌ಲ್ಯಾಂಡ್‌ನಿಂದ ಆರಂಭವಾಗುತ್ತದೆ. ಸ್ಕಾಟ್‌ಲ್ಯಾಂಡಿನ 'ಲೂಯಿ ದ್ವೀಪದ' ಸ್ಟಾರ್ನಾವ್ ಗ್ರಾಮದಲ್ಲಿ

೧೭೫೪ರಲ್ಲಿ ಜನಿಸಿದರು.[೧] ಇವರ ತಂದೆ ಮಾರ್ಡೋಕ್ ಮೆಕೆಂಝಿ, ತಾಯಿ ಬಾರ್ಬರಾ ಮೆಕೆಂಝಿ. ಕರ್ನಲ್ ಮೆಕೆಂಝಿ ಬಾಲಕನಾಗಿದ್ದಾಗ ಸದಾ ಓದುವುದರಲ್ಲಿ ಹೊಸ ವಿಷಯಗಳನ್ನು ಕಲಿಯುವುದರಲ್ಲಿ ನಿರತನಾಗಿದ್ದನು. ಇದರ ಜೊತೆಯಲ್ಲಿಯೇ ಬೌದ್ಧಿಕ ಅಭ್ಯಾಸಗಳನ್ನು ರೂಢಿಸಿಕೊಂಡಿದ್ದು ಉಳಿದ ಬಾಲಕರೊಂದಿಗೆ ಸದಾ ವಿಚಾರ ವಿನಿಮಯ ಸಲಹೆ ಸಹಾಯಗಳನ್ನು ಪಡೆದು ತಮ್ಮ ಜ್ಞಾನವನ್ನು ವೃದ್ಧಿಪಡಿಸಿಕೊಂಡನು. ಈ ಅವಧಿಯಲ್ಲಿ ಅವರಿಗೆ ಒಬ್ಬ ಅನುಭವಿ ವಿದ್ವಾಂಸನೂ ಆದ ಶಿಕ್ಷಕನು ಸೂಕ್ತ ಮಾರ್ಗದರ್ಶನ ನೀಡಿ ಅವರ ಶೈಕ್ಷಣಿಕ ಬೆಳವಣಿಗೆಗೆ ಕಾರಣನಾದನು.[೨] ಯಾವುದೇ ಹೊಸ ವಿಷಯ ತನ್ನ ಗಮನಕ್ಕೆ ಬಂದರೆ ಕುತೂಹಲದಿಂದ ಅದನ್ನು ಗಮನಿಸುತ್ತಿದ್ದನು. ಅವನಿಗೆ ಹೊಸತು ಏನಿದ್ದರೂ ಅದನ್ನು ತಿಳಿದುಕೊಳ್ಳಬೇಕೆನ್ನುವ ಅದಮ್ಯ ಆಸಕ್ತಿ. ಕರ್ನಲ್ ಮೆಕೆಂಝಿ ತನ್ನ ಮನೋಭಾವವನ್ನು ಒಂದು ಪತ್ರದಲ್ಲಿ A passion for anything original ಅದನ್ನು ಬಾಲ್ಯ ಕಾಲದಿಂದಲೇ ರೂಢಿಸಿಕೊಂಡಿದ್ದಾಗಿ[೩] ಹೇಳಿಕೊಂಡಿದ್ದಾನೆ.

## ೨.೨ ವ್ಯಕ್ತಿ ಮತ್ತು ಭೌಗೋಳಿಕ ಪ್ರಭಾವ

ಕರ್ನಲ್ ಮೆಕೆಂಝಿ ಜೀವಿಸಿದ್ದ ಸ್ಕಾಟ್‌ಲೆಂಡ್ ದೇಶವು ಯುರೋಪ್ ಖಂಡದ ಒಂದು ಉತ್ತಮ ಬೌದ್ಧಿಕ ಕೇಂದ್ರವಾಗಿ ಬೆಳೆದಿದ್ದಿತು. ಸ್ಕಾಟ್‌ಲೆಂಡ್‌ನಲ್ಲಿದ್ದ ಪ್ರಿಸ್ಬಿಟೇರಿಯನ್ ಚರ್ಚ್ ಒಂದು ಉತ್ತಮವಾದ ವಿದ್ಯಾಭ್ಯಾಸ ಪದ್ಧತಿಯನ್ನು ಹೊಂದಿತ್ತು. ಸ್ಥಳೀಯರು ಬೈಬಲನ್ನು ಓದುವುದಕ್ಕೆ ಸಹಾಯಕವಾಗಲೆಂದು ಅವರು ಸ್ಕಾಟ್‌ಲೆಂಡ್‌ನಲ್ಲಿ ಪರಿಣಾಮಕಾರಿಯಾದ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿದ್ದರು.[೪] ಇಂತಹ ವ್ಯವಸ್ಥೆಯ ಪ್ರಯೋಜನವನ್ನು ಪಡೆದ ಈ ದೇಶದ ಜನರು ವಿದ್ಯೆಯನ್ನು ಕಲಿಯುವುದರಲ್ಲಿ ಆಸಕ್ತಿಯನ್ನು ವಹಿಸಿ ಬೌದ್ಧಿಕ ಕ್ಷೇತ್ರದಲ್ಲಿ ಬಹುಬೇಗ ಮುಂದುವರೆದರು. ಸ್ಕಾಟ್‌ಲೆಂಡಿನ ಎಡಿನ್‌ಬರೋ ಮತ್ತು ಗ್ಲಾಸ್ಕೊ ವಿಶ್ವವಿದ್ಯಾನಿಲಯಗಳು ಅಲ್ಲಿನ ಯುವ ಜನಾಂಗಕ್ಕೆ ಉನ್ನತ ಶಿಕ್ಷಣವನ್ನು ನೀಡುವಲ್ಲಿ ಯಶಸ್ವಿಯಾಗಿದ್ದವು.[೫]

ಕರ್ನಲ್ ಮೆಕೆಂಝಿ ವಿಶ್ವವಿದ್ಯಾನಿಲಯದಲ್ಲಿ ಅಭ್ಯಾಸ ಮಾಡಿದ ಬಗ್ಗೆ ದಾಖಲೆಗಳು ಸ್ಪಷ್ಟವಾಗಿ ಲಭ್ಯವಾಗಿಲ್ಲ. ಆದರೆ ಅವನಿಗೆ ಗಣಿತಶಾಸ್ತ್ರದಲ್ಲಿ ಹೆಚ್ಚಿನ ಆಸಕ್ತಿ ಇದ್ದಿತು. ಈ ಆಸಕ್ತಿಯೇ ಮುಂದೆ ಅವನು ಭಾರತ ದೇಶಕ್ಕೆ ಬರಲು ಪ್ರಮುಖ ಕಾರಣವಾಯಿತು.

## ಕರ್ನಲ್ ಮೆಕೆಂಝಿಯ ಮೇಲೆ ನೇಫಿಯರ್ ಮತ್ತು ಫ್ರಾನ್ಸಿಸ್‌ರವರ ಪ್ರಭಾವ

ಕರ್ನಲ್ ಮೆಕೆಂಝಿಯು ಬಾಲ್ಯ ಜೀವನದಲ್ಲಿ ನೇಫೀಯರ್ ಎಂಬ ವಿದ್ವಾಂಸನ ಪ್ರಭಾವಕ್ಕೆ ಒಳಗಾಗಿದ್ದನು. ನೇಫಿಯರ್ ಎಂಬ ವಿದ್ವಾಂಸ ಗಣಿತ, ಭೌತಶಾಸ್ತ್ರ, ಖಗೋಳಶಾಸ್ತ್ರದಲ್ಲಿ ಪರಿಣಿತಿ ಹೊಂದಿದ್ದು ಇನ್ನು ಹೆಚ್ಚಿನ ವಿಷಯ ತಿಳಿದುಕೊಳ್ಳುವುದರಲ್ಲಿ ಉತ್ಸುಕನಾಗಿದ್ದನು. ಜತೆಗೆ ಲಘಗಣನಿಕೆ ಎಂಬ ಹೊಸ ಪದ್ಧತಿಯನ್ನು ಅಳವಡಿಸಿಕೊಂಡಿದ್ದನು. ಗಣಿತದಲ್ಲಿ ದಶಮಾನ ಪದ್ಧತಿಯನ್ನು ಬಳಸುವುದನ್ನು ಈತ ಪ್ರಾರಂಭಿಸಿದ್ದನು.[೬] ನೇಫಿಯರ್‌ನ ಪೂರ್ವಜನೊಬ್ಬ ಕಿರುಗಣಕ (ಲಘುಗಣನಿಕೆ)ವನ್ನು ಕಂಡು ಹಿಡಿದಿದ್ದನು. ಇಂತಹ ಪ್ರಸಿದ್ಧ ವಿದ್ವಾಂಸನ ಜೀವನ ಚರಿತ್ರೆಯನ್ನು ಗಣಿತಶಾಸ್ತ್ರದ ಹಿನ್ನೆಲೆಯಲ್ಲಿ ರಚಿಸಬೇಕೆಂದು ನೇಫಿಯರ್ ಯೋಚಿಸಿದ ಈ ವಿಷಯವು ಭಾರತದ ಮೂಲದ್ದಾಗಿದ್ದುದರಿಂದ ಯಾರಾದರೂ ಒಬ್ಬ ಮೇಧಾವಿ ಯುವಕನನ್ನು ಭಾರತಕ್ಕೆ ಕಳುಹಿಸಿ ಭಾರತದ ಲಘುಗುಣನಿಕೆಗಳನ್ನು ಸಂಗ್ರಹಿಸಿ ಅದನ್ನು ಅವನ ಜೀವನ ಚರಿತ್ರೆಯಲ್ಲಿ ಅಳವಡಿಸಿಕೊಳ್ಳಬೇಕೆಂದು ಅವನು ಯೋಚಿಸಿದನು. ಈ ಕಾರ್ಯಕ್ಕೆ ಕರ್ನಲ್ ಮೆಕೆಂಝಿಯೇ ಸೂಕ್ತವಾದ ವ್ಯಕ್ತಿಯೆಂದು ತಿಳಿದು ಅವನಿಗೆ ಈ ಸಂಗ್ರಹದ ಕೆಲಸವನ್ನು ಒಪ್ಪಿಸಿದನು.[೭] ಆ ಸಂದರ್ಭದಲ್ಲಿ ಕರ್ನಲ್ ಮೆಕೆಂಝಿಗೆ ಭಾರತಕ್ಕೆ ಹೋಗಲು ಸಾಕಷ್ಟು ಹಣವನ್ನು ಕೊಡುವುದಾಗಿ ಭರವಸೆ ನೀಡಿದನು. ಭಾರತಕ್ಕೆ ಭೇಟಿ ನೀಡುವ ಸದಾವಕಾಶ ಹಾಗೂ ಗಣಿತಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಅಧ್ಯಯನ, ಸಂಗ್ರಹದ ಅವಕಾಶ ದೊರೆತಾಗ ಕರ್ನಲ್ ಮೆಕೆಂಝಿ ಒಪ್ಪಿಕೊಂಡನು ಮತ್ತು ಭಾರತದ ಕಡೆಗೆ ಪ್ರಯಾಣ ಬೆಳೆಸಲು ಸಿದ್ಧತೆ ಮಾಡಿಕೊಂಡನು.

## ೨.೩ ಭಾರತಕ್ಕೆ ಪ್ರವೇಶ ಮತ್ತು ವೃತ್ತಿ ಜೀವನ

ಕರ್ನಲ್ ಮೆಕೆಂಝಿಯು ಸ್ಕಾಟ್‌ಲೆಂಡ್‌ನಿಂದ ತನ್ನ ೨೯ನೇ ವಯಸ್ಸಿನಲ್ಲಿ ಭಾರತಕ್ಕೆ ಪ್ರಯಾಣ ಮಾಡಿ ೧೭೮೩ರಲ್ಲಿ ಮದ್ರಾಸನ್ನು ತಲುಪಿದನು. ಆ ಸಂದರ್ಭದಲ್ಲಿ ಕರ್ನಲ್ ಮೆಕೆಂಝಿಗೆ ಭಾರತಕ್ಕೆ ಹೋಗುವಂತೆ ಮಾರ್ಗದರ್ಶನ ಮಾಡಿದ ನೇಫೀಯರ್ ಅಕಾಲಿಕ ಮರಣ ಹೊಂದಿದನು. ಈ ಸುದ್ದಿ ಅವನಿಗೆ ಆಘಾತವುಂಟಾಯಿತು.[೮] ಆದರೆ ನೇಫಿಯರ್‌ನ ಮಗಳಾದ ಹೆಸ್ಟನ್ ಜಾನ್‌ಸ್ಟನ್ ಮಧುರೈನಲ್ಲಿ ಇದ್ದಾಳೆಂದು ಕರ್ನಲ್ ಮೆಕೆಂಝಿಗೆ ನೇಫಿಯರ್ ಈ ಮೊದಲೇ ಪತ್ರದ ಮೂಲಕ ತಿಳಿಸಿದ್ದನು. ಇದು ಕರ್ನಲ್ ಮೆಕೆಂಝಿಗೆ ವೃತ್ತಿ ಆರಂಭಿಸಲು ಸಹಾಯಕವಾಯಿತು.

ಆ ಸಂದರ್ಭದಲ್ಲಿ ದಕ್ಷಿಣ ಭಾರತದ ಮಧುರೈ ಸಾಂಸ್ಕೃತಿಕ ಕೇಂದ್ರವಾಗಿತ್ತು. ಕರ್ನಲ್ ಮೆಕೆಂಝಿಗೆ ಮಧುರೈನಲ್ಲಿ ಕಾಲ ಕಳೆದ ದಿನಗಳು ಸ್ಥಳೀಯ ಚರಿತ್ರೆಯನ್ನು ಅರಿತುಕೊಳ್ಳಲು ಉಪಯುಕ್ತವಾಯಿತು. ಅವನು ದಕ್ಷಿಣ ಭಾರತದ ಸಮೃದ್ಧ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಸಂಬಂಧಿಸಿದ ಆಧಾರಗಳನ್ನು ಸಂಗ್ರಹಿಸಲು ಯೋಚಿಸಿದ ಆದರೆ ತಾನು ನೆಲೆನಿಲ್ಲಲು ಒಂದು ಉದ್ಯೋಗ ಅಗತ್ಯವಾಗಿದ್ದಿತು. ಆದುದರಿಂದ ಆತ ಬ್ರಿಟೀಷರ ಪ್ರಮುಖ ಕೇಂದ್ರವಾಗಿದ್ದ ಮದ್ರಾಸಿಗೆ ಹಿಂದಿರುಗಿದ. ಕಾಲಾನಂತರ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಮಿಲಿಟರಿ ವಿಭಾಗದಲ್ಲಿ ಕಾಮಗಾರಿ ಇಲಾಖೆಯಲ್ಲಿ ನೌಕರಿಗೆ ಸೇರಿಕೊಂಡನು.[೯]

ಕರ್ನಲ್ ಮೆಕೆಂಝಿ ಕೂಡಲೇ ಮಧುರೈಗೆ ಹೋಗಿ ನೇಫಿಯರನ ಮಗಳು ಹೆಸ್ಟನ್ ಜಾನ್‌ಸ್ಟನ್ ಎಂಬ ಮಹಿಳೆಯನ್ನು ಭೇಟಿ ಮಾಡಿದನು. ಆಕೆ ಮಧುರೈ ಹಿಂದೂ ಕಾಲೇಜಿನಲ್ಲಿ ಪ್ರಾಧ್ಯಾಪಕಿಯಾಗಿದ್ದಳು. ಆಕೆಗೂ ಕೂಡ ಭಾರತದ ಬಗ್ಗೆ ಹೊಸ ವಿಷಯಗಳನ್ನು ಅರಿತುಕೊಳ್ಳಲು ಅತೀವವಾದ ಆಸಕ್ತಿಯನ್ನು ಹೊಂದಿದ್ದಳು.[೧೦] ಭಾರತೀಯ ಶಾಸ್ತ್ರಗಳನ್ನು ಓದಿಸಲು ಆಕೆ ಒಬ್ಬ ಪಂಡಿತನನ್ನು ನೇಮಿಸಿಕೊಂಡಿದ್ದಳು. ಅಲ್ಲದೆ ಅನೇಕ ಸ್ಥಳೀಯ ವಿದ್ವಾಂಸರು ಈಕೆಯನ್ನು ಆಗಾಗ ಭೇಟಿ ಮಾಡುತ್ತಿದ್ದರು.[೧೧] ಅವರೊಂದಿಗೆ ಭಾರತದ ಗಣಿತಶಾಸ್ತ್ರದ ಬಗ್ಗೆ ಚರ್ಚಿಸುತ್ತಿದ್ದಳು. ಕರ್ನಲ್ ಮೆಕೆಂಝಿ ಹೆಸ್ಟನ್ ಜಾನ್‌ಸನ್‌ರ ಪರಿಚಯವು ಭಾರತದ ಗಣಿತಶಾಸ್ತ್ರದ ಬಗ್ಗೆ ಅಧ್ಯಯನ ಮಾಡಿ ದಾಖಲಿಸಲು ಭದ್ರಬುನಾದಿಯಾಯಿತು. ಇವರ ಭೇಟಿಯು ಮುಂದೆ ಕರ್ನಲ್ ಮೆಕೆಂಝಿಗೆ ಭಾರತದ ಗಣಿತಶಾಸ್ತ್ರದ ಬಗ್ಗೆ ತಿಳಿದುಕೊಳ್ಳಲು ಇನ್ನೂ ಹೆಚ್ಚಿನ ಸದಾವಕಾಶವಾಯಿತು.

ಭಾರತೀಯ ವಿದ್ವಾಂಸರ ಭೇಟಿಯಿಂದ ಅವನು ಹೊಸ ಹೊಸ ವಿಷಯಗಳನ್ನು ಕಲಿತುಕೊಳ್ಳತೊಡಗಿದನು. ಭಾರತ ದೇಶದ ಇತಿಹಾಸ, ಸಂಸ್ಕೃತಿ, ವಿದ್ಯೆ, ಸಾಹಿತ್ಯ ಮುಂತಾದವುಗಳನ್ನು ಕಲಿಯಬೇಕೆಂಬ ಹಂಬಲ ಅವನಲ್ಲಿ ಮೂಡಲಾರಂಭಿಸಿತು.[೧೨] ಕರ್ನಲ್ ಮೆಕೆಂಝಿಯು ಭಾರತಕ್ಕೆ ಬಂದದ್ದು ಮೂಲತಃ ಸಂಗ್ರಹಕಾರನಾಗಿ ಕೆಲಸ ಮಾಡಲು. ಆತ ಭಾರತಕ್ಕೆ ಬರುವ ಮುನ್ನ ಬ್ರಿಟಿಷ್ ಸೈನ್ಯದಲ್ಲಿ ಒಬ್ಬ ಸಾಮಾನ್ಯ ಸೈನಿಕನಾಗಿದ್ದನು. ಕರ್ನಲ್ ಮೆಕೆಂಝಿಗೆ ಮೊದಲಿನಿಂದಲೂ ಗಣಿತಶಾಸ್ತ್ರದಲ್ಲಿ ಅತಿಶಯ ಆಸಕ್ತಿ ಇತ್ತು. ಲಘುಗಣಕಿಯನ್ನು ಬರೆದ ಜಾನ್ ನೇಪಿಯರನ ಜೀವನ ಚರಿತ್ರೆಯನ್ನು ಬರೆಯುವ ಕೆಲಸವನ್ನು ನೇಪಿಯರನ ವಂಶಸ್ಥನೇ ಆದ ಫ್ರಾನ್ಸಿಸ್ ಎಂಬಾತ ಕೈಗೊಂಡಿದ್ದ.[೧೩] ಗಣಿತಶಾಸ್ತ್ರದಲ್ಲಿ ಸಹಜವಾಗಿಯೇ ಆಸಕ್ತಿ ಇದ್ದ ಕರ್ನಲ್

ಮೆಕೆಂಝಿಯನ್ನು ಫ್ರಾನ್ಸಿಸ್ ಭಾರತೀಯ ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ಮಾಹಿತಿಯನ್ನು ಕಲೆಹಾಕಲು ನೇಮಕ ಮಾಡಿಕೊಂಡನು.[೧೪] ಆತನ ನಿರ್ದೇಶನದ ಮೇರೆಗೆ ಭಾರತೀಯ ಗಣಿತಶಾಸ್ತ್ರವನ್ನು ವಿಸ್ತೃತವಾಗಿ ಅರಿತು[೧೫]ಕೊಳ್ಳಲು ಭಾರತಕ್ಕೆ ಬಂದ ಕರ್ನಲ್ ಮೆಕೆಂಝಿ. ಇಡೀ ದಕ್ಷಿಣ ಭಾರತವನ್ನೇ ಸಂಚರಿಸಿ ದಾಖಲೆಗಳನ್ನು ಸಂಗ್ರಹಿಸುತ್ತಾ, ಸ್ಥಳೀಯ ಭಾಷೆಗಳನ್ನು ಕಲಿತುಕೊಂಡಿದ್ದನು. ಸ್ಥಳೀಯ ಭಾಷಾ ಸಮಸ್ಯೆ ಎದುರಾದಾಗ ಕಾವಲಿ ವೆಂಕಟ ಬೋರಯ್ಯನ[೧೬] ನೆರವನ್ನು ಪಡೆದುಕೊಂಡನು. ಕರ್ನಲ್ ಮೆಕೆಂಝಿ ಕಾವಲಿ ವೆಂಕಟ ಬೋರಯ್ಯನನ್ನೇ ಸೂಕ್ತವ್ಯಕ್ತಿ ಎಂದು ಅರಿತು ತನ್ನ ಭಾಷಾಂತರಕಾರನನ್ನಾಗಿ ನೇಮಿಸಿಕೊಂಡನು. ಭಾರತೀಯ ಗಣಿತಶಾಸ್ತ್ರ, ರೇಖಾಗಣಿತ, ಭೂಗೋಳಶಾಸ್ತ್ರ, ಖಗೋಳಶಾಸ್ತ್ರ ಮುಂತಾದುವನ್ನೆಲ್ಲ ಕಲಿತು ಕರಗತ ಮಾಡಿಕೊಂಡನು.[೧೭] ಕರ್ನಲ್ ಮೆಕೆಂಝಿ ಸಂಗ್ರಹಿಸುತ್ತಿದ್ದ ವಿವಿಧ ಭಾಷೆ ಮತ್ತು ಲಿಪಿಗಳ ಅಭ್ಯಾಸ, ಭೂಗೋಳ ಪಟಗಳ ರಚನೆ ಮುಂತಾದವುಗಳ ಬಗ್ಗೆ ವಿಧಿವತ್ತಾಗಿ ಚರ್ಚೆಯ ಮೂಲಕ ವಿಷಯ ವಿನಿಮಯ ಮಾಡಿಕೊಂಡು ತಮಿಳು, ಕನ್ನಡ, ತೆಲುಗು ಮತ್ತು ಸಂಸ್ಕೃತ ಶಾಸನಗಳನ್ನು ಕಾವಲಿ ವೆಂಕಟ ಬೋರಯ್ಯನಿಂದ ಓದಿಸಿ ಅರ್ಥ ಮಾಡಿಕೊಂಡನು.[೧೮]

ಈ ಸಂದರ್ಭದಲ್ಲಿಯೇ ಭಾರತಕ್ಕೆ ಕಳುಹಿಸಿಕೊಟ್ಟ ಫ್ರಾನ್ಸಿಸ್ ಎಂಬಾತ ಮರಣದ ಹೊಂದಿದನು. ಇದರಿಂದ ತನ್ನ ಉದ್ದೇಶ ಮತ್ತು ಆಸೆ-ಅಪೇಕ್ಷೆಗಳನ್ನು ಬದಲಿಸಿಕೊಂಡ ಕರ್ನಲ್ ಮೆಕೆಂಝಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಸೈನ್ಯಕ್ಕೆ ಸಂಬಂಧಿಸಿದ ಸಾರ್ವಜನಿಕ ಕಾಮಗಾರಿ ಇಲಾಖೆಯಲ್ಲಿ ಕೆಡೆಟ್ ಆಫ್ ಎಂಜಿನಿಯರ್ ಎಂಬ ಹುದ್ದೆ ಪಡೆದು ಕ್ಷೇತ್ರ ವೀಕ್ಷಣಾಧಿಕಾರಿಯಾಗಿ ಮದ್ರಾಸ್ ಪ್ರಾಂತ್ಯದಲ್ಲಿ ಕೆಲಸಕ್ಕೆ ಸೇರಿಕೊಂಡನು.

## ವೃತ್ತಿ ಜೀವನ

ಕರ್ನಲ್ ಮೆಕೆಂಝಿಯ ಸ್ಕಾಟ್‌ಲೆಂಡ್‌ನಿಂದ ಭಾರತಕ್ಕೆ ಬಂದನು. ನಂತರ ಬ್ರಿಟಿಷ್ ಈಸ್ಟ್ ಕಂಪನಿಯಲ್ಲಿ ವಿವಿಧ ವೃತ್ತಿಗಳನ್ನು ನಿಭಾಯಿಸಿದನು ಎಂಬುದನ್ನು ಈ ಸಂಶೋಧನೆಯಿಂದ ಅನಾವರಣಗೊಳಿಸಲಾಗಿದೆ. ಭಾರತದಲ್ಲಿ ಬ್ರಿಟೀಷರು ಹಲವಾರು ದೇಶೀಯ ರಾಜರುಗಳೊಂದಿಗೆ ಸಂಘರ್ಷಗಳಲ್ಲಿ ತೊಡಗಿದ್ದರು.[೧೯] ಬ್ರಿಟೀಷರಿಗೆ ಭಾರತದ ಭೌಗೋಳಿಕ ಐತಿಹಾಸಿಕ ಹಾಗೂ ಸಾಮಾಜಿಕ ಹಿನ್ನೆಲೆ ಅಷ್ಟಾಗಿ ತಿಳಿದಿರಲಿಲ್ಲ. ಅವರು ಹಲವಾರು ಯುದ್ಧಗಳಲ್ಲಿ ಭಾಗವಹಿಸಲು ಆ ಪ್ರದೇಶದ ಭೌಗೋಳಿಕ ಲಕ್ಷಣಗಳು ತಿಳಿದಿರಲಿಲ್ಲ. ಅಲ್ಲಿನ ನೆಲ-ಜಲ, ಬಲ, ಜನ ಇವುಗಳ ಪರಿಚಯವೂ ಅವರಿಗಿರಲಿಲ್ಲ. ಇಂತಹ ವಿಷಯಗಳಲ್ಲಿ ಹೆಚ್ಚು ಪರಿಣಿತಿಗಳಿಸಿದ್ದ ಕರ್ನಲ್ ಮೆಕೆಂಝಿಯನ್ನು ಈ ಕೆಲಸಕ್ಕೆ

ನೇಮಿಸಿಕೊಂಡರು.[೨೦] ಕರ್ನಲ್ ಮೆಕೆಂಝಿ ಯವರ ಕಾರ್ಯದಿಂದ ಬ್ರಿಟಿಷ್ ಸರ್ಕಾರಕ್ಕೆ ಈ ಕಾಲಘಟ್ಟದಲ್ಲಿ ಇಲ್ಲಿನ ಪ್ರದೇಶಗಳ ಮೋಜಿನಿ (ಸರ್ವೆ) ಮತ್ತು ನಕಾಶೆಗಳು,[೨೧] ಯುದ್ಧ ತಂತ್ರಗಳನ್ನು ರೂಪಿಸಲು ಅಗತ್ಯವಾಗಿದ್ದ ದಾಖಲೆಗಳನ್ನು ಪಡೆದುಕೊಂಡರು. ೧೭೮೩ ರಿಂದ ೧೭೯೩ರವರೆಗೂ ದಿಂಡಿಕಲ್ ಕೊಯಮತ್ತೂರು, ಕುಂಟೂರು, ನೆಲ್ಲೂರುಗಳಲ್ಲಿ ಸೈನಿಕ ಹುದ್ದೆಯನ್ನು ನಿರ್ವಹಿಸಿದನು. ಕರ್ನಲ್ ಮೆಕೆಂಝಿಯ ಮೊದಲ ಜವಾಬ್ದಾರಿಯೇ ಶ್ರೀರಂಗಪಟ್ಟಣದ ಕಡೆ ಬ್ರಿಟಿಷ್ ಸೈನ್ಯದೊಡನೆ ಬಂದು, ಆ ಪ್ರದೇಶ ಸಮೀಕ್ಷೆ ನಡೆಸಿ, ಟಿಪ್ಪುವಿನ ವಿರುದ್ಧ ಜನಾಭಿಪ್ರಾಯವನ್ನು ಸಂಘಟಿಸುವುದೇ ಆಗಿತ್ತು. ತದನಂತರ ೩ನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಭಾಗವಹಿಸಿದನು. ೧೭೯೩ ರಿಂದ ೧೭೯೬ರವರೆಗೆ ಹೈದ್ರಾಬಾದ್ ನಿಜಾಮನಿಂದ ಈಸ್ಟ್ ಇಂಡಿಯಾ ಕಂಪನಿಗೆ ಬಂದಿದ್ದ ಭೂಮಿಯನ್ನು ಭೂ ಸಮೀಕ್ಷೆ ಕಾರ್ಯವನ್ನು ನಿರ್ವಹಿಸಿದನು. ಅಲ್ಲಿ ಆತ ಪಟ್ಟ ಶ್ರಮ, ಆತನ ನಿಷ್ಠೆ, ಕಠಿಣ ಪರಿಶ್ರಮಕ್ಕಾಗಿ, ಹಂತ ಹಂತವಾಗಿ ಫಸ್ಟ್ ಲೆಫ್ಟಿನೆಂಟ್, ಕ್ಯಾಪ್ಟನ್, ಮೇಜರ್, ಕರ್ನಲ್ ಈ ಹುದ್ದೆಗಳಿಗೆ ಪದೋನ್ನತಿ ಹೊಂದಿದನು. ಅವುಗಳನ್ನು ಸಮರ್ಥವಾಗಿ ನಿರ್ವಹಿಸಿದನು.[೨೨]

ಕರ್ನಲ್ ಮೆಕೆಂಝಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಗೆ ಅಗತ್ಯವಾಗಿದ್ದ ಯುದ್ಧತಂತ್ರಕ್ಕೆ ಪೂರಕವಾಗಿದ್ದ ಕಾರ್ಯವನ್ನು ಕೈಗೊಂಡನು. ಯುದ್ಧ ಭೂಮಿಯ ಸ್ವರೂಪ, ಬೆಟ್ಟ ಗುಡ್ಡ ಕಾಡು ಮೇಡು ನದಿ ಕೆರೆ ಬಯಲು, ಹಳ್ಳಿ, ನಗರಗಳ ಚಿತ್ರಣ ಸೈನ್ಯದ ಚಲನವಲನಗಳಿಗೆ ಅಗತ್ಯವಾದ ಮಾರ್ಗ, ಸೇತುವೆ ಮುಂತಾದವು ಸಾಮಾನು ಸರಂಜಾಮು, ಯುದ್ಧ ಸಾಮಾಗ್ರಿ ಸಾಗಿಸಲು ಸುಗಮ ಸಂಚಾರ ವ್ಯವಸ್ಥೆ ಅವುಗಳನ್ನೆಲ್ಲ ಪರಿಶೀಲಿಸಿ ಸೈನ್ಯಾಧಿಕಾರಿಗಳಿಗೆ ಮಾಹಿತಿಯನ್ನು ಒಪ್ಪಿಸಿದನು.[೨೩] ಕರ್ನಲ್ ಮೆಕೆಂಝಿ ಸಲ್ಲಿಸಿದ ವರದಿ ಬ್ರಿಟೀಷರಿಗೆ ಬಹಳ ಉಪಯುಕ್ತ ಮಾಹಿತಿಯಾಗಿ ಕಂಡು ಬಂದಿತು.[೨೪] ಅದನ್ನು ಗಂಭೀರವಾಗಿ ಅನುಸರಿಸಿ ಕಾರ್ಯಾಚರಣೆ ಕೈಗೊಂಡಾಗ ಅವರಿಗೆ ಯುದ್ಧದಲ್ಲಿ ಅದ್ಭುತವಾದ ಯಶಸ್ಸು ಕಂಡುಬಂದಿತು. ಇದರಿಂದಾಗಿ ಕರ್ನಲ್ ಮೆಕೆಂಝಿಯ ವರ್ಚಸ್ಸು ಏರುತ್ತ ಹೋಯಿತು. ಅಧಿಕಾರಿಗಳು ಸೂಚಿಸಿದ ಪ್ರದೇಶವನ್ನು ಕೂಲಂಕುಷವಾಗಿ ಅಧ್ಯಯನ ಮಾಡಿ ವರದಿ ತಯಾರಿಸಿ ಸಲ್ಲಿಸುತ್ತಿದ್ದುದಲ್ಲದೆ ಆತನೂ ಕೂಡ ಯುದ್ಧದಲ್ಲಿ ಭಾಗವಹಿಸುತ್ತಿದ್ದನು.[೨೫]

ಮೈಸೂರಿನಲ್ಲಿ ಹೈದರ್ ಮತ್ತು ಟಿಪ್ಪುರವರ ಪ್ರತಿರೋಧ ಬ್ರಿಟೀಷ್‌ರಿಗೆ ಒಂದು ದೊಡ್ಡ ಸವಾಲಾಗಿದ್ದಿತು ಆದ್ದರಿಂದ ಬ್ರಿಟೀಷ್ ಸೈನ್ಯವನ್ನು ಮದ್ರಾಸ್ ಬಳಿ ಇಕ್ಕಟ್ಟಿನ ಪ್ರಸಂಗಕ್ಕೆ ಸಿಲುಕಿಸಿ ಬ್ರಿಟೀಷರನ್ನು ಸದೆಬಡಿಯುವ ಅವಕಾಶವು ಲಭಿಸಿದ್ದಿತು.[೨೬]

ಆದುದರಿಂದ ಬ್ರಿಟೀಷರಿಗೆ ಟಿಪ್ಪುವಿನ ಮೇಲಿನ ಯುದ್ಧಗಳನ್ನು ನಡೆಸಲು ಸಂಪೂರ್ಣವಾದ ನಕಾಶೆ, ಇಂಜಿನಿಯರಿಂಗ್‌ಗೆ ಸಂಬಂಧಪಟ್ಟ ಮಾರ್ಗದರ್ಶನ ಸೈನ್ಯದ ಚಲನವಲನಗಳನ್ನು ಗುರುತಿಸುವುದು ಜನಾಭಿಪ್ರಾಯ ಸಂಗ್ರಹಿಸುವುದು ಬಹುಮುಖ್ಯವಾಗಿದ್ದವು[೨೭] ಕರ್ನಲ್ ಮೆಕೆಂಝಿ ಈ ಕಾರ್ಯಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿ ಬ್ರಿಟೀಷರ ಪ್ರಶಂಸೆಗೆ ಪಾತ್ರನಾದನು.[೨೮]

ಮೂರನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಭಾಗವಹಿಸಿ ಬ್ರಿಟೀಷರ ಪ್ರಶಂಸೆಗೆ ಪಾತ್ರನಾಗಿದುದಲ್ಲದೆ ಯುದ್ಧದ ಗೆಲುವಿಗೆ ಕಾರಣನಾದವನೆಂಬ ಕಾರಣಕ್ಕೆ ಅವನಿಗೆ ೨೦೬ ರೂ.ಗಳನ್ನು ಹಣದ ರೂಪದಲ್ಲಿ ಬಹುಮಾನ ಪಡೆದುಕೊಂಡನು.[೨೯]

**ಭಾರತದ ಪ್ರಥಮ ಸರ್ವೆಯರ್ ಜನರಲ್ ಕರ್ನಲ್ ಮೆಕೆಂಝಿ**

ಕರ್ನಲ್ ಮೆಕೆಂಝಿಯು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯಲ್ಲಿ ವಿವಿಧ ಹುದ್ದೆಗಳನ್ನು ನಿರ್ವಹಿಸುತ್ತ ಹಂತ ಹಂತವಾಗಿ ಉನ್ನತ ಸ್ಥಾನವನ್ನು ಪಡೆದುಕೊಂಡನು. ಕ್ರಮವಾಗಿ ೧೭೮೯ರಲ್ಲಿ ಲೆಫ್ಟಿನೆಂಟ್ ಹುದ್ದೆ, ೧೮೦೬ರಲ್ಲಿ ಮೇಜರ್ ಹುದ್ದೆ, ೧೮೦೯ರಲ್ಲಿ ಲೆಫ್ಟಿನೆಂಟ್ ಕರ್ನಲ್,[೩೦] ಕೊನೆಗೆ ೧೮೧೯ರಲ್ಲಿ ಕರ್ನಲ್ ಹುದ್ದೆಗಳನ್ನು ಸಮರ್ಥವಾಗಿ ನಿಭಾಯಿಸಿದನು. ಕರ್ನಲ್ ಮೆಕೆಂಝಿಯು ಮಿಲಿಟರಿಯಲ್ಲಿ ಲೆಫ್ಟಿನೆಂಟ್ ಹುದ್ದೆಯನ್ನು ಪಡೆದುಕೊಂಡಿದ್ದುದು ಒಂದಾದರೆ, ಇತ್ತ ಭೂಮಾಪನ ಹಾಗೂ ಸರ್ವೆ ಕೆಲಸವನ್ನು ಮಾಡುತ್ತಿದ್ದನು. ೧೭೯೯ ರಿಂದ ೧೮೧೦ ರವರೆವಿಗೂ ಮೈಸೂರು ಪ್ರಾಂತ್ಯದಲ್ಲಿ ಭೂ ಪರೀಕ್ಷಕನಾಗಿ, ದಕ್ಷಿಣ ಭಾರತ ಭೂಪಟ ರಚನೆ ಕಾರ್ಯನಿರ್ವಹಿಸಿದನು. ೧೮೧೧ ರಿಂದ ೧೮೧೬ ರವರೆವಿಗೂ ಜಾವ ದ್ವೀಪಕ್ಕೆ ತೆರಳಿ ಸೈನಿಕ ಖಾತೆ ನಿರ್ವಹಿಸಿದನು. ಇದರಿಂದ ೧೮೧೩ರಲ್ಲಿ ಮದ್ರಾಸ್ ಪ್ರಾಂತ್ಯದ ಪ್ರಧಾನ ಸರ್ವೇಯರ್ ಆಗಿ ನೇಮಕ ಹೊಂದಿದ್ದನು.[೩೧] ಮುಂದೆ ಎರಡೇ ವರ್ಷಗಳಲ್ಲಿ ಬಡ್ತಿ ದೊರೆತು ಸಮಗ್ರ ಭಾರತದ ಪ್ರಥಮ ಸರ್ವೆಯರ್ ಜನರಲ್ ಹುದ್ದೆಗೇರಿದನು.[೩೨] ಆದುದರಿಂದ ಭಾರತದ ಪ್ರಥಮ ಸರ್ವೇಯರ್ ಜನರಲ್ ಎಂಬುದಾಗಿ ಕರ್ನಲ್ ಮೆಕೆಂಝಿಯನ್ನು ಪರಿಗಣಿಸಲಾಗಿದೆ. ಪರಿಣಾಮವಾಗಿ ಲಂಡನ್ನಿನಲ್ಲಿರುವ ರಾಯಲ್ ಜಿಯಾಗ್ರಾಫಿಕಲ್ ಸೊಸೈಟಿಯು ಕರ್ನಲ್ ಮೆಕೆಂಝಿಗೆ ಗೌರವ ಸದಸ್ಯತ್ವ ನೀಡಿತು.[೩೩] ಕರ್ನಲ್ ಮೆಕೆಂಝಿ ಕೈಗೊಂಡ ಪ್ರಮುಖ ಯೋಜನೆಗಳಲ್ಲಿ ಹೈದ್ರಾಬಾದ್ ನಿಜಾಮ್ ಸಂಸ್ಥಾನದ ಭೂಸಮೀಕ್ಷೆ ಹಾಗೂ ಮೈಸೂರು ಸಂಸ್ಥಾನದ ಭೂಮಿಸಮೀಕ್ಷೆ ಮಾಡಿದುದು ಬಹಳ ಮುಖ್ಯವಾದುದು. ಹೈದರಾಬಾದ್ ಸಂಸ್ಥಾನದ ಭೂ ಸಮೀಕ್ಷೆ ಬ್ರಿಟೀಷರಿಗೆ ಅತ್ಯಂತ ಮುಖ್ಯವಾದುದಾಗಿತ್ತು. ಟಿಪ್ಪು ಸುಲ್ತಾನ್

ಗೆದ್ದುಕೊಂಡಿದ್ದ ನಿಜಾಮನ ಪ್ರದೇಶಗಳನ್ನು ಅವನಿಗೆ ಮರಳಿಸಬೇಕಾಗಿದ್ದುದರಿಂದ ಅವುಗಳ ಮೇಲೆ ಈಸ್ಟ್ ಇಂಡಿಯಾ ಕಂಪನಿ ತನ್ನ ನಿಯಂತ್ರಣವನ್ನು ಉಳಿಸಿಕೊಂಡಿದ್ದಿತು. ಹೈದ್ರಬಾದ್ ನಿಜಾಮನ ಸಂಸ್ಥಾನದ ಸಮಗ್ರ ಭೂ ಸಮೀಕ್ಷೆ ಆಗಬೇಕೆಂದು ಲಾರ್ಡ್ ಕಾರ್ನ್‌ವಾಲೀಸ್ ನಿರ್ಧರಿಸಿದ್ದರು. ಕರ್ನಲ್ ಮೆಕೆಂಝಿ ೧೭೮೩ ರಿಂದ ೧೭೯೦ ರವರೆಗೆ ಅಂದರೆ ಏಳು ವರ್ಷಗಳ ಕಾಲ ದಿಂಡಿಗಲ್ ಕೊಯಮತ್ತೂರು, ಗುಂಟೂರು, ನೆಲ್ಲೂರು ಪ್ರಾಂತ್ಯಗಳಲ್ಲಿ ಸೈನಿಕ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದನು. ತದನಂತರ ೧೭೯೦-೯೨ರ ಅವಧಿಯಲ್ಲಿ ನಡೆದ ಆಂಗ್ಲೋ ಮೈಸೂರು ಯುದ್ಧಗಳಲ್ಲಿ ಭಾಗವಹಿಸಿದನು. ಹೈದ್ರಾಬಾದ್ ನಿಜಾಮನಿಂದ ಈಸ್ಟ್ ಇಂಡಿಯಾ ಕಂಪನಿಗೆ ಬಂದಿದ್ದ ಭೂಪ್ರದೇಶವನ್ನು ೧೭೯೩ರಲ್ಲಿ ಭೂ ಸಮೀಕ್ಷೆ ಮಾಡಿ ನಕಾಶೆ ತಯಾರಿಸಿ ಅಧಿಕಾರಿಗಳಿಗೆ ಒಪ್ಪಿಸಿದನು. ಇಂತಹ ಭೂ ಸಮೀಕ್ಷೆಯಿಂದ ಭಾರತದ ದೇಶೀಯ ಸಂಸ್ಥಾನಗಳ ಗಡಿಗಳನ್ನು ನಿರ್ಧರಿಸಬೇಕಾಗಿದ್ದಿತು. ಇದಕ್ಕಾಗಿ ಕರ್ನಲ್ ಮೆಕೆಂಝಿ ಕಾಡು, ಮೇಡು, ಗುಡ್ಡ, ನದಿ ಬಯಲು ಸುತ್ತಿ ಭೂಪ್ರದೇಶಗಳನ್ನು ಗಮನಿಸಿ ಒಂದು ವರದಿಯನ್ನು ತಯಾರಿಸಬೇಕಾಗಿದ್ದಿತು. ಕರ್ನಲ್ ಮೆಕೆಂಝಿ ಅತ್ಯಲ್ಪ ಅವಧಿಯಲ್ಲಿ ಹೈದರಾಬಾದಿನ ಭೂ ಸಮೀಕ್ಷೆಯನ್ನು ಮಾಡಿ ಮುಗಿಸಿದನು. ಆದ್ದರಿಂದ ಮೊದಲ ಬಾರಿಗೆ ಹೈದರಾಬಾದ್ ಪ್ರದೇಶದ ಸೀಮೆಯನ್ನು ಕುರಿತ ಪರಿವೀಕ್ಷಣಾ ವರದಿ ಸಿದ್ಧಪಡಿಸಿದ ಖ್ಯಾತಿ ಕರ್ನಲ್ ಮೆಕೆಂಝಿಗೆ ಸಲ್ಲುತ್ತದೆ.

ಹೈದರಾಬಾದ್ ಭೂ ಸಮೀಕ್ಷೆ ನಂತರ ಕರ್ನಲ್ ಮೆಕೆಂಝಿಯನ್ನು ಸಿಂಹಳ ದೇಶಕ್ಕೆ ಕಳುಹಿಸಲಾಯಿತು. ಅಲ್ಲಿಯ ಭೂ ಸಮೀಕ್ಷೆ ಮಾಡಿ ವರದಿ ನೀಡಿದ ಕರ್ನಲ್ ಮೆಕೆಂಝಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದನು. ೧೭೯೦ರಲ್ಲಿ ಸಿಂಹಳದಲ್ಲಿ ಭೂಪರಿವೀಕ್ಷಣೆ ನಡೆಸಿದ ಎರಡು ವರ್ಷಗಳ ಕಾಲ ಅಲ್ಲಿಯೇ ವಾಸವಿದ್ದು ಅಚ್ಚುಕಟ್ಟಾಗಿ ಸಿಂಹಳದ ಭೌಗೋಳಿಕ ನಕ್ಷೆಯನ್ನು ರೂಪಿಸಿ ಮರಳಿ ಭಾರತಕ್ಕೆ ಬಂದನು.[೩೪] ತದನಂತರ ಸೈನಿಕ ಹುದ್ದೆಯಲ್ಲಿ ಕರ್ತವ್ಯ ಮುಂದುವರಿಸಿದನು. ಈ ಸಂದರ್ಭದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಸರ್ಕಾರ ಟಿಪ್ಪುಸುಲ್ತಾನ್ ವಿರುದ್ಧ ೪ನೇ ಆಂಗ್ಲೋ ಮೈಸೂರು ಯುದ್ಧಕ್ಕೆ ಸಿದ್ಧತೆಯಲ್ಲಿತ್ತು.[೩೫] ಗೌರ್ನರ್ ಜನರಲ್ ಲಾಡ ಕಾರ್ನ್‌ವಾಲೀಸ್ ಈ ದಾಳಿಯ ನೇತೃತ್ವವನ್ನು ವಹಿಸಿದ್ದನು.

೧೭೯೯ರ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣಾನಂತರ ಬ್ರಿಟೀಷರು ಮೈಸೂರನ್ನು ಪಡೆದುಕೊಂಡರು. ಆಗ ಅಲ್ಲಿ ಸರ್ವೇಯರ್ ಆಗಿ ಕಾರ್ಯನಿರ್ವಹಿಸಲು ನೇಮಕಗೊಂಡ ಕರ್ನಲ್ ಮೆಕೆಂಝಿ ಈಸ್ಟ್ ಇಂಡಿಯಾ

ಕಂಪನಿಯಲ್ಲಿ ಅತ್ಯುತ್ತಮ ವ್ಯಕ್ತಿಯಾಗಿ ಕೊನೆಗೆ ಬ್ರಿಟಿಷ್ ವಸಾಹತುಶಾಹಿ ಇಂಡಿಯಾದ ಪ್ರಥಮ ಸರ್ವೇಯರ್ ಜನರಲ್ ಆಗಿ ನಿವೃತ್ತಿ ಹೊಂದಿದನು.

೧೮೯೯ರಿಂದ ೧೮೧೦ರ ವರೆಗೆ ಮತ್ತೊಂದು ಬಹುಮುಖ್ಯ ಕಾರ್ಯಕ್ಕೆ ಕರ್ನಲ್ ಮೆಕೆಂಝಿ ತೊಡಗಿದನು. ಅದು ಮೈಸೂರು ಸಂಸ್ಥಾನದಲ್ಲಿ ಟಿಪ್ಪು ಸುಲ್ತಾನನ ವಿರುದ್ಧ ಪ್ರಚಾರ ಮಾಡುವುದಾಗಿತ್ತು ಎಂದು ಓರಿಯಂಟಲಿಸ್ಟ್ ಇತಿಹಾಸಕಾರರು ವಿಶ್ಲೇಷಿಸಿದ್ದಾರೆ. ಹಲವು ಕಾರಣಗಳಿಂದಾಗಿ ಮೈಸೂರು ಪ್ರಾಂತ್ಯದದ ಜನಮಾನಸದಲ್ಲಿ ಟಿಪ್ಪುಸುಲ್ತಾನ್ ಅಚ್ಚಳಿಯದೆ ಉಳಿದುಕೊಂಡಿದ್ದನು. ೩ನೇ ಆಂಗ್ಲೋ ಮೈಸೂರು ಯುದ್ಧದ ನಂತರದಲ್ಲಿ ಏರ್ಪಟ್ಟ ಶ್ರೀರಂಗಪಟ್ಟಣ ಒಪ್ಪಂದದಂತೆ ತನ್ನ ಮಕ್ಕಳನ್ನೇ ಅಡವಿಟ್ಟ ಘಟನೆ, ತ್ಯಾಗ ಇವೆಲ್ಲವೂ ನಾಡ ಜನರ ಮನದಾಳದಲ್ಲಿ ಬೇರೂರಿದ್ದವು. ಟಿಪ್ಪು ಸುಲ್ತಾನನ ಮರಣದ ನಂತರ ನಾಡಿನ ಜನತೆ ಮರುಗಿ ತಮ್ಮ ಮನಸ್ಸಿನ ಭಾವನೆಗಳನ್ನು ಹಾಡುಹಬ್ಬಗಳ ಮೂಲಕ ವ್ಯಕ್ತಪಡಿಸುತ್ತಿದ್ದರು. ಟಿಪ್ಪುಸುಲ್ತಾನ್ ಬಗ್ಗೆ ಲಾವಣಿಗಳು, ಕೋಲಾಟದ ಪದಗಳು, ಕಥೆ, ದೊಂಬಿದಾಸರ ಪದಗಳು, ಸಾಂಗತ್ಯಗಳು ಹೀಗೆ ಹಲವು ಜಾನಪದೀಯ ಸೊಗಡಿನ ಸಾಹಿತ್ಯವು ಹುಟ್ಟಿಕೊಂಡು ಆ ಮೂಲಕ ಜನರ ಬಾಯಿಂದ ಬಾಯಿಗೆ ಹರಡಿ ಜನಮಾನಸದಲ್ಲಿ ನೆಲೆನಿಂತವು. ಬ್ರಿಟಿಷರ ರೀತಿ-ನೀತಿ ಸ್ಥಳೀಯ ಜನರಿಗೆ ಹಿಡಿಸದಾಯಿತು. ಬ್ರಿಟಿಷರು ಸ್ಥಳೀಯ ಪ್ರಜೆಗಳನ್ನು ಹಲವಾರು ತೆರಿಗೆಗಳಿಂದ ಮುಕ್ತಿಗೊಳಿಸಿ, ಆಡಳಿತಾತ್ಮಕ ಸುಧಾರಣೆಗಳನ್ನು ಜಾರಿಗೆ ತರುವುದರ ಮೂಲಕ ಟಿಪ್ಪುವಿಗಿಂತ ಕಂಪನಿ ಆಡಳಿತ ಮೇಲು, ಅತ್ಯುತ್ತಮ ಎಂಬ ಭಾವನೆ ಮೂಡಿಸುವ ಪ್ರಯತ್ನದಲ್ಲಿ ಅವರು ತೊಡಗಿದರು.

ಕರ್ನಲ್ ಮೆಕೆಂಝಿ ಪರಿವೀಕ್ಷಣೆಗೆ ನಡೆಸುತ್ತಿದ್ದಾಗಲೇ ತುರ್ತುಕಾರ್ಯದ ನಿಮಿತ್ತ ಆತನನ್ನು ಬೇರೆ ಬೇರೆ ಕಾರ್ಯಗಳಿಗೆ ನೇಮಿಸಲಾಗುತ್ತಿತ್ತು. ಯೂರೋಪಿನಲ್ಲಿ ನೆಪೋಲಿಯನ್ನನ ದಿಗ್ವಿಜಯಗಳ ಪರಿಣಾಮವಾಗಿ ಬ್ರಿಟೀಷರು ಅನೇಕ ರಾಜತಾಂತ್ರಿಕ ಕ್ರಮಗಳನ್ನು ಕೈಗೊಂಡರು. ಕರ್ನಲ್ ಮೆಕೆಂಝಿ ಇಂತಹ ಕಾರ್ಯಗಳನ್ನು ಬಹು ಯಶಸ್ವಿಯಾಗಿ ನಿರ್ವಹಿಸಿದನು.[೩೬] ೧೮೧೧ರಲ್ಲಿ ಫ್ರೆಂಚರು ಜಾವಾದ ರಾಜಧಾನಿ ಪಟೇವಿಯಾವನ್ನು ಆಕ್ರಮಿಸಿಕೊಂಡರು ಮತ್ತು ಅದನ್ನು ಗೆದ್ದುಕೊಳ್ಳಲು ಕರ್ನಲ್ ಮೆಕೆಂಝಿಯ ನೇತೃತ್ವದಲ್ಲಿ ಜಾವಾಗೆ ಸೈನ್ಯವನ್ನು ಕಳುಹಿಸಲಾಯಿತು.[೩೭] ೧೮೧೨ರಲ್ಲಿ ಜಾವಾ ಯುದ್ಧವು ಕೊನೆಗೊಂಡು ಬ್ರಿಟೀಷರು ಅದ್ಭುತವಾದ ಜಯವನ್ನು ಸಾಧಿಸಿದರು. ೧೮೧೬ ರಲ್ಲಿ ಜಾವ ದ್ವೀಪದಿಂದ ಭಾರತಕ್ಕೆ ಮರಳಿದನು. ಒಂದು ವರ್ಷಗಳ ಕಾಲ

ಮದ್ರಾಸ್ ಪ್ರಾಂತ್ಯದಲ್ಲಿ ಕಾರ್ಯನಿರ್ವಹಿಸಿ, ನಂತರ ಕಲ್ಕತ್ತಕ್ಕೆ ತೆರಳಿದನು. ೧೮೨೧ ಮೇ ೮ ರಂದು ಕಲ್ಕತ್ತದ ಸ್ವ-ಗೃಹದಲ್ಲಿ ನಿಧನ ಹೊಂದಿದನು.

ಕರ್ನಲ್ ಮೆಕೆಂಝಿ ಈ ರೀತಿಯಾಗಿ ವಿವಿಧ ಪ್ರದೇಶಗಳಲ್ಲಿ ವಿವಿಧ ಹುದ್ದೆಗಳಲ್ಲಿ ಅದ್ಭುತ ಕೆಲಸ ಕಾರ್ಯಗಳನ್ನು ನಿರ್ವಹಿಸಿದನು. ಈ ಮೂಲಕ ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳ ಪ್ರಶಂಸೆಗೆ ಪಾತ್ರನಾದನು.

## ೨.೪ ಇತಿಹಾಸ ಆಕರಗಳ ಸಂಗ್ರಹ ಕಾರ್ಯದಲ್ಲಿ ಕರ್ನಲ್ ಮೆಕೆಂಝಿಯ ಪಾತ್ರ

ಕರ್ನಲ್ ಮೆಕೆಂಝಿ ಅವರು ಈಸ್ಟ್ ಇಂಡಿಯಾ ಕಂಪನಿಯ ನೌಕರನಾಗಿದ್ದು ಕೊಂಡು ತಮ್ಮ ಸಂಶೋಧನಾ ಹವ್ಯಾಸವನ್ನು ಭಾದ್ಯತೆಗಳ ನಡುವೆಯೇ ಮುಂದುವರಿಸಿ ಕೊಂಡು ಹೋದದ್ದು ಅವರು ಭಾರತದ ಅದರಲ್ಲೂ ಕರ್ನಾಟಕ ಇತಿಹಾಸಕ್ಕೆ ಅವರಿ ನೀಡಿದ ದೊಡ್ಡ ಕೊಡುಗೆಯಾಗಿದೆ. ಭಾರತದ ವಿವಿಧ ಸ್ಥಳಗಳಿಗೆ ಸಂದರ್ಶನಾರ್ಥವಾಗಿ ಭೇಟಿ ಕೊಟ್ಟು ಹಲವಾರು ನಗರಗಳು, ಹಳ್ಳಿಗಳು, ಕೋಟೆಗಳು, ಧಾರ್ಮಿಕ ದೇವಾಲಯಗಳಿಗೆ ಭೇಟಿ ನೀಡಿದನು. ಈ ಸಂದರ್ಭದಲ್ಲಿ ಹಳ್ಳಿ, ನಗರಗಳಲ್ಲಿರುವ ಸ್ಥಳೀಯ ವಿದ್ವಾಂಸರು, ದೇಶೀಯ ಭಾಷಾ ಪಂಡಿತರು, ಪಟೇಲರು, ಶ್ಯಾನುಭೋಗರು, ಹಳ್ಳಿಯ ಮುಖ್ಯಸ್ಥರುಗಳು, ಸಾಮಾನ್ಯ ಜನರನ್ನು ಸಂದರ್ಶಿಸಿ ಮಾಹಿತಿ ಕಲೆಹಾಕಿದನು. ಈ ಮೂಲಕ ಕರ್ನಲ್ ಮೆಕೆಂಝಿ ಅವರು ಭಾರತೀಯರು ತಮ್ಮ ಇತಿಹಾಸವನ್ನು ನಿರ್ಲಕ್ಷಿಸುವುದು ಮಾತ್ರವಲ್ಲ ಅದನ್ನು ನಿರ್ಲಕ್ಷತೆಯಿಂದ ನಾಶಪಡಿಸುತ್ತಿದ್ದಾರೆ ಎಂದು ಅನ್ನಿಸಿದ್ದರಿಂದ ಅದರಲ್ಲಿಯೂ ಅಮೂಲ್ಯವಾದ ಆಕರಗಳು ವಿನಾಶದ ಅಂಚಿನಲ್ಲಿರು ವುದನ್ನು ಕಂಡ ಕರ್ನಲ್ ಮೆಕೆಂಝಿ ಅವುಗಳನ್ನು ರಕ್ಷಿಸಲು ಮುಂದಾದನು. ಈ ಕಾರ್ಯವನ್ನು ನಿರ್ವಹಿಸಲು ಅವರು ಸಾಕಷ್ಟು ಶ್ರಮ ಪಡಬೇಕಾಯಿತು.

ಕರ್ನಲ್ ಮೆಕೆಂಝಿ ಅವರು ಸರ್ಕಾರಿ ಕಾರ್ಯವಲ್ಲದೆ ಇತಿಹಾಸ ಕ್ಷೇತ್ರದಲ್ಲಿ ಸ್ವ-ಇಚ್ಛೆಯಿಂದ ಭಾಗವಹಿಸಿ ಪ್ರಾಚ್ಯ ಸಂಶೋಧನಾ ಕ್ಷೇತ್ರಕ್ಕೆ ತಮ್ಮ ಜೀವನದ ಕೊನೆಯವರೆಗೂ ದುಡಿಯುತ್ತಾ ಹೋದರು. ಇದಕ್ಕಾಗಿ ಅವರು ತಮ್ಮ ಸ್ವಂತ ಖರ್ಚಿನಲ್ಲೇ ಸಂಗ್ರಹ ಕಾರ್ಯವನ್ನು ನಿರ್ವಹಿಸಬೇಕಾಯಿತು. ಕರ್ನಾಟಕವೇ ಕರ್ನಲ್ ಮೆಕೆಂಝಿ ಅವರ ಪ್ರಧಾನ ಕಾರ್ಯ ಕ್ಷೇತ್ರವಾಯಿತು. ಟಿಪ್ಪು ಸುಲ್ತಾನನ ಆಡಳಿತ ಕ್ಷೇತ್ರ ಕರ್ನಲ್ ಮೆಕೆಂಝಿ ಅವರ ಸ್ವ-ಪ್ರೇರಣೆಯ ಸಂಶೋಧನಾ ಕಾರ್ಯ ಕ್ಷೇತ್ರವೂ ಆಯಿತು. ಈ ಪ್ರದೇಶದಲ್ಲಿ ಕರ್ನಲ್ ಮೆಕೆಂಝಿ ಅವರು ಶ್ರಮವಹಿಸಿ ಯಾರೂ

ನೋಡದ, ಯಾರಿಗೂ ತಿಳಿಯದ, ಎಲ್ಲರಿಂದಲೂ ಅಲಕ್ಷ್ಯಕ್ಕೊಳಗಾದ ಸ್ಥಳಗಳಿಗೂ ಹೋಗಿ, ಅತೀ ನಿಕೃಷ್ಟವಾಗಿ ಎಸೆಯಲ್ಪಟ್ಟಿದ್ದ ಅತ್ಯಮೂಲ್ಯ ಇತಿಹಾಸದ ಆಕರಗಳನ್ನು ಸಂಗ್ರಹಿಸಿದರು.

ಶ್ರೀರಂಗಪಟ್ಟಣದ ಪ್ರಾದೇಶಿಕ ಸಮೀಕ್ಷೆ ಹಾಗೂ ಟಿಪ್ಪುಸುಲ್ತಾನನ ಆಳ್ವಿಕೆಗೆ ಒಳಪಟ್ಟ ಪ್ರದೇಶದ ಆಂತರಿಕ ವಿಷಯ ಕುರಿತ ಮಾಹಿತಿ ಸ್ಥಳೀಯ ಜನರಿಂದ ಸಂಗ್ರಹಿಸುವಲ್ಲಿ ಯಶಸ್ವಿಯಾದನು.

ಈ ರೀತಿ ಜೀವನದುದ್ದಕ್ಕೂ ಇತಿಹಾಸದ ಆಧಾರಗಳನ್ನು ಸಂಗ್ರಹಿಸಿದ ಕರ್ನಲ್ ಮೆಕೆಂಝಿ ಅವರ ಸಂಗ್ರಹವು ೧೫೬೮ ಹಸ್ತ ಪ್ರತಿಗಳು, ೨೦೭೦ ಸ್ಥಳೀಯ ಪತ್ರಾವಳಿಗಳು, (ಕೈಫಿಯತ್ತುಗಳು ಸೇರಿದಂತೆ) ೮೦೭೬ ಶಿಲಾಶಾಸನಗಳ ಪ್ರತಿಗಳು, ೨೧೫೦ ಭಾಷಾಂತರಗಳು, ೨೭೦೦ ನಕ್ಷೆಗಳು ಮತ್ತು ರೇಖಾಚಿತ್ರಗಳು, ೬೧೨೮ ನಾಣ್ಯಗಳು, ೧೪೬ ಪ್ರಾಚೀನ ವಿಗ್ರಹಗಳನ್ನು ಹೊಂದಿದೆ. ಇದಕ್ಕಾಗಿ ಅವರು ಸಾಕಷ್ಟು ಶ್ರಮ ಮತ್ತು ಹಣವನ್ನು ಖರ್ಚು ಮಾಡಬೇಕಾಯಿತು. ತಮ್ಮ ಸಹಾಯಕ್ಕಾಗಿ ನೇಮಿಸಿಕೊಂಡಿದ್ದ ದ್ವಿಭಾಷಿಗಳಿಗೆ ಸ್ವಂತವಾಗಿ ೧೫,೦೦೦ ಪೌಂಡ್ ಹಣ ಖರ್ಚು ಮಾಡಿದನು. ಈ ರೀತಿಯಲ್ಲಿ ಸಂಗ್ರಹಿಸಿದ ವಸ್ತುಗಳು ಬಹುಕಾಲದವರೆಗೂ ವಿದ್ವಾಂಸರ ಗಮನಕ್ಕೂ ಕೂಡ ಬಾರದೇ ಹೋದರೂ ೧೯ನೇ ಶತಮಾನದ ಮಧ್ಯಭಾಗದ ವೇಳೆಗೆ ಭಾರತದ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ವಿದೇಶಿಯರ ಬೌದ್ಧಿಕ ಆಸಕ್ತಿ ಮತ್ತು ಸಂಶೋಧನಾ ಆಸಕ್ತಿ ಸಕಾರಾತ್ಮಕವಾಗಿ ಬೆಳವಣಿಯನ್ನು ಹೊಂದಿತು ಹಾಗೂ ಅವರು ಲಭ್ಯವಿರುವ ದಾಖಲೆಗಳನ್ನು, ವಸ್ತುಗಳನ್ನು, ಸಾಮಗ್ರಿಗಳನ್ನು, ಆಧಾರ ಗ್ರಂಥಗಳನ್ನು ಪರಿಶೀಲಿಸಲಾರಂಭಿಸಿದರು. ಇದಕ್ಕೆ ಕರ್ನಲ್ ಮೆಕೆಂಝಿಯವರ ಆಕರಗಳ ಸಂಗ್ರಹ ಕಾರ್ಯವೇ ಅಧ್ಯಯನದ ವಸ್ತುವಾಯಿತು. ಈ ಮೂಲಕ ಕರ್ನಲ್ ಮೆಕೆಂಝಿಯವರು ಭಾರತದ ಚರಿತ್ರೆಯ ಅಧ್ಯಯನಕ್ಕೆ ಕಾರಣೀಭೂತರಾದುದ್ದನ್ನು ಈ ಸಂಶೋಧನೆಯಿಂದ ನಿರೂಪಿಸಬಹುದು.

ಕರ್ನಲ್ ಮೆಕೆಂಝಿ ಅವರು ಮರಣಾನಂತರ ಈಸ್ಟ್ ಇಂಡಿಯಾ ಕಂಪನಿಯವರು ಅವರ ಅಪೂರ್ವ ಸಂಗ್ರಹವನ್ನು ೧೦,೦೦೦ ಪೌಂಡುಗಳಿಗೆ ಕೊಂಡು ಕೊಂಡರು. ಅವುಗಳಲ್ಲಿ ಅನೇಕ ಅಮೂಲ್ಯ ದಾಖಲೆಗಳನ್ನು ಇಂಗ್ಲೆಂಡಿಗೆ ಸಾಗಿಸಿದರು. ಕೆಲವು ದಕ್ಷಿಣ ಭಾರತದ ಹಸ್ತಪ್ರತಿಗಳನ್ನು ಮತ್ತು ಶಾಸನಗಳ ನಕಲುಗಳನ್ನು ಮದ್ರಾಸಿನಲ್ಲಿ ಸಂಗ್ರಹಿಸಿಡಲಾಯಿತು. ೧೮೫೮ರಲ್ಲಿ ಮದ್ರಾಸಿನಲ್ಲಿ ಪ್ರಾಚೀನ ಹಸ್ತಪ್ರತಿ ಭಂಡಾರ

ಸ್ಥಾಪನೆಯಾದ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಹಲವಾರು ಹಸ್ತಪ್ರತಿಗಳನ್ನು ವೈಜ್ಞಾನಿಕ ರೀತಿಯಲ್ಲಿ ರಕ್ಷಿಸಿ ಜೋಡಿಸಿಡುವ ಕಾರ್ಯ ಆರಂಭವಾಯಿತು. ಈ ವೇಳೆಗೆ ವಿದೇಶಿಯ ವಿದ್ವಾಂಸರಿಗೆ ಭಾರತದ ಬಗ್ಗೆ ಆಸಕ್ತಿಯೂ ಹೆಚ್ಚುತ್ತಾ ಹೋಯಿತು. ಹೆಚ್ಚಿನ ಸಂಗ್ರಹಗಳು ಕಲ್ಕತ್ತಾದ ಕರ್ನಲ್ ಮೆಕೆಂಝಿ ಅವರ ನಿವಾಸದಲ್ಲಿ ಉಳಿದಿದ್ದು, ಅವರ ಪತ್ನಿಯ ಸುಪರ್ದಿನಲ್ಲಿ ಇದ್ದು ನಂತರ ಈಸ್ಟ್ ಇಂಡಿಯಾ ಕಂಪೆನಿ ಸರ್ಕಾರ ವಹಿಸಿಕೊಂಡಿತು.

## ೨.೫ ಇತಿಹಾಸ ಆಕರಗಳ ಸಂಗ್ರಹದಲ್ಲಿ ಅನುಸರಿಸಿದ ಕಾರ್ಯವಿಧಾನ

ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ ಇತಿಹಾಸ ಆಕರಗಳು ಸಂಶೋಧನಾ ಗುರಿಗಳನ್ನು ಹೊಂದಿದ್ದವು. ಅಲ್ಲದೆ ವಿವಿಧ ಐತಿಹಾಸಿಕ ಆಕರ ಸಾಮಗ್ರಿಗಳು, ಐತಿಹಾಸಿಕ ಮಹತ್ವವನ್ನು ಹೊಂದಿದ್ದವು. ಅನೇಕ ವಿಷಯಗಳನ್ನು ಒಳಗೊಂಡಿದ್ದು, ಭಾರತೀಯ ಶೈಕ್ಷಣಿಕ ವಿಷಯಗಳು, ಭಾಷೆ ಬಳಕೆಯ ವೈವಿಧ್ಯತೆ, ಸೈನಿಕ ಮಾಹಿತಿ, ಕೋಟೆಗಳ ಹೆಸರುಗಳನ್ನು ಒಳಗೊಂಡಿದ್ದವು. ಈ ಕಾರ್ಯವನ್ನು ನಿರ್ವಹಿಸಲು ವಿದ್ವಾಂಸರ ಸಹಾಯವನ್ನು ಪಡೆದುಕೊಂಡನು. ಈ ಸಂಗ್ರಹ ಕಾರ್ಯಕ್ಕೆ ಸಮನಾಂತರ ಕಾರ್ಯವಾಗಿ ಎನ್‌ಗ್ರೇವರ್ಸ್‌ರವರು ಕಾರ್ಯನಿರ್ವಹಿಸಿದರು. ಆಕರಗಳ ಸಂಗ್ರಹಣ ಕಾರ್ಯದಲ್ಲಿ ಸ್ಥಳೀಯರ ಸಹಕಾರವನ್ನು ಸಹ ಪಡೆದುಕೊಂಡನು. ಅಲ್ಲದೆ ಅವುಗಳನ್ನು ಸಂರಕ್ಷಿಸಲು ವಿದ್ವಾಂಸರಿಗೆ ತಿಳಿಸುವುದಲ್ಲದೆ ಸಂರಕ್ಷಣೆಯ ಮಹತ್ವವನ್ನು ತಿಳಿಸಿದನು.

ಕರ್ನಲ್ ಮೆಕೆಂಝಿ ಪರಿಚಿತವಲ್ಲದ ಪ್ರಾದೇಶಿಕ ಭೂ ಭಾಗಗಳನ್ನು ಪರಿಚಯಿಸಿಕೊಳ್ಳುವ ಮೂಲಕ ಇತಿಹಾಸದ ಆಕರಗಳನ್ನು ಸಂಗ್ರಹಿಸಿದನು. ಆರ್ಥಿಕ ಸಂಪನ್ಮೂಲಗಳ ಕುರಿತ ನಿರ್ದಿಷ್ಟ ಮಾಹಿತಿ ತಿಳಿದುಕೊಂಡನು. ಅಲ್ಲದೆ ದಕ್ಷಿಣ ಭಾರತದ ಒಳನಾಡಿನಲ್ಲಿ ವಸಾಹತುಶಾಹಿ ಸರ್ಕಾರದ ಪಾತ್ರವನ್ನು ವಿಸ್ತರಿಸುವ ಕಾರ್ಯವನ್ನು ಕೈಗೊಂಡನು. ಈ ಮೂಲಕ ಸೈನಿಕ ಶಕ್ತಿಯ ಸಂವರ್ಧನೆಗೆ ಅವಕಾಶ ಮಾಡಿಕೊಟ್ಟನು. ಇದರಿಂದ ಭಾರತದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ವಸಾಹತು ಆಡಳಿತದ ಬುನಾದಿಗಳನ್ನು ಪ್ರಾದೇಶಿಕ ವಲಯದೊಳಗೆ ಸ್ಥಿರೀಕರಿಸುವುದಕ್ಕೆ ಅವಕಾಶ ನೀಡಿತು. ಇದರಿಂದ ವಸಾಹತು ಪ್ರಭುತ್ವನ್ನು ಗಟ್ಟಿಗೊಳಿಸಿದಂತಾಯಿತು.

ಕರ್ನಲ್ ಮೆಕೆಂಝಿ ಸಂಸ್ಥಾನಗಳ ರಾಜಕೀಯ ಹಿನ್ನೆಲೆ ಅರಿಯವುದಕ್ಕೆ ಸಹಾಯಕವಾಯಿತು ಹಾಗೂ ಸ್ಥಳನಾಮ ಕುರಿತು ಮಾಹಿತಿ ಹುಡುಕುವುದಕ್ಕು

ಕಾರಣವಾಯಿತು. ಇದರಿಂದ ಪ್ರಾದೇಶಿಕ ವಿಸ್ತಾರ ಅಳೆಯುವ ಕಾರ್ಯವನ್ನೂ ಸಹ ನಿರ್ವಹಿಸಿದನು. ಕರ್ನಲ್ ಮೆಕೆಂಝಿ ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಗೆ ಒಳಪಟ್ಟ ಭಾರತದ ಮೊದಲ ಸರ್ವೆಯರ್ ಜನರಲ್ ಆಗಿ ಭೌಗೋಳಿಕ ವರ್ಗಿಕರಣ ಮತ್ತು ಭೌಗೋಳಿಕ ಮಹತ್ವದ ಮಾಹಿತಿ ತಾಳೆ ಹಾಕುವುದು ಭೌಗೋಳಿಕ ವಿಷೇಶತೆಗಳನ್ನು ಪಟ್ಟಿ ಮಾಡುವುದರ ಮೂಲಕ ಆ ಕಾರ್ಯವನ್ನು ಸಮರ್ಥವಾಗಿ ನಿಭಾಯಿಸಿದನು. ಸರ್ವೆಯರ್ ಆಗಿ ನೇಮಕಗೊಂಡ ಕರ್ನಲ್ ಮೆಕೆಂಝಿ ಅವರು ಅನುಸರಿಸಿದ ಇತಿಹಾಸ ಆಕರಗಳ ಸಂಗ್ರಹ ಕಾರ್ಯವಿಧಾನ ಹಿಂದಿನ ಹಾಗೂ ಇಂದಿನ ವಿದ್ವಾಂಸರಿಗೂ, ಸಂಶೋಧನಾ ವಿದ್ಯಾರ್ಥಿಗಳಿಗೂ ಮಾದರಿಯಾಗಿದೆ.

ಕರ್ನಲ್ ಮೆಕೆಂಝಿ ಸ್ಥಳಿಯರೊಂದಿಗೆ ಅಧಿಕಾರಯುತ ಸಮಾಲೋಚನೆ ನಡೆಸಿದನು ಹಾಗೂ ಸಂಚಾರದ ಮುಖೇನ ಮಾಹಿತಿ ಸಂಗ್ರಹಿಸಿದನು. ವೈಯುಕ್ತಿಕ ಭೇಟಿ ಮುಖೇನ ಮಾಹಿತಿ ಕಲೆಹಾಕಿದನು. ವೈಯುಕ್ತಿಕ ಸಂಚಾರ ವಿಧಾನದಿಂದ ಮಾಹಿತಿ ಕ್ರೋಢೀಕರಿಸಿದನು. ಅಲ್ಲದೆ ಸ್ಥಳಿಯರೊಂದಿಗೆ ಚರ್ಚೆ ಮುಖೇನ ಮಾಹಿತಿ ದಾಖಲಿಸಿಕೊಂಡನು. ಇದಕ್ಕಾಗಿ ಕರ್ನಲ್ ಮೆಕೆಂಝಿ ಅವರು ಕನ್ನಡ ನಾಡಿನ ಮನೆ ಮನೆಗೂ ಭೇಟಿ ನೀಡಿ ಸಂದರ್ಶಿಸಿ ಸಂಗ್ರಹಿಸಿದ ವಸ್ತುಗಳು ವೈವಿಧ್ಯಮಯ ಮತ್ತು ಅಸಮಾನ್ಯ ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು. ತಾಳೆಗರಿಗಳು, ಭೂರ್ಜಪತ್ರಗಳು, ಜೇಡಿಮಣ್ಣಿನ ಫಲಕಗಳು, ಚರ್ಮದ ರಟ್ಟುಗಳು, ಗಟ್ಟಿಶಿಲೆಗಳು, ಬಂಡೆಗಲ್ಲುಗಳು, ಶಿಲಾ ಲೇಖಗಳೂ, ತಾಮ್ರದ ಹಾಳೆಗಳು, ತಾಮ್ರದ ಬೋಗುಣಿಗಳು, ತಾಮ್ರದ ಪಟ್ಟಿಕೆಗಳು, ಬೆಳ್ಳಿಯ ಕರಂಡಕ ಪಾತ್ರೆಗಳು, ಬೆಳ್ಳಿಯ ಪಗಡೆ ಆಟದ ಪಾಣುಗಳು, ಬೆಳ್ಳಿ ಹಿಡಿಕೆಯ ಕನ್ನಡಿಗಳು, ಸುಟ್ಟ ಮಣ್ಣಿನ ಫಲಕಗಳು, ಸುಟ್ಟ ಮಣ್ಣಿನ ಪಾತ್ರೆಗಳ ರಚನೆಗಳು, ಕಡತದ ಒರಟು ಬಟ್ಟೆಗಳು, ಒರಟು ಚಾದರ್‌ಗಳು, ಒರಟು ಕಲ್ಲ ಬಳೆಗಳು, ಬಟ್ಟೆಯ ಮೇಲು ಹಾಸುಗಳು, ರಂಗೀನ್ ಕಪಡಾಗಳು, ಧರಿಗಳು, ಬೆಳ್ಳಿಯ ಸೌಟುಗಳು, ಬೆಳ್ಳಿಯ ಭರಣಿಗಳು ಬೆಳ್ಳಿಯ ತಗಡಿನ ಪಟ್ಟಿಗಳು, ಮೂರ್ತಿಗಳು, ವಿಗ್ರಹಗಳು, ಒರಟು ಕಲ್ಲಿನ ಬರಹಗಳು, ಪಂಚ ಲೋಹದ ಕರಂಡಕಗಳು, ಪಂಚ ಲೋಹದ ಪೂಜಾ ಸಾಮಗ್ರಿಗಳು, ವಿವಿಧ ನಮೂನೆಯ ಕಂಠಿಗಳು, ಕಾಗದಗಳು, ಲೇಖನ ಸಾಮಗ್ರಿಗಳು, ಕೋರಿ ಕಾಗದ ಬಿಳಿ ಬಟ್ಟೆಯ ಬರಹಗಳು ಇಂತಹ ಸಂಗ್ರಹ ಬೇಕೇ ಬೇಡವೇ ಎಂಬ ಜಿಜ್ಞಾಸೆ ಇಲ್ಲದಂತೆ ನಿರ್ಲಕ್ಷಿತವಾಗಿದೆ ಎನಿಸುವ ಎಲ್ಲ ಆಕರಗಳನ್ನು ಸಮನ್ವಯ ಚಿತ್ತದಿಂದ ಸಂಗ್ರಹಿಸಿದ ಕೀರ್ತಿ ಕರ್ನಲ್ ಮೆಕೆಂಝಿ ಅವರದು.

ಕರ್ನಲ್ ಮೆಕೆಂಝಿ ಅವರ ಸಂಗ್ರಹ ವಿಧಾನದಿಂದ ತಿಳಿದು ಬರುವ ಮಾಹಿತಿಗಳನ್ನು ಆರ್ಥಿಕ ಮಾಹಿತಿಗಳು, ಸಾಂಸ್ಕೃತಿಕ ಮಾಹಿತಿಗಳು ಮತ್ತು ಸೈನಿಕ ಮಾಹಿತಿಗಳು ಎಂದು ವಿಂಗಡಿಸಬಹುದು.

ಈ ಕೆಳಗಿನ ಪಟ್ಟಿಯಲ್ಲಿ ತೋರಿಸಿರುವಂತೆ ಅವುಗಳು ಒಳಗೊಂಡಿರುವ ವಿಷಯಗಳು ಸ್ಥೂಲವಾಗಿ ಹೀಗಿವೆ. ಕನ್ನಡ ನಾಡಿನ ಅಥವಾ ದಕ್ಷಿಣ ಭಾರತದ ಪ್ರಚಲಿತ ಕೃಷಿ ಚಟುವಟಿಕೆಗಳು, ಗೋವುಗಳು ಮತ್ತು ಪಶು ಸಂಗೋಪನೆ, ತೋಟಗಾರಿಕೆ ಮತ್ತು ತೋಟಗಳ ಕಾರ್ಯನಿರ್ವಹಣೆ, ಕೆರೆ ಕಾಲುವೆ ನಿರ್ವಹಣೆ, ದೇವಾಲಯಗಳ ನಿರ್ವಹಣೆ, ಗುಡಿಕಾರರು, ಮಾಲೆಗಾರರು, ನೀರುಗಂಟಿಗಳು, ಮೊದಲಾದವರ ನಿರ್ವಹಣೆ, ಕುಂಬಾರರು, ತೈಲಿಗರು, ತೋಟಿಗರು ಮೊದಲಾದವರ ನಿರ್ವಹಣೆ, ಪಕ್ಷಿಗಳ ಚಲನವಲನಗಳು ಹಾಗೆಯೇ ಸಾಂಸ್ಕೃತಿಕ ವಿಷಯಗಳೂ ಸಹ ಇದರಿಂದ ಲಭ್ಯವಿದೆ ಈ ಕೆಳಗೆ ಪಟ್ಟಿಯಲ್ಲಿ ತೋರಿಸಿರುವಂತೆ ಹಬ್ಬಗಳು, ಆಚರಣೆ ವಿಧಿ ವಿಧಾನ, ಅರ್ಚಕ ವೃತ್ತಿ ನಿರ್ವಹಣೆ, ಅರ್ಚಕರ ನಿತ್ಯದ ಜೀವನ, ಅಭಿಷೇಕಾದಿ ಕೈಕಂರ್ಯ ಸೇವೆಗಳು, ದೈನಂಧಿನ ಆಹಾರ, ನೈವೇದ್ಯ ಮತ್ತು ನೀರು ಪ್ರಸಾದಗಳ ನಿರ್ವಹಣೆ, ದೇವಾಲಯದ ಸಮೀಪ ದೀಪದಾರಿಗಳು, ಮಾಲೆಧಾರಿಗಳು, ದೇವಾಲಯ ಸ್ವಚ್ಛ ಮಾಡುವವರು, ಸುಣ್ಣ ಬಳಿಯುವವರು ಮೊದಲಾದವರ ನಿರ್ವಹಣೆ, ಅಗ್ರಹಾರಗಳ ನಿರ್ವಹಣೆ, ಯತಿಗಳು, ಸಿದ್ಧರು, ಜಿನಚಾರ್ಯರು, ಆಗ್ರಹಾರಗಳ ಅಚಾರ್ಯರು ಮತ್ತು ಅವರ ಶಿಷ್ಯರಿಗೆ ಉಚಿತ ಊಟೋಪಚಾರದ ವ್ಯವಸ್ಥೆ ನಿರ್ವಹಣೆ, ದೇವಾಲಯಗಳ ಮೂಲಕ ಸಾಮಾಜಿಕ ಸಾಮರಸ್ಯಕ್ಕಾಗಿ ವ್ಯಾಜ್ಯಗಳ ನಿರ್ವಹಣೆ ಈ ಸಂಗ್ರಹಗಳಿಂದ ಸೈನಿಕ ಮಾಹಿತಿ ಹೆಚ್ಚು ಐತಿಹಾಸಿಕ ಮೌಲ್ಯ ಹೊಂದಿದೆ. ಏಕೆಂದರೆ ಈಸ್ಟ್ ಇಂಡಿಯಾ ಕಂಪೆನಿ ಎಂಬ ವಸಾಹತು ಆಡಳಿತದ ಮೂಲ ಉದ್ದೇಶವೇ ಸೈನಿಕ ಮಾಹಿತಿ ಸಂಗ್ರಹವಾಗಿದ್ದಿತು. ಸೈನಿಕ ಮಾಹಿತಿ ವಿವರ, ಫಿರಂಗಿಗಳ ಬಳಕೆ ಮತ್ತು ಅವುಗಳ ಮೇಲ್ವಿಚಾರಣೆ, ಕೋಟೆಗಳು ಮತ್ತು ಅವುಗಳ ಮೇಲ್ವಿಚಾರಣೆ, ಗಿರಿದುರ್ಗ, ಜಲದುರ್ಗ ಮತ್ತು ವನದುರ್ಗ ಮತ್ತು ಅವುಗಳ ಮೇಲ್ವಿಚಾರಣೆ, ಯುದ್ಧ ತಂತ್ರಗಳು, ಎತ್ತುಗಳು, ಅಶ್ವಗಳು ಮತ್ತು ಆನೆಗಳ ಬಳಕೆ, ಬೆಂಕಿ ಗಂಟುಗಳ ಮತ್ತು ಬೆಂಕಿ ಚೆಂಡುಗಳ ಬಳಕೆ, ಸಿಡಿಮದ್ದುಗಳು, ಪಿರಂಗಿಗಳು, ತೋಫುಗಳು, ಯುದ್ಧ ಕೂಟಗಳು ಮತ್ತು ರಹಸ್ಯ ಮಂತ್ರಾಲೋಚನೆ, ಸೆರೆಮನೆ ಮತ್ತು ಅದರ ಉಸ್ತುವಾರಿ ಮತ್ತು ಅವುಗಳ ಮೇಲ್ವಿಚಾರಣೆ, ಕಿಲ್ಲೆಗಳು ಮತ್ತು ಆದರ ಮೇಲ್ವಿಚಾರಣೆ, ಕೊತ್ತಲುಗಳು ಮತ್ತು ಅವುಗಳ ನಿರ್ಮಾಣ, ಅಮರ ನಾಯಕರು ಮತ್ತು ಅವರ ಅಧಿಕಾರ ವ್ಯಾಪ್ತಿ, ಸ್ಥಳೀಯ ಮತ್ತು

ಕಿರು ಮುತ್ತಿಗೆಗಳ ತಂತ್ರಗಾರಿಕೆ, ಸೈನಿಕರಿಗೆ ಜಹಗೀರುಗಳ ನೀಡಿಕೆ ಮತ್ತು ಅವುಗಳ ಮೇಲ್ವಿಚಾರಣೆ, ಆಯುಧಾಗಾರ ನಿರ್ಮಾಣ ತಂತ್ರಗಾರಿಕೆ, ಆಯುಧಾಗಾರಗಳ ಮೇಲ್ವಿಚಾರಕರ ಕರ್ತವ್ಯಗಳು ಮತ್ತು ಅವುಗಳ ಮೇಲ್ವಿಚಾರಣೆ ಈ ಎಲ್ಲಾ ಇತಿಹಾಸ ಆಕರಗಳ ಸಂಗ್ರಹಿಸುವ ಮೂಲಕ ಕರ್ನಲ್ ಮೆಕೆಂಝಿ ಕಲೆ ಹಾಕಿದ ಸಮೃದ್ಧ ಮಾಹಿತಿ ಕನ್ನಡ ನಾಡಿನ ಇತಿಹಾಸ ರಚನೆಗೆ ಅತ್ಯಾವಶ್ಯಕವೂ ಪ್ರಾಸಂಗಿಕವೂ ಆಗಿದ್ದಿತು.

## ೨.೬ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಇತಿಹಾಸ ಆಕರಗಳ ಮಹತ್ವ

ಕನ್ನಡ ನಾಡಿನ ಇತಿಹಾಸದಲ್ಲಿ ವಿಜಯ ನಗರೋತ್ತರ ಕಾಲ ರಾಜಕೀಯವಾಗಿ ಬಹಳ ಮಹತ್ವದ್ದಾಗಿದೆ. ಈ ಕಾಲವು ಕೇಂದ್ರೀಕೃತ ಆಡಳಿತ ವಿಘಟನೆಗೊಂಡು ಹಲವಾರು ಸಣ್ಣಪುಟ್ಟ ನಾಯಕರ ನಾಯಕತ್ವದ ಪಾಳೆಪಟ್ಟುಗಳ ಉದಯಕ್ಕೆ ಕಾರಣವಾಗಿದೆ. ತರೀಕರೆ, ಚಿತ್ರದುರ್ಗ, ಕೆಳದಿ ಮೊದಲಾದ ಪಾಳೆಯ ಪಟ್ಟುಗಳ ಬೆಳವಣಿಗೆಗೆ ಕಾರಣವಾಯಿತು. ಈ ಸಂದರ್ಭದಲ್ಲಿನ ಈ ರಾಜಮನೆತನಗಳು, ಸಣ್ಣ-ಪುಟ್ಟ ಸಂಸ್ಥಾನಗಳು, ಪಾಳೆಗಾರರ ಬಗ್ಗೆ, ಭೂ ಉಖ್ಖನಗಳಿಂದ ದೊರೆತ ವಸ್ತುಗಳು, ನಾಣ್ಯಗಳು, ಶಾಸನಗಳು, ಹಸ್ತಪ್ರತಿಗಳು, ಸ್ಮಾರಕಗಳಿಂದ ಲಭ್ಯವಾದ ಮಾಹಿತಿಗೆ ಕೊರತೆ ಉಂಟಾದುದ್ದನ್ನು ಸರಿಪಡಿಸುವಲ್ಲಿ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಆಕರಗಳ ಮಹತ್ವದ್ದಾಗಿವೆ. ಕರ್ನಲ್ ಮೆಕೆಂಝಿ ದಕ್ಷಿಣ ಭಾರತಕ್ಕೆ ಸಂಬಂಧಿಸಿದಂತೆ ಕೈಫಿಯತ್ತುಗಳು, ಹಸ್ತಪ್ರತಿಗಳು, ನಕಾಶೆಗಳು, ರೇಖಾಚಿತ್ರಗಳು, ವಿಗ್ರಹಗಳು, ವಿಗ್ರಹದ ಆಭರಣಗಳು ನಾಣ್ಯಗಳಲ್ಲಿನ ಅಸಂಖ್ಯಾತವಾಗಿ ಸಂಗ್ರಹಿಸಿ ಕನ್ನಡ ನಾಡಿನ ಚರಿತ್ರೆಯ ರಚನೆಗೆ ಸಹಾಯಕನಾಗಿದ್ದಾನೆ. ಉತ್ತರ ಮತ್ತು ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿಗಳಿಗೆ ಆ ಕಾಲದ ಆಕರಗಳ ಸಂಗ್ರಹ ಅವಶ್ಯಕವಾಗಿತ್ತು. ಸ್ತ್ರೀಯರು ರಾಜಕೀಯ ಕ್ಷೇತ್ರದಲ್ಲಿ ಹೊಂದಿದ್ದ ಸಮಕಾಲೀನ ಸ್ಥಾನಮಾನಗಳು ಮತ್ತು ಆಡಳಿತಾತ್ಮಕ ಕಾರ್ಯಗಳಲ್ಲಿ ಸ್ವಯಂಪ್ರೇರಿತರಾಗಿ ಪಾಲ್ಗೊಳ್ಳುವಿಕೆ ಕುರಿತು ಈತನು ಸಂಗ್ರಹಿಸಿದ ಮಾಹಿತಿಗಳು ಅತ್ಯುಪಯುಕ್ತವಾಗಿವೆ. ಇತರೆ ಶಾಸನಾಧಾರಗಳಿಗೆ ಪೂರಕವಾಗಿವೆ. ಇತಿಹಾಸ ಆರಕಗಳ ಸಂಗ್ರಹಗಳ ಮೂಲಕ ಕರ್ನಲ್ ಮೆಕೆಂಝಿ ಕನ್ನಡ ನಾಡಿನ ಮನೆಮಾತಾಗಿದ್ದಾನೆ ಎಂದು ಸಂಶೋಧನೆಯ ಮೂಲಕ ನಿರೂಪಿಸಬಹುದು.

**ಕೊನೆ ಟಿಪ್ಪಣಿ**

೧. ಜೆನ್ನಿಫರ್ ಹೌಸ್, ಇಲಸ್ಟ್ರೇಟಿಂಗ್ ಇಂಡಿಯಾ, ಪು. ೧೩

೨. ಶ್ರೀನಿವಾಸ ಹಾವನೂರು, ಹೊಸಗನ್ನಡ ಅರುಣೋದಯ, ಪು. ೨೫

೩. ಜೆನ್ನಿಫರ್, ಪು. ೯

೪. ಅದೇ, ಪು. ೧೪

೫. ಅದೇ, ಪು. ೧೬

೬. ಹಾವಿಲ್ ಜೂಲಿಯನ್, ಜಾನ್ ನೇಪಿಯರ್: ಲೈಫ್ ಲಾಗರಿಥಮ್ ಅಂಡ್ ಲೆಜಲಿ ಸ್ಕಾಟ್‌ಲ್ಯಾಂಡ್, ಪು. ೧೩–೧೭

೭. ಅದೇ, ಪು. ೧೪

೮. ಶ್ರೀನಿವಾಸ ಹಾವನೂರು, ಪು. ೨೦೭

೯. ಬ್ಲೇಕ್, ಪು. ೨೧

೧೦. ಅದೇ, ಪು. ೨೦೮

೧೧. ಅದೇ, ಪು. ೨೦೯

೧೨. ಅದೇ, ಪು. ೨೧೧

೧೩. ಶ್ರೀನಿವಾಸ ಹಾವನೂರು, ಹೊಸಗನ್ನಡ ಅರುಣೋದಯ, ಪು. ೨೫

೧೪. ಜೆನ್ನಿಫರ್ ಹೌಸ್, ಪು. ೧೪

೧೫. ಶ್ರೀನಿವಾಸ್ ಹಾವನೂರು, ಪು. ೨೭

೧೬. ಜೆನ್ನಿಫರ್, ಪು. ೨೦

೧೭. ಅದೇ, ಪು. ೨೧

೧೮. ಅದೇ, ಪು. ೪೮

೧೯. ಗ್ರೋವರ್ ಅಂಡ್ ಗ್ರೋವರ್, ಮಾರ್ಡನ್ ಇಂಡಿಯನ್ ಹಿಸ್ಟರಿ, ಪು. ೨೭೨

೨೦. ಜೆನ್ನಿಫರ್, ಪು. ೨೮

೨೧. ಬ್ಲೇಕ್.ಎಂ. ಡೇವಿಡ್, ಕಾಲಿನ್ ಮೆಕೆಂಝಿ ಕಲೆಕ್ಟರ್ ಎಕ್ಸ್ಟ್ರಾರ್ಡಿನರಿ, ಪು. ೧೨

೨೨. ರಾ.ಗ. ಅಜ್ಜಿಬಾಳ, ಕರ್ನಲ್ ಮೆಕೆಂಝಿ, ಪು. ೬

೨೩. ಬ್ಲೇಕ್, ಪು. ೨೨

೨೪. ಶ್ರೀನಿವಾಸ್ ಹಾವನೂರು., ಪು. ೨೫

೨೫. ಅದೇ, ಪು. ೨೮

೨೬. ಜೆನ್ನಿಫರ್, ಪು. ೨೮

೨೭. ಬ್ಲೇಕ್, ಪು. ೧೭

೨೮. ಜೆನ್ನಿಫರ್, ಪು. ೧೧೭

೨೯. ಶ್ರೀನಿವಾಸ ಹಾವನೂರು, ಪು. ೨೬

೩೦. ಬ್ಲೇಕ್, ಪು. ೨೩

೩೧. ಅದೇ, ಪು. ೨೪

೩೨. ಜೆನ್ನಿಫರ್, ಪು. ೩೧

೩೩. ಅಜಿಬಾಳ, ಕರ್ನಲ್ ಮೆಕೆಂಝಿ, ಪು. ೧೮

೩೪. ಜೆನ್ನಿಫರ್, ಪು. ೭೧

೩೫. ಗ್ರೋವರ್ ಮತ್ತು ಗ್ರೋವರ್, ಮಾರ್ಡನ್ ಇಂಡಿಯನ್ ಹಿಸ್ಟರಿ, ಪು. ೨೮

೩೬. ಅದೆ, ಪು. ೨೨೮

೩೭. ಬ್ಲೇಕ್, ಪು. ೧೯

## ಅಧ್ಯಾಯ – ಮೂರು

# ಇತಿಹಾಸ ಆಕರಗಳಾದ ಕೈಫಿಯತ್ತುಗಳ ಸಂಗ್ರಹಗಳಲ್ಲಿ ಕರ್ನಲ್ ಮೆಕೆಂಝಿ ಪಾತ್ರ

ಕರ್ನಲ್ ಮೆಕೆಂಝಿಯ ಇತಿಹಾಸ ಆಕರಗಳ ಸಂಗ್ರಹದಲ್ಲಿ 'ಕೈಫಿಯತ್ತು'ಗಳು ಮಹತ್ವದ ಪಾತ್ರವನ್ನು ವಹಿಸಿವೆ. ಒಂದು ದೇಶದ ಚರಿತ್ರೆಯನ್ನು ರಚಿಸಲು ಉತ್ಖನನಗಳ ಮೂಲಕ ಸ್ಥಳವನ್ನು ಅರಿಯುವುದು ಅವುಗಳನ್ನು ದಾಖಲಿಸುವುದು. ಅಲ್ಲದೆ ಸ್ಮಾರಕಗಳು, ಶಾಸನಗಳು, ನಾಣ್ಯಗಳು, ವಿದೇಶೀಯರ ಬರವಣಿಗೆಗಳು ಇವೇ ಮುಂತಾದ ಆಕರಗಳು ಪ್ರಮುಖವಾಗಿದ್ದು, ಅದರಂತೆಯೇ ಕೈಫಿಯತ್ತುಗಳು ಪ್ರಮುಖ ಪಾತ್ರ ವಹಿಸುತ್ತವೆ. ಇವುಗಳು ಶಾಸನಗಳಷ್ಟು ನಿಖರವಾದ ಮಾಹಿತಿಯನ್ನು ನೀಡುವಲ್ಲಿ ಸ್ವಲ್ಪಮಟ್ಟಿಗೆ ಅಸಮರ್ಥವಾದರೂ, ಪ್ರಮಾಣೀಕೃತ ಗ್ರಂಥಗಳಿಗೆ ಪೋಷಕವಾಗಿ ಅನೇಕ ಮಾಹಿತಿಗಳನ್ನು ನೀಡುವಲ್ಲಿ ಸಹಾಯಕವಾಗಿವೆ ಎಂದು ಹೇಳಬಹುದು. ಈ ಕೈಫಿಯತ್ತುಗಳನ್ನು ಕರ್ನಲ್ ಮೆಕೆಂಝಿ ತನ್ನ ಸೈನಿಕ ಕಾರ್ಯಚರಣೆ ಸಂದರ್ಭದಲ್ಲಿ ಭೂಸಮೀಕ್ಷೆಯೊಂದಿಗೆ ಈ ಆಕರಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿ, ದಾಖಲಿಸಿದ್ದುದು, ಭಾರತದ ಚರಿತ್ರೆಗಷ್ಟೇ ಅಲ್ಲದೆ ಕರ್ನಾಟಕ ಚರಿತ್ರೆಗೆ ಉಪಯುಕ್ತ ದಾಖಲೆಯಾಗಿದೆ.

ಕರ್ನಾಟಕ ಇತಿಹಾಸ ಸಂಶೋಧನಾ ಕಾರ್ಯದಲ್ಲಿ ಕೈಫಿಯತ್ತುಗಳೂ ಬಹು ಮಹತ್ವದ ಪಾತ್ರವನ್ನು ವಹಿಸುತ್ತವೆ. ಸ್ಥಳ ಪುರಾಣ, ಐತಿಹ್ಯ, ಇತಿಹಾಸ, ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಅಂಶಗಳನ್ನೊಳಗೊಂಡ ಈ ಕೈಫಿಯತ್ತುಗಳನ್ನು ಕರ್ನಲ್ ಮೆಕೆಂಝಿ ಸಂಗ್ರಹಿಸಿದ್ದು, ೧೯ನೇ ಶತಮಾನದಲ್ಲಿ ಹೆಚ್ಚಿನ ಅಧ್ಯಯನಕ್ಕೆ ಅವಕಾಶ ನೀಡಿತು. ಇವುಗಳು ನಮ್ಮ ಚರಿತ್ರೆಯ ಅಧ್ಯಯನಕ್ಕೊಂದು ಹೊಸ ಆಯಾಮವನ್ನು ನೀಡಿವೆ ಎಂದು ಹೇಳಬಹುದು. ಇಂತಹ ಕಾರ್ಯದಲ್ಲಿ ಕರ್ನಲ್ ಮೆಕೆಂಝಿಯ ಸಂಗ್ರಹದ ಕೈಫಿಯತ್ತುಗಳು ವಿಶೇಷವಾದುದ್ದು.

## ೩.೧ ಕೈಫಿಯತ್ತು ಪದದ ಅರ್ಥ ಮತ್ತು ಒಳಗೊಂಡಿರುವ ವಿಷಯಗಳು

ಕೈಫಿಯತ್ ಎಂಬುದು ಅರಬ್ಬಿ ಪದ. ಕೈಪಿಯತ್ ಎಂದರೆ ವರದಿ ಅಥವಾ ವಿವರಣೆ ಎಂದರ್ಥ. ಇದು ಗ್ರಾಮ ಮತ್ತು ಸೀಮೆಗಳ ಇತಿಹಾಸದೊಂದಿಗೆ ಧಾರ್ಮಿಕ ಆಚರಣೆ, ಕೃಷಿ, ವ್ಯಾಪಾರ, ಜಾತಿ ಪದ್ಧತಿಗಳನ್ನು ಒಳಗೊಂಡಿದ್ದಿತು. ಕ್ರಮೇಣ ಕೈಫಿಯತ್ ಸ್ಥಳೀಯ ಇತಿಹಾಸ ಅಥವಾ ಸ್ಥಳಪುರಾಣ ಅಥವಾ ಐತಿಹಾಸಿಕ ದಾಖಲೆ ಅಥವಾ

ಸ್ಥಳೀಯ ವರದಿ ಎಂಬ ಅರ್ಥಗಳನ್ನು ಪಡೆದುಕೊಂಡಿತು. ಇದರಲ್ಲಿ ಆಧಾರ ರಹಿತ ವದಂತಿಗಳು, ದಂತ ಕತೆಗಳು ಬೆರೆತು ಹೋಗಿವೆ. ಇವುಗಳನ್ನು ಬರೆದವರು ಇತಿಹಾಸ ರಚನಾ ವಿಧಾನ ಗೊತ್ತಿಲ್ಲದ ಶ್ಯಾನುಭೋಗರು.

ಕೈಫಿಯತ್‌ಗಳು ಕೆರೆ, ಕಾಲುವೆ, ದೇವಾಲಯಗಳ ನಿರ್ಮಾಣ ಹಾಗೂ ಜಾತಿ ಸಂಘರ್ಷಗಳ ಮೇಲೂ ಬೆಳಕನ್ನು ಚೆಲ್ಲುತ್ತವೆ. ಇವುಗಳಿಗೆ ಸಾಕ್ಷ್ಯಾಧಾರಗಳು ಇಲ್ಲದಿದ್ದರೂ ಮೌಖಿಕ ದಾಖಲೆಗಳಿಗಿರುವಷ್ಟು ತೂಕ ಇದೆ. ಇವುಗಳನ್ನು ಅಂದರೆ ಕೈಫಿಯತ್‌ಗಳು ೧೬ನೇ ಶತಮಾನದಿಂದ ೨೦ನೇ ಶತಮಾನದ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

ಒಂದು ಪ್ರದೇಶದ ಆಚಾರ-ವಿಚಾರಗಳು, ಸಂಪ್ರದಾಯಗಳು, ಭಾಷೆ, ಸಂಸ್ಕೃತಿ, ಮತೀಯ ಅಂಶಗಳು, ವ್ಯಕ್ತಿಗಳು ಹಾಗೂ ಸ್ಥಳನಾಮ ವಿಶೇಷಗಳು ಹಲವು ಮಹತ್ವದ ಸಂಕಥನಗಳ ಬಗೆಗೆ, ಅದೇ ಗ್ರಾಮದ ಅಥವಾ ಪ್ರದೇಶದ ಪಂಡಿತರಿಂದ, ಹಿರಿಯರಿಂದ, ತಿಳುವಳಿಕೆಯುಳ್ಳವರಿಂದ, ತಕ್ಕಮಟ್ಟಿಗೆ ಓದು-ಬರಹ ಬಲ್ಲವರಿಂದ ಬರೆಯಿಸಿ, ಸಂಗ್ರಹಿಸಲ್ಪಟ್ಟ ದಾಖಲೆಗಳನ್ನೇ 'ಕೈಫಿಯತ್ತು'ಗಳೆಂದು ಕರೆಯಲಾಗಿದೆ.[೧] ಪರ್ಷಿಯನ್, ಹಿಂದಿ ಹಾಗೂ ಮರಾಠಿಯಲ್ಲಿ ಕೈಫಿಯತು, ಕೈಫಿತ್, ಕೈಫಿಯೆತ್, ಕೈಫೀತ್, ಕೈಪೋತ್[೨] ಎಂದು ಕರೆಯಲ್ಪಟ್ಟಿದೆ. ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ ಕೈಫಿಯತ್ತುಗಳು ಸಾಂಸ್ಕೃತಿಕವಾಗಿ ಮಹತ್ವದ್ದಾಗಿವೆ. ಇಂತಹ ಕೈಫಿಯತ್ತುಗಳ ಸಂಗ್ರಹದಲ್ಲಿ ಜಾತಿ, ಮತ, ಕುಲ, ಮಠಾಧಿಪತಿಗಳು, ರಾಜರು, ಯುದ್ಧಗಳು, ಸಾಮಾನ್ಯ ಜನರ ಹಲವಾರು ವಿಷಯಗಳಲ್ಲಿಯ ವೈವಿಧ್ಯಪೂರ್ಣ ಹಾಗೂ ಸ್ವಾರಸ್ಯಕರ ಅಂಶಗಳನ್ನು ಒಳಗೊಂಡಿವೆ. ಇಂತಹ ಅಸಂಖ್ಯಾತ ಕೈಫಿಯತ್ತುಗಳು ಸಂಶೋಧನೆಗೆ ಅರ್ಹವಾಗಿದ್ದು ಅವುಗಳ ಬಗೆಗೆ ಹೆಚ್ಚಿನ ಹಾಗೂ ವಿಶೇಷ ಅಧ್ಯಯನದ ಆಗಬೇಕಾಗಿದೆ. ಇದೇ ಮಾದರಿಯಲ್ಲಿರುವ ಹಸ್ತಪ್ರತಿಗಳನ್ನು ಕನ್ನಡದಲ್ಲಿ ಬಖೈರು ಹಾಗೂ ನಾಮೆಗಳೆಂದು ಕರೆಯುವುದು ಚಾಲ್ತಿಯಲ್ಲಿದೆ.[೩]

೧೭೯೯ರಲ್ಲಿ ಟಿಪ್ಪು ಸುಲ್ತಾನನ ಮರಣಾನಂತರ ಮೈಸೂರು ಸಂಸ್ಥಾನದ ಪ್ರಾಂತ್ಯಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿದ ಬ್ರಿಟಿಷ್ ವಸಾಹತುಶಾಹಿಗೆ ಹೊಸ ಪ್ರದೇಶಗಳ ಚಾರಿತ್ರಿಕ ಹಿನ್ನೆಲೆ, ಭೌಗೋಳಿಕ ಸ್ಥಿತಿಗತಿ ತಿಳಿಯಲು ಅಗತ್ಯ ಇದ್ದಿತು. ಆ ಕೊರತೆಯನ್ನು ನೀಗಿದಾತನೇ ಕರ್ನಲ್ ಮೆಕೆಂಝಿ. ಈಸ್ಟ್ ಇಂಡಿಯಾ ಕಂಪನಿ ಆಡಳಿತದ ಕರ್ತವ್ಯ ನಿರ್ವಹಿಸುವುದರ ಜತೆಗೆ ವಸ್ತು ಸಂಗ್ರಹ ಕಾರ್ಯವನ್ನು ತನ್ನ

ಹವ್ಯಾಸವಾಗಿ ಕರ್ನಲ್ ಮೆಕೆಂಝಿ ರೂಢಿಸಿಕೊಂಡನು. ಪುರಾತನವಸ್ತುಗಳ ಸಂಗ್ರಹದ ಜೊತೆಗೆ ಸ್ಥಳನಾಮ, ಸ್ಥಳ ಮಹಿಮೆಗಳ ಬಗ್ಗೆ ತಿಳಿದುಕೊಳ್ಳುತ್ತ ಅದರ ಬಗೆಗೂ ಮಾಹಿತಿಯನ್ನು ಅವನ್ನು ಬರೆಯಿಸಿಕೊಂಡನು. ಹಸ್ತಪ್ರತಿಯ ರೂಪದಂತಿರುವ ಈ ಕೈಫಿಯತ್ತುಗಳನ್ನು ತಿಳಿದ ಜನರಿಂದ ಬರೆಸಿ ಸಂಗ್ರಹಿಸಿದನು. ಮಹತ್ವಪೂರ್ಣ ಕಾಲಘಟ್ಟಗಳ ಬಗ್ಗೆ ಬೆಳಕು ಬೀಳುವಂತೆ ಈ ಹೊಸ ಆಕರಗಳಾದ ಕೈಫಿಯತ್ತುಗಳು ತಮ್ಮ ಮೌಲಿಕತೆಯಿಂದ ಇತಿಹಾಸ ಅಧ್ಯಯನದಲ್ಲಿ ಮಹತ್ವದ್ದೆನಿಸಿವೆ. ಅಂದಿನ ಸನ್ನಿವೇಶಗಳ ಕೆಲವು ಮಹತ್ವಪೂರ್ಣ ಸಂದರ್ಭಗಳನ್ನು ಪರಿಚಯಿಸುತ್ತವಾದರೂ ವಿಮರ್ಶಾತ್ಮಕ ಗ್ರಹಿಕೆ ನೀಡುವುದರಲ್ಲಿ ನಿಷ್ಕೃಷ್ಟತೆ ಇಲ್ಲದ ಅಂಶಗಳು ಅನೇಕವು ಕಂಡುಬಂದರೂ ಕೈಫಿಯತ್ತುಗಳನ್ನು ಸಂಪೂರ್ಣವಾಗಿ ಕಡೆಗಣಿಸುವಂತಿಲ್ಲ. ಹಸ್ತಪ್ರತಿಯ ರೂಪದ ಈ ಕೈಫಿಯತ್ತುಗಳ ಬರಹ ಕೆಲವು ಕಡೆ ಅಶುದ್ಧವಾಗಿದ್ದು, ಅನೇಕ ಸಾಲುಗಳಲ್ಲಿ ಲೋಪಗಳಿಂದ ಕೂಡಿವೆ. ವಿಷಯ ಸ್ಪಷ್ಟವಾಗಿದ್ದರೂ ಸಾಕಷ್ಟು ಗೊಂದಲಗಳಿಂದ ಕೂಡಿರುತ್ತವೆ. ಇತರೆ ಆಕರಗಳೊಡನೆ ಹೋಲಿಸಿ ನೋಡಿದಾಗ ಭಿನ್ನತೆಯನ್ನು ಹೆಚ್ಚು ಕಾಣುತ್ತೇವೆ. ಕೈಫಿಯತ್ತುಗಳು ಪೌರಾಣಿಕ ಹಿನ್ನೆಲೆಯಲ್ಲಿ ಆರಂಭವಾಗಿ, ಐತಿಹ್ಯಗಳು, ಸ್ಥಳಪುರಾಣಗಳ ನೆಲೆಯಲ್ಲಿ ರಚಿತವಾಗಿವೆ. ಜನಜನಿತವಾಗಿ, ರೂಢಿಯಲ್ಲಿ ನೆಲೆನಿಂತಿದ್ದ ವಿಷಯಗಳನ್ನು ಕೇಳಿದ ವ್ಯಕ್ತಿಯೊಬ್ಬ ತನ್ನ ಭಾಷಾಜ್ಞಾನ, ಲೇಖನ ಪಟುತ್ವ, ಹೆಚ್ಚಾಗಿ ಆಡುಭಾಷೆಯ ಬಳಿಕ ಅಲ್ಲಲ್ಲಿ ಹಿಂದಿ, ಉರ್ದು, ತೆಲುಗು. ತಮಿಳು, ಇಂಗ್ಲೀಷ್ ಪದಗಳ ತುಣುಕುಗಳನ್ನು ಸಹಜವಾಗಿಯೇ ಬೆರೆಸಿಕೊಂಡು ಉದಾಹರಣೆಗೆ ಲಡಾಯಿ, ಕುಂಪಣಿ, ಇಂಗ್ರೇಜಿ, ಇಂಜನೇರು, ದರಖಾಸ್ತು, ಜಮಾಯಿತು, ಅಲ್ಲಾಹುತ್ತಲ್ ಸಾಮಾನ್ಯ ಜನರಿಗೆ ನಿರೂಪಿಸುತ್ತ ಹೋಗಿರುವುದು ಗಮನಾರ್ಹ. ಆದ್ದರಿಂದ ಕೈಫಿಯತ್ತುಗಳಲ್ಲಿ ಮೇಲ್ಮಟ್ಟದ ಭಾಷೆಯನ್ನಾಗಲಿ ಅಥವಾ ಶುದ್ಧ ಬರಹವನ್ನಾಗಲಿ ನಿರೀಕ್ಷಿಸುವುದು ತಪ್ಪಾಗುತ್ತದೆ. ನಿಖರವಾಗಿ ತಿಳಿಯದ, ಚರಿತ್ರೆ ರಚನಾಕಾರರ ನಿರ್ಲಕ್ಷ್ಯಕ್ಕೆ ಗುರಿಯಾದ, ಸಣ್ಣಪುಟ್ಟ ಪಾಳೇಗಾರರ, ವಿಚಿತ್ರ ಘಟನೆಗಳ, ಸ್ವಾರಸ್ಯಪೂರ್ಣ ವಿಷಯಗಳನ್ನು ಕೈಫಿಯತ್ತುಗಳು ತನ್ನಲ್ಲಿ ಅಡಗಿಸಿಕೊಂಡಿದ್ದವು. ಅವುಗಳನ್ನು ಕರ್ನಲ್ ಮೆಕೆಂಝಿ ಸ್ಥಳೀಯರಿಂದ ತಿಳಿದುಕೊಂಡು ದಾಖಲಿಸಿದನು. ಅವುಗಳಲ್ಲಿ ಕಣಕುಪ್ಪೆ ಕೋಟೆ ಕೈಫಿಯತ್ತು; ಆನೇಕಲ್ ಪಾಳೇಗಾರರ ಕೈಫಿಯತ್ತು; ನಾಯಿಯ ಶಿಲಾ ಪ್ರತಿಮೆಯ ಸ್ವಾರಸ್ಯದ ಬಗ್ಗೆ ವಿವರಿಸುವ ಕೊಕ್ಕ ಸಮುದ್ರ ಕೈಫಿಯತ್ತು, ಕುಂಪಣಿ ಸರಕಾರಕ್ಕೆ ಬರೆಸಿಕೊಟ್ಟ ಕೈಫಿಯತ್ತು ನಾಮೆ; – ಕುಂಬಕಾನಿ ಸ್ಥಳದ ಕುಂಬೇಶ್ವರನ ಕೈಫಿಯತ್ತು, ತಾಲೂಕು ಕಂಪಲಿ ಕೈಫಿಯತ್ತು, ಮಾಳಿಗೆ ಹೆಬ್ಬಾರ ಅನಂತಯ್ಯನ ರುಜು, ಸುಬ್ಬಯ್ಯನ ರುಜು – ಪೆಡೂರು ಮಾಗಣ ದೇವಾಲಯದ ಕೈಫಿಯತ್ತುನ್ನು ಬರೆದವರನು ಕೃಷ್ಣಯ್ಯಗೌಡ. ಶ್ಯಾನುಭೋಗ ವೆಂಕಟ

ಪತಯ್ಯ ಗುಮಾಸ್ತನಾಗಿದ್ದನು. ಹೀಗೆ ಹಿಂದಿನಿಂದಲೂ ಸಾಗಿಬಂದ ವೈವಿಧ್ಯಪೂರ್ಣ, ವರ್ಣಮಯ ಚಿತ್ರಣವನ್ನು ಕೈಫಿಯತ್ತುಗಳು ಒಳಗೊಂಡಿದ್ದವು.

## ೩.೨ ಕೈಫಿಯತ್ತುಗಳ ವರ್ಗೀಕರಣ[೪]

### ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಸ್ಥಳಗಳಿಗೆ ಸಂಬಂಧಪಟ್ಟ ಕೈಫಿಯತ್ತುಗಳು

ಕರ್ನಲ್ ಮೆಕೆಂಝಿ ಭೂ ಸಮೀಕ್ಷೆ ಸಂದರ್ಭದಲ್ಲಿ ಕೋಟೆ ಕೊತ್ತಲುಗಳಿಗೆ, ಕಾಡು-ಮೇಡು, ಬೆಟ್ಟ ಗುಡ್ಡ ಮತ್ತು ಗ್ರಾಮಗಳು, ನಗರಗಳಿಗೂ ಭೇಟಿದ ಸಂದರ್ಭದಲ್ಲಿ ಸಂಗ್ರಹಿಸಿದ್ದ ಕೈಫಿಯತ್ತುಗಳು ಕನ್ನಡ ನಾಡಿನ ಸ್ಥಳಗಳಿಗೆ ಸಂಬಂಧಪಟ್ಟಂದ್ದಾಗಿದೆ. ಅವುಗಳನ್ನು ಈ ಮುಂದಿನಂತೆ ಉಲ್ಲೇಖಿಸಲಾಗಿದೆ. ಚಿಕ್ಕಮಂಗಳೂರು ಜಿಲ್ಲೆಯ ಅಜ್ಜಂಪುರ ತಾಲ್ಲೂಕು ಕೈಫಿಯತ್ತು, ಅಜಿಲದ ತಾಲ್ಲೂಕು ಕೈಫಿಯತ್ತು, ಅತ್ತಿಗುಪ್ಪೆ ಗ್ರಾಮ ಕೈಫಿಯತ್ತು, ಅಂತಾಪುರ ಗ್ರಾಮ ಕೈಫಿಯತ್ತ, ಅರಕೇರಿ ಗ್ರಾಮ ಕೈಫಿಯತ್ತು, ಅರಿಕುಟಾರ ಗ್ರಾಮ ಕೈಫಿಯತ್ತು, ಕೃಷ್ಣರಾಜಪೇಟೆ ತಾಲ್ಲೂಕಿನ ಅಕ್ಕಿ ಹೆಬ್ಬಾಳು (ನರಸೀಪುರ ತಾಲ್ಲೂಕು) ಕೈಫಿಯತ್ತು, ಅನಂತಪುರದ ಕೈಫಿಯತ್ತು, ಅಷ್ಟಗ್ರಾಮ ಕೈಫಿಯತ್ತು, ಅದವಾನಿ ಕಾಮಿಲು ಪರಗಣೆ ಕೈಫಿಯತ್ತು, ಅದವಾನಿ ಕೊಸಗಿ ಕೈಫಿಯತ್ತು, ಆನೆ ಕನ್ನಂಬಾಡಿ ಕೈಫಿಯತ್ತು, ಆರ್ಕಾಡ ಸಂಸ್ಥಾನ ಕೈಫಿಯತ್ತು, ಇದೂರು ಕುಡ್ಯಾಣಿ ಕೈಫಿಯತ್ತು, ಉಡಗಣಿ ಕೈಫಿಯತ್ತು, ಉತ್ಸಂಗಿ ವೇಂಟಿಕೆ ಸಲ್ಲುವ ಸಂತೆಬೆನ್ನೂರ ಶೀಮ ಕೈಫಿಯತ್ತು, ಎಳಾರೆ ಮಾಗಣಿ ಕೈಫಿಯತ್ತು, ಕದರಿ ಮಾಗಣಿ ಕೈಫಿಯತ್ತು, ಕಣ್ಣುಕುಪ್ಪೆ ಕೋಟಿ ಕಟ್ಟಿದ ಕೈಫಿಯತ್ತು, ಕಂಪಲಿ ಕೈಫಿಯತ್ತು, ಕಂಪಲಿಗುತ್ತಿ ಕೈಫಿಯತ್ತು, ಕಬ್ಬುನಾಡ ಮಾಗಣಿ ಕೈಫಿಯತ್ತು, ಕಟ್ಟನಾಡು ಮಾಗಣಿ ಕೈಫಿಯತ್ತು, ಕಮಲಾಪುರ ಕೈಫಿಯತ್ತು, ಕಾಲಿಯಲಾಪುರ ಕೈಫಿಯತ್ತು, ಬಳ್ಳಾರಿ ತಾಲ್ಲೂಕಿನ ಕುರುಗೋಡು ಕೈಫಿಯತ್ತು, ಕಾಪುಮಾಗಣಿ ಕೈಫಿಯತ್ತು, ಮಾಗಣಿ ಕೈಫಿಯತ್ತು, ಯಗಟಿ ಕುಕ್ಕ ಸಮುದ್ರ ಕೈಫಿಯತ್ತು, ಕೈಫಿಯತ್ತು, ಕನ್ನಡಿ ಗ್ರಾಮ ಕೈಫಿಯತ್ತು, ಕುಂದಾಪುರ ಕೈಫಿಯತ್ತು, ಕುಂಭಕಾಸಿ ಸ್ಥಳದ ಕುಂಭೇಶ್ವರ ಕೈಫಿಯತ್ತು, ಕೆರೆ ಬೆಳಗಲ್ಲು ಕೈಫಿಯತ್ತು, ಕೊಲ್ಲೂರು ಉತ್ತರ ಮಾಗಣಿ ಕೈಫಿಯತ್ತು, ಕೊಡಕರೊ ಮಾಗಣಿ ಕೈಫಿಯತ್ತು, ಗೇರುಸೊಪ್ಪೆ ಕೈಫಿಯತ್ತು, ಗೋಕರ್ಣ ಕೈಫಿಯತ್ತು, ಚಿಕ್ಕಮಗಳೂರು ಕೈಫಿಯತ್ತು, ಚಿಕ್ಕ ಹೋತೂರು ಕೈಫಿಯತ್ತು, ಜಮಾಲಾಬಾದು ಕೈಫಿಯತ್ತು, ಗಯಲಬಾಡು ಕೈಫಿಯತ್ತು, ತಲಕಾಡು ಕೈಫಿಯತ್ತು-೧, ತಲಕಾಡು ಕೈಫಿಯತ್ತು-೨, ತಲಕಾಡು ಅಗ್ರಹಾರ ಕೈಫಿಯತ್ತು, ತಿರುಮಲ ಕೂಡ ಕೈಫಿಯತ್ತು, ತಿರುಮಲ ಸಾಗರ ಕೈಫಿಯತ್ತು, ತುಳುವ ದೇಶದ ಕಡಬಾ ಸಂಸ್ಥಾನದ

ಕೈಫಿಯತ್ತು, ತಕ್ಕಲ ಕೋಟಿ ಕೈಫಿಯತ್ತು, ನಿಡುಗಲ್ಲಿನ ಕೈಫಿಯತ್ತು, ದತ್ತಾತ್ರೇಯ ಪರ್ವತ ಕೈಫಿಯತ್ತು, ದರೋಜಿ ಗ್ರಾಮ ಕೈಫಿಯತ್ತು, ದೇವನಕಲ್ಲು ಕೈಫಿಯತ್ತು, ದೇವಲಾಪುರ (ಮಲ್ಲಿಕಾರ್ಜುನಪುರ) ಕೈಫಿಯತ್ತು, ದೇವೇಗೌಡನಹಳ್ಳಿ ಕೈಫಿಯತ್ತು, ಧರ್ಮಸ್ಥಳ ಕೈಫಿಯತ್ತು, ನಗರದ ಸೀಮೆ ಕೈಫಿಯತ್ತು, ನಗರಪುರದ ಅಥವಾ ಎಡತಲೆ ಕೈಫಿಯತ್ತು, ನಂದವರಂ ಕೈಫಿಯತ್ತು, ನರಸಿಪುರ ಕೈಫಿಯತ್ತು, ನಾಗಮಂಗಲ ಕೈಫಿಯತ್ತು, ನಾಗಲದಿನ್ನೆ ಕೈಫಿಯತ್ತು, ಬನವಾಸಿ ಕೈಫಿಯತ್ತು, ಬಸರೂರು ಮಾಗಣಿ ಕೈಫಿಯತ್ತು, ಬಸರೂರು ಜಪ್ತಿ ಮಾಗಣಿ ಕೈಫಿಯತ್ತು, ಬಳ್ಳಾರಿ ಕಸಬ ಕೈಫಿಯತ್ತು, ಬಾಗಡೆ ಕೈಫಿಯತ್ತು, ಬಾರಕೂರು ಸಂಸ್ಥಾನ ಕೈಫಿಯತ್ತು, ಬೆಂಗಳೂರು ಕಾಕನಹಳ್ಳಿ ಕೈಫಿಯತ್ತು, ಭಟ್ಕಳದ ಕೈಫಿಯತ್ತು, ಬಳ್ಳಾರಿ ತಾಲ್ಲೂಕಿನ ಭಟ್ಟರಹಳ್ಳಿ ಕೈಫಿಯತ್ತು, ಬೇಡರ ಬೆಳಗಲ್ಲು ಕೈಫಿಯತ್ತು, ಬೈಂದೂರು ಮಾಗಣಿ ಕೈಫಿಯತ್ತು, ಬೈರೂರು ಮಾಗಣಿ ಕೈಫಿಯತ್ತು, ಮಂಡಗದ್ದೆ ಕೈಫಿಯತ್ತು, ಮಣಿಪುರ ಕೈಫಿಯತ್ತು, ಮಂಚಾಲೆ ಕೈಫಿಯತ್ತು, ಮರದಾಳೆ ಕೈಫಿಯತ್ತು, ಮಲ್ಲೂರ ಸಾಸಿವೆ ಹಳ್ಳಿಸೀಮೆ ಕೈಫಿಯತ್ತು, ಮಿರ್ಲೆಯ ಕೈಫಿಯತ್ತು, ಮುಗುವಿನ ಮಾಗಣಿ ಕೈಫಿಯತ್ತು, ಮೂಡಂಗಾಡು ಮಾಗಣಿ ಕೈಫಿಯತ್ತು, ವಸುಧಾರೆ ಗ್ರಾಮ ಕೈಫಿಯತ್ತು, ವಿಜಯನಗರ ಕೈಫಿಯತ್ತು, ಸಿರಸಿ ಮಾಗಣಿ ಕೈಫಿಯತ್ತು, ಶೃಂಗೇರಿ ಕೈಫಿಯತ್ತು, ಸಂತೆಬೆನ್ನೂರು ಕೈಫಿಯತ್ತು, ಸ್ವರ್ಗಾವತಿ ಪಟ್ಟಣ ಕೈಫಿಯತ್ತು, ಸಾಗರ ಕೈಫಿಯತ್ತು, ಸಾಲಿಗ್ರಾಮ ಕೈಫಿಯತ್ತು, ಸಾಸಿವೆಹಳ್ಳಿ ಕೈಫಿಯತ್ತು, ಸೂಳೆಕೆರೆಸೀಮೆ ಕೈಫಿಯತ್ತು, ಸೋಗಣಿ ಅಗ್ರಹಾರ–೧ ಕೈಫಿಯತ್ತು, ಸೋಗಾನಿ ಅಗ್ರಹಾರ–೨ ಕೈಫಿಯತ್ತು, ಸೊಂಡೂರು ಕೈಫಿಯತ್ತು, ಮೈಸೂರು ಜಿಲ್ಲೆ, ಟೀ.ನರಸೀಪುರ ತಾಲ್ಲೂಕಿನ ಸೋಮನಾಥಪುರ ಕೈಫಿಯತ್ತು, ಸೋಸಲೆ ಅಗ್ರಹಾರ ಕೈಫಿಯತ್ತು, ಹಟ್ಟಿ ಬೆಳಗಲ್ಲು ಕೈಫಿಯತ್ತು, ಹಲಸನಾಡು ಮಾಗಣಿ ಕೈಫಿಯತ್ತು, ಹಾರನಾಡ ಮಾಗಣಿ ಕೈಫಿಯತ್ತು, ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಹಳೇಬೀಡು ಕೈಫಿಯತ್ತು, ಹಿರೇಮಗಳೂರು ಕೈಫಿಯತ್ತು, ಹಿರೇಹಾಳು ಕೈಫಿಯತ್ತು, ಯಗಟಿ ಕೈಫಿಯತ್ತು ಕೈಫಿಯತ್ತು, ಹಿರೇ ಹೊತೂರು ಕೈಫಿಯತ್ತು, ಹೆಮ್ಮಾಡಿ ಮಾಗಣಿ ಕೈಫಿಯತ್ತು, ಹೋದಿಗೆಸೀಮೆ ಕೈಫಿಯತ್ತು, ಹೊನ್ನಾಳಿಸೀಮೆ ಕೈಫಿಯತ್ತು, ಹೊಸಂಗಡಿ ಮಾಗಣೆ ಕೈಫಿಯತ್ತು, ಹೊಸೂರು ಮುರವಣಿ ಕೈಫಿಯತ್ತು, ಹೊಳೆ ಹೊಸೂರು ಕೈಫಿಯತ್ತು, ಹೊಳೆ ಹೊನ್ನೂರು ಕೈಫಿಯತ್ತು, ಯೆಳರೆ ಮಾಗಣಿ ಕೈಫಿಯತ್ತು, ಯಿಡೂರು ಕನಡಿ ಗ್ರಾಮದ ಕೈಫಿಯತ್ತುಗಳು ಪ್ರಮುಖವಾಗಿವೆ. ಇವುಗಳು ಆ ಸ್ಥಳಗಳ ಅಂದಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಬೆಳವಣಿಗಳ ಬಗ್ಗೆ ಉಲ್ಲೇಖವಿದೆ.

**ಕರ್ನಲ್ ಮೆಕೆಂಝಿ ಸಂಗ್ರಹಿಸಿದ ವ್ಯಕ್ತಿಗಳು ಮತ್ತು ವಂಶಾವಳಿಗೆ ಸಂಬಂಧಪಟ್ಟ ಕೈಫಿಯತ್ತುಗಳು**

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ವ್ಯಕ್ತಿಗಳು ಮತ್ತು ರಾಜವಂಶಗಳಿಗೆ ಸಂಬಂಧಪಟ್ಟದ್ದಾಗಿವೆ. ಅಂದಿನ ಕಾಲದ ಪ್ರಖ್ಯಾತ ರಾಜಮನೆತನಗಳು ಹಾಗೂ ಸಣ್ಣ-ಪುಟ್ಟ ರಾಜಮನೆತನಗಳ ವಂಶಾವಳಿಗಳ ಬಗ್ಗೆ ದಾಖಲಾಗಿದೆ. ಅವುಗಳಲ್ಲಿ ಪ್ರಮುಖವಾಗಿ ಅಜಿಲರ ಕೈಫಿಯತ್ತು, ಕಾರ್ಕಳದ ಅರಸರ ಕೈಫಿಯತ್ತು, ಆನೇಕಲ್ ಪಾಳೆಯಗಾರರ ಕೈಫಿಯತ್ತು, ಕುಮಾರರಾಮ ಕೈಫಿಯತ್ತು, ಕೊಮರರಾಮ ಕೈಫಿಯತ್ತು, ಚುಟು ಅರಸುಗಳ ಬೆಳಗತ್ತಿ ಅರಸುಗಳ ವಂಶಾವಳಿ ವಿವರಾ ಕೈಫಿಯತ್ತು, ಛಾವಣಿ ಬೆಳಗುತ್ತಿ ಅರಸುಗಳ ವಂಶಾವಳಿ ಕೈಫಿಯತ್ತು, ಬಸವಲಿಂಗ ಜಂಗಮ ಕೈಫಿಯತ್ತು, ಮಧುಗಿರಿ ಪಾಳೆಯಗಾರರ ಕೈಫಿಯತ್ತು, ಮರಾಠವಾಡ ಕೈಫಿಯತ್ತು, ಮೈಸೂರು ರಾಜವಂಶಾವಳಿ ಕೈಫಿಯತ್ತು, ರಾಜವೇಡು ಕೈಫಿಯತ್ತು, ಸೋದೆ ರಾಜವಂಶಾವಳಿ ಕೈಫಿಯತ್ತು, ಹೈದರ ಕೈಫಿಯತ್ತು-೧, ಹೈದರನ ಕೈಫಿಯತ್ತು-೨, ರಾಜಮನೆತನದ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಅರಿಯಲು ಹಾಗೂ ಅವರ ಧಾರ್ಮಿಕ ನೀತಿ, ಸೈನಿಕ ಸಾಧನೆಗಳು, ಆರ್ಥಿಕ ನೀತಿಗಾಗಿ ಕೈಗೊಂಡ ಕ್ರಮಗಳು, ಸಾಮ್ರಾಜ್ಯದ ವಿಸ್ತಾರ, ಭೌಗೋಳಿಕ ನೆಲೆಗಳ ಬಗ್ಗೆ ಉಲ್ಲೇಖವಿದೆ.

**ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಜಾತಿಗಳು ಮತ್ತು ಬುಡಕಟ್ಟುಗಳಿಗೆ ಸಂಬಂಧಪಟ್ಟ ಕೈಫಿಯತ್ತುಗಳು**

ಕರ್ನಲ್ ಮೆಕೆಂಝಿ ಸಂಗ್ರಹಿಸಿ ಕೈಫಿಯತ್ತುಗಳಲ್ಲಿ ಅಂದಿನ ಕರ್ನಾಟಕದ ಸಾಮಾಜಿಕ ಜೀವನದಲ್ಲಿ ಅಸ್ತಿತ್ವದಲ್ಲಿ ಜಾತಿ ಮತ್ತು ಬುಡಕಟ್ಟುಗಳ ಬಗ್ಗೆ ದಾಖಲಾಗಿದೆ. ಅವುಗಳೆಂದರೆ, ಆದವಾನಿ ಜೈನರ ಕೈಫಿಯತ್ತು, ಉಪ್ಪಲಿಗರ ಕೈಫಿಯತ್ತು, ಉಪ್ಪಲಿ ಬಣಜಿಗರ ಕೈಫಿಯತ್ತು, ಕುಂಚಿ ವಕ್ಕಲಿಗರ ಕೈಫಿಯತ್ತು, ಕುಡಿ ಕುಂಬಾರ ಜಾತಿ ಕೈಫಿಯತ್ತು, ಕೊಂಕಣಿಜರ ಕೈಫಿಯತ್ತು, ಕೊರಮರ ವಾಂಡ್ಲೆ ಕೈಫಿಯತ್ತು, ಕೊಮಟಿಗರ ಕೈಫಿಯತ್ತು, ವೆಂಕಟಪುರದ ವೈಷ್ಣವರ ಕೈಫಿಯತ್ತು, ಗಂಗಡಿಕಾರ ವೊಕ್ಕಲಿಗರ ಕೈಫಿಯತ್ತು, ಚೆನ್ನಯ್ಯನ ಕುಲದ ಜಾತಿ ರಿವಾಜು ಕೈಫಿಯತ್ತು, ತೆಲಗು ಬಣಜಿಗರ ಕೈಫಿಯತ್ತು, ನವಾಯತರ ಕೈಫಿಯತ್ತು, ಪದ್ಮಸಾಲೆಯವರ ಕೈಫಿಯತ್ತು, ಬಂಜಾರೆ ಜಾತಿಯವರ ಕೈಫಿಯತ್ತು, ಬನವಳ್ಳಿ ಬಣಜಿಗರ ಕೈಫಿಯತ್ತು, ಮಣ್ಣುವಡ್ಡ ಜಾತಿ ಕೈಫಿಯತ್ತು, ಮೇದಾರ ಕೈಫಿಯತ್ತು, ಮೇಲು ಸಾಬರೆ ಜಾತಿ ರಿವಾಜು ಕೈಫಿಯತ್ತು,

ಹಳೇ ಪೈಕದ ಜಾತಿ ರಿವಾಜು ಕೈಫಿಯತ್ತು ಹೀಗೆ ಕರ್ನಾಟಕ ಜಾತಿ ಮತ್ತು ಬುಡುಕಟ್ಟುಗಳ ಬಗ್ಗೆ ಉಪಯುಕ್ತವಾದ ಮಾಹಿತಿ ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ ಕೈಫಿಯತ್ತುಗಳ ಸಂಶೋಧನೆಯಿಂದ ನಿರೂಪಿಸಬಹುದು.

**ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ ದೇವಾಲಯಗಳ ಅಥವಾ ಧಾರ್ಮಿಕ ಸಂಸ್ಥೆಗಳಿಗೆ ಸಂಬಂಧಪಟ್ಟ ಕೈಫಿಯತ್ತುಗಳು**

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಕರ್ನಾಟಕದ ದೇವಾಲಯಗಳ ಮತ್ತು ಧಾರ್ಮಿಕ ಸಂಸ್ಥೆಗಳ ಬಗ್ಗೆ, ಮಠ-ಮಾನ್ಯಗಳ ಬಗ್ಗೆ ಉಲ್ಲೇಖವಿದೆ. ಅವುಗಳೆಂದರೆ ಅಂಕನಾಥಪುರದ ಅರ್ಕೇಶ್ವರಸ್ವಾಮಿ ಕೈಫಿಯತ್ತು, ಅನಂತಪುರದ ಸೀಮೆಯಲ್ಲಿರುವ ಮಹಾಸ್ಥಳ ತೀರ್ಥದೇವಾಲಯಗಳ ಕೈಫಿಯತ್ತು, ಅದಮಾರು ಮಠದ ಕೈಫಿಯತ್ತು, ಚರಂತಿಮಠ ಕೈಫಿಯತ್ತು, ಕಾಣಾರು ಮಠದ ಗುರುಗಳ ಕೈಫಿಯತ್ತು, ಕಾಪಿನ ದೇವಸ್ಥಾನದ ಕೈಫಿಯತ್ತು, ಕ್ರಿಷ್ಣಾಪುರ ಮಠದ ಕೈಫಿಯತ್ತು, ಗೋಕರ್ಣದ ಕೈಫಿಯತ್ತು, ಗೇರುಸೊಪ್ಪೆ ಹಳೇ ಬಸ್ತಿ ಕೈಫಿಯತ್ತು, ಪುತ್ತಿಗೆ ಮಠ ಕೈಫಿಯತ್ತು, ಪೇಜಾವರ ಮಠ ಕೈಫಿಯತ್ತು, ಫಲಿಮಾರು ಮಠ ಕೈಫಿಯತ್ತು, ಪೆಡೂರು ಮಾಗಣ ದೇವಾಲಯದ ಕೈಫಿಯತ್ತು, ಡೆಂಕಣಿಕೋಟೆ ಬೆಟ್ಟರಾಯಸ್ವಾಮಿ ಕೈಫಿಯತ್ತು, ಧರ್ಮಸ್ಥಳದ ಕೈಫಿಯತ್ತು, ಎಲ್ಲೂರ ವಿಶ್ವನಾಥ ದೇವರ ಕೈಫಿಯತ್ತು, ಶ್ರೀ ಎಡೆತೊರೆ ಮಠ ಕೈಫಿಯತ್ತು, ಶೃಂಗೇರಿ ಕೈಫಿಯತ್ತು, ಸಾಲಿಗ್ರಾಮ ಜೈನಬಸ್ತಿಯ ಕೈಫಿಯತ್ತು, ಸೋಸಲೆ ಅಗ್ರಹಾರ ಕೈಫಿಯತ್ತು-೨, ಹೇರೂರು ಮಠ ಕೈಫಿಯತ್ತು, ಸೋದೆ ಮಠ ಕೈಫಿಯತ್ತು, ಯಲ್ಲೂರ ದೇವಸ್ಥಾನದ ಕೈಫಿಯತ್ತು. ಈ ಕೈಫಿಯತ್ತುಗಳಲ್ಲಿ ಅಂದಿನ ಮಠಮಾನ್ಯಗಳು, ಅಗ್ರಹಾರಗಳು, ದೇವಾಲಯಗಳ ಆಚರಣೆ ಕ್ರಮ, ಹಬ್ಬ-ಹರಿದಿನಗಳು, ಸಂಪ್ರದಾಯದ ರೀತಿ ರಿವಾಜುಗಳು, ಉಡುಗೆ-ತೊಡುಗೆಗಳು, ಆಹಾರ ಪದ್ಧತಿ ಬಗ್ಗೆ ಮಾಹಿತಿಯನ್ನು ಒಳಗೊಂಡಿವೆ.

**ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಇತರೆ ವಿಷಯಗಳಿಗೆ ಸಂಬಂಧಪಟ್ಟ ಕೈಫಿಯತ್ತುಗಳು**

ತೊಣ್ಣೂರ ರಾಕ್ಷಸಿ ಕೈಫಿಯತ್ತು, ಕಣಕುಪ್ಪೆ ಕೋಟೆ ಕಟ್ಟಿದ ಕೈಫಿಯತ್ತು, ಘಟ್ಟದ ಕೆಳಗಿನ ಭಾಷೆಗಳ ಕೈಫಿಯತ್ತು, ಪೈರು ಮಾಡುವವರ ವಿವರದ ಕೈಫಿಯತ್ತು, ಪಶು, ಪಕ್ಷಿ, ಮೃಗಜಾತಿ ಕೈಫಿಯತ್ತು. ಮೇಲಿನ ಕೈಫಿಯತ್ತುಗಳ ವಿಷಯಗಳನ್ನು ಗಮನಿಸಿದಾಗ ಅವುಗಳ ವಿಷಯ ವೈವಿಧ್ಯತೆ ಎದ್ದು ಕಾಣುತ್ತದೆ. ಇವು ರಾಜಕೀಯ ವಿದ್ಯಮಾನಕ್ಕಾಗಲಿ ರಕ್ಷಣಾ ನೀತಿಗಾಗಲಿ ಸಂಬಂಧಿಸಿಲ್ಲದಿರುವುದು ಸ್ಪಷ್ಟ. ಕರ್ನಲ್ ಮೆಕೆಂಝಿಗೆ ಬ್ರಿಟಿಷ್

ಆಳರಸರಿಗೆ ಬೇಕಾದ ಮಾಹಿತಿ ಸಂಗ್ರಹಿಸಿ ರವಾನಿಸಿದ ಎಂಬ ಆರೋಪ ಸರಿಯಾದುದಲ್ಲವೆಂದು ಇದರಿಂದ ತಿಳಿದು ಬರುತ್ತದೆ.[೫] ಭಾಷೆ, ಸಾಹಿತ್ಯ, ವಾಸ್ತುಶಿಲ್ಪ, ವ್ಯವಸಾಯ, ಪ್ರಕೃತಿ ವೈಚಿತ್ರ್ಯ ಮೊದಲಾದ ವಿಷಯಗಳಲ್ಲೂ ಕರ್ನಲ್ ಮೆಕೆಂಝಿಗೆ ಆಸಕ್ತಿಯಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕರ್ನಲ್ ಮೆಕೆಂಝಿ ಕೊಡುಗೆಯನ್ನು ವಿಮರ್ಶಿಸುವಲ್ಲಿ ಅನೇಕರು ಪೂರ್ವಾಗ್ರಹ ಪೀಡಿತರಾಗಿರುವುದು ಕಂಡುಬರುತ್ತದೆ. ಕೆಲವರು ಸೈದ್ಧಾಂತಿಕ ಚೌಕಟ್ಟಿನಲ್ಲೇ ಆತನ ಕಾರ್ಯ ಸಾಧನೆಯನ್ನು, ಅದರ ಮೌಲ್ಯಮಾಪನವನ್ನೂ ಮಾಡಲು ಪ್ರಯತ್ನಿಸಿದ್ದಾರೆ.[೬] ಕರ್ನಲ್ ಮೆಕೆಂಝಿ ಬ್ರಿಟಿಷ್ ವಸಾಹತುಶಾಹಿಯ ಅಡಿಯಲ್ಲಿ ಅಧಿಕಾರಿಯಾಗಿದ್ದರೂ ಆತನು ಸಂಕುಚಿತ ರಾಜಕೀಯ ದೃಷ್ಟಿಯ ಕಾರ್ಯಶೀಲನಾಗಿರಲಿಲ್ಲ. ಎಲ್ಲ ಬ್ರಿಟಿಷ್ ಅಧಿಕಾರಿಗಳೂ, ವಿದ್ವಾಂಸರೂ ವಸಾಹತೀಕರಣ ಕಾರ್ಯದಲ್ಲಿ ತೊಡಗಿಕೊಂಡಿದ್ದರೆಂದೂ ಹೇಳಲು ಆಗುವುದಿಲ್ಲ.

ಹೀಗೆ ಹಲವು ಯೋಜನೆಗಳನ್ನು ಶಾಸ್ತ್ರೀಯವಾಗಿ ಕ್ರಮಬದ್ಧವಾಗಿ ನಡೆಸಿಕೊಂಡು ಬಂದರು.[೭] ಸ್ಥಳಪುರಾಣ, ಸ್ಥಳೀಯ ಚರಿತ್ರೆ, ವ್ಯಕ್ತಿ, ಘಟನೆ, ಸಂಸ್ಕೃತಿ, ಭಾಷೆಗಳ ಬಗ್ಗೆ ಸ್ಥಳೀಯರಿಂದಲೇ ಸಂಗ್ರಹಿಸಿ ದಾಖಲು ಮಾಡತೊಡಗಿದರು.[೮] ಇಂತಹ ಅದ್ಭುತ ಕಾರ್ಯದಲ್ಲಿ ಮೊದಲಿಗೆ ತನ್ನನ್ನು ತೊಡಗಿಸಿಕೊಂಡವನೆಂದರೆ ಕರ್ನಲ್ ಮೆಕೆಂಝಿ. ಆತ ದಕ್ಷಿಣ ಭಾರತವನ್ನೆಲ್ಲಾ ಸುತ್ತಾಡಿ ತನ್ನ ಕ್ಷೇತ್ರಕಾರ್ಯವನ್ನು ವಿಸ್ತೃತಗೊಳಿಸಿ, ಭಾರತದ ಬಹುದೊಡ್ಡ ಪ್ರಾಚೀನ ವಸ್ತು ಸಂಗ್ರಹಕಾರನಾದ. ಒಂದು ಸಂಸ್ಥೆ ಮಾಡುವ ಕೆಲಸ ಕಾರ್ಯಗಳನ್ನು ಒಬ್ಬ ವ್ಯಕ್ತಿ, ಕಂಪನಿ ಸರಕಾರದಲ್ಲಿ ಕರ್ತವ್ಯ ನಿರ್ವಹಿಸುತ್ತಾ, ಬಿಡುವಿನ ವೇಳೆಯಲ್ಲಿ ಹಾಗೂ ಸರ್ಕಾರಿ ಕೆಲಸದ ಜೊತೆಜೊತೆಗೆ ತನ್ನ ಸ್ವಂತ ಹಣದ ವೆಚ್ಚದಲ್ಲಿ ಸಂಗ್ರಹಕಾರ್ಯ ಕೈಗೊಂಡದ್ದು ಒಂದು ಮಹತ್ವದ ಸಂಗತಿ.[೯]

## ೩.೩ ಕೈಫಿಯತ್ತುಗಳ ವೈಜ್ಞಾನಿಕ ವಿಶ್ಲೇಷಣೆ

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಬರವಣಿಗೆಗಳು ಇತಿಹಾಸ ಲೋಕದಲ್ಲಿ ಒಂದು ಹೊಸ ಮಾರ್ಗವನ್ನು ಸೃಷ್ಟಿಸಿವೆ ಎಂದು ಹೇಳಬಹುದು. ಭಾರತೀಯರಲ್ಲಿದ್ದ ತಪ್ಪುಗ್ರಹಿಕೆಗಳನ್ನು ಮೂಢನಂಬಿಕೆಗಳನ್ನು ಹೋಗಲಾಡಿಸಿ ಶುದ್ಧ ಇತಿಹಾಸವನ್ನು ಬರೆಯುವುದಕ್ಕೆ ಕರ್ನಲ್ ಮೆಕೆಂಝಿಯ ಆಕರಗಳ ಸಂಗ್ರಹ ಮತ್ತು ಕೈಫಿಯತ್ತುಗಳು ಬಹು ಉಪಯುಕ್ತವಾದ ಸಾಧನವಾಗಿದೆ ಎಂದು ಹೇಳಬಹುದು. ಭಾರತ ದೇಶದ ಇತಿಹಾಸವನ್ನು ಪುರಾಣ, ಕಥೆ, ಧರ್ಮ, ದಂತಕಥೆ, ಸಾಹಿತ್ಯಾಧಾರಗಳ ಸಹಾಯದಿಂದ

ರಚಿಸಿಕೊಂಡಿದ್ದ ಭಾರತೀಯರಿಗೆ ಕರ್ನಲ್ ಮೆಕೆಂಝಿ ಒಂದು ನೂತನ ಹಾಗೂ ಪ್ರಬುದ್ಧವಾದ ಇತಿಹಾಸವನ್ನು ಪರಿಚಯ ಮಾಡಿಕೊಟ್ಟಿದ್ದು ಅವನ ಬಹುಮುಖ್ಯವಾದ ಕೊಡುಗೆಯಾಗಿದೆ. ಸಾಂಪ್ರದಾಯಕವಾದ ಕಟ್ಟುಕಥೆ ಜಾನಪದ ನಂಬಿಕೆ ಹಾಗೂ ಧಾರ್ಮಿಕ ಭಾವನೆಗಳಿಂದ ಕೂಡಿದ ಅಂಶಗಳನ್ನು ಇತಿಹಾಸವೆಂದು ಭಾವಿಸಿಕೊಂಡಿದ್ದ ಭಾರತೀಯರಲ್ಲಿ ಕರ್ನಲ್ ಮೆಕೆಂಝಿ ಬರವಣಿಗೆಗಳು ಒಂದು ಹೊಸ ಸಂಚಲನವನ್ನು ಉಂಟು ಮಾಡಿದವು. ಭಾರತೀಯ ಸಮಾಜವು ಧರ್ಮ, ಜಾತಿ, ಪಂಥ ಮತ್ತು ಭಾಷೆಗಳಿಂದ ಭಿನ್ನಭಿನ್ನವಾಗಿ ಹರಿದು ಹೋಗಿದ್ದು ಅವರ ಬೌದ್ಧಿಕ ಚಿಂತನೆಗೂ ಈ ಅಂಶಗಳು ತೊಡಕಾಗಿ ಕಾಡುತ್ತಿದ್ದವು. ಈ ತೊಡಕನ್ನು ಕರ್ನಲ್ ಮೆಕೆಂಝಿಯ ಆಕರಗಳ ಸಂಗ್ರಹ ನಿವಾರಿಸಿತ್ತೆಂದು ಹೇಳಬಹುದು.

ನೂತನವಾದ ಇತಿಹಾಸ ಸಂಶೋಧನಾ ಮಾರ್ಗವನ್ನು ಅನುಸರಿಸಿದ ಕರ್ನಲ್ ಮೆಕೆಂಝಿ ಭಾರತೀಯರ ಜೀವನದ ನೈಜ ಚಿತ್ರಣವನ್ನು ಕಟ್ಟಿಕೊಡುವುದರ ಮೂಲಕ ಬೌದ್ಧಿಕ ಜಗತ್ತಿಗೆ ಒಂದು ಮಹತ್ವದ ಕೊಡುಗೆಯನ್ನು ನೀಡಿದ್ದಾನೆ. ಭಾರತದಲ್ಲಿ ಸಾಕಷ್ಟು ಸಾಹಿತ್ಯ ಕೃತಿಗಳು, ಐತಿಹಾಸಿಕ ಗ್ರಂಥಗಳು, ವರದಿಗಳು ಇದ್ದರೂ ಸಹ ಅವರು ಧರ್ಮ ಸಾಹಿತ್ಯ ಜಾನಪದ ಮುಂತಾದ ಅಂಶಗಳ ಆಧಾರದ ಮೇಲೆಯೇ ತಮ್ಮ ನಾಡಿನ ಚರಿತ್ರೆಯನ್ನು ನಿರ್ಮಿಸಿಕೊಂಡಿದ್ದರು. ಕಾಲಮಾನದ ಬಗ್ಗೆ ದೇಶೀಯರಿಗೆ ಹೆಚ್ಚಿನ ಜ್ಞಾನವಿರಲಿಲ್ಲ. ಇದರಿಂದಾಗಿ ಚರಿತ್ರೆಯನ್ನು ಕರಾರುವಕ್ಕಾಗಿ ವೈಜ್ಞಾನಿಕ ರೀತಿಯಲ್ಲಿ ರಚಿಸುವುದು ಸಾಧ್ಯವಾಗಿರಲಿಲ್ಲ. ಕರ್ನಲ್ ಮೆಕೆಂಝಿಯ ಪ್ರವೇಶದಿಂದ ಭಾರತೀಯ ಇತಿಹಾಸ ಲೋಕದಲ್ಲಿ ಒಂದು ಕ್ರಾಂತಿಕರವಾದ ಬದಲಾವಣೆಯು ಕಂಡು ಬಂದಿತು. ಜನಜೀವನವನ್ನು ತಾರ್ಕಿಕವಾಗಿ ನೈಜ ದೃಷ್ಟಿಯಿಂದ ನೋಡಿ ಅದನ್ನು ವಿಶ್ಲೇಷಿಸುವ ಕಾರ್ಯವನ್ನು ಬ್ರಿಟಿಷ್ ವಿದ್ವಾಂಸರು ಪ್ರಾರಂಭಿಸಿದ್ದರು.

ಕರ್ನಲ್ ಮೆಕೆಂಝಿ ಪೂರ್ವಭಾರತದಲ್ಲಿ ಬೌದ್ಧಿಕ ಚಟುವಟಿಕೆಗಳು ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿದ್ದವು. ಬಹುಸಂಖ್ಯಾತ ಜನರು ವಿದ್ಯೆ ಮತ್ತು ವಿದ್ವತ್ತುಗಳಿಂದ ವಂಚಿತರಾಗಿದ್ದರು. ಪ್ರಾಚೀನ ಸಾಹಿತ್ಯ ಕೃತಿಗಳು ಶಿಲಾ ಶಾಸನಗಳನ್ನು ಮೂಲ ಆಧಾರಗಳನ್ನಾಗಿ ಪರಿಗಣಿಸಿಕೊಂಡಿದ್ದ ಭಾರತೀಯರಿಗೆ ಕೇವಲ ಶಿಲಾಶಾಸನ, ತಾಮ್ರಪಟಶಾಸನ, ತಾಳೆಗರಿ ದಂತಕಥೆಗಳಿಂದ ಇತಿಹಾಸ ಅಧ್ಯಯನ ಹಾಗೂ ರಚನೆಗೆ ಸಹಾಯಕವಾಗಿದೆ. ಕರ್ನಲ್ ಮೆಕೆಂಝಿಯ ಆಗಮನ ಹಾಗೂ ಈತನ ಆಕರಗಳ ಸಂಗ್ರಹದಿಂದಾಗಿ ಭಾರತೀಯ ಮೂಲ ಆಕರಗಳ ಯುಗ ಅಂತ್ಯವಾಗಿ ನವೀನ ಆಕರಗಳ ರಚನೆಯ ಯುಗ ಆರಂಭವಾಯಿತು. ಅವುಗಳು ಕಾಗದ ಬಳಕೆಯ ಯುಗ

ಎಂದು ಪರಿಗಣಿಸಬಹುದು. ಶಿಲಾಶಾಸನ, ತಾಮ್ರ ಪಟ ಶಾಸನ, ಸಾಹಿತ್ಯ ಕೃತಿ ತಾಳೆಗರಿಗಳ ರಚನೆಗೆ ಬದಲಾಗಿ ಕೈಫಿಯತ್ತುಗಳು, ಬಖೈರುಗಳು, ಕಡತಗಳೆಂಬ ಹೊಸ ಪ್ರಕಾರಗಳು ಕಾಗದದಿಂದಲೇ ಆರಂಭಗೊಂಡವು. ಇಂತಹ ನವೀನ ಯುಗ ಆರಂಭವಾಗಿದ್ದೇ ಕರ್ನಲ್ ಮೆಕೆಂಝಿ ಬರೆಸಿ ಸಂಗ್ರಹಿಸಿದ ಕೈಫಿಯತ್ತುಗಳಿಂದ ಎನ್ನಬಹುದು. ಬರೆಸಿದ ಬರವಣಿಗೆಗಳೆಲ್ಲವೂ ಕಾಗದ, ಕೋರಿ ಕಾಗದ, ಶ್ವೇತವರ್ಣದ ಅರಳೆ ಬಟ್ಟೆಗಳ ಮೇಲೆ ರಚಿಸಲ್ಪಟ್ಟವು. ಆಧುನಿಕತೆಯ ಬಳಕೆಯ ಸಂಕೇತಗಳಾಗಿದ್ದ ಈ ಪ್ರಕಾರದ ದಾಖಲೆಗಳು ಭಾರತೀಯ ಇತಿಹಾಸ ರಚನೆಯಲ್ಲಿ ಬಳಕೆಗೆ ಬಂದು ಅವುಗಳನ್ನು ಬರೆಸಿ ಸಂಗ್ರಹಿಸಿದ ಕೀರ್ತಿ ಕರ್ನಲ್ ಮೆಕೆಂಝಿಗೆ ಸಲ್ಲುತ್ತದೆ.

ಕೈಫಿಯತ್ತುಗಳು, ಸಂಗ್ರಹಿಸಿದ ಇತರೆ ಆಕರಗಳನ್ನು ಒಟ್ಟು ಗೂಡಿಸಿ ಕಾಲಮಾನ, ವಂಶಗಳು, ವ್ಯಕ್ತಿಗಳು, ನಿರ್ದಿಷ್ಟ ಭೂಪ್ರದೇಶಕ್ಕೆ ಸೇರಿದ ಆಕರಗಳು ಹೀಗೆ ವೈಜ್ಞಾನಿಕ ತಳಹದಿಯ ಮೇಲೆ ಬೇರ್ಪಡಿಸಿ, ಬೇರ್ಪಡಿಸಿದ ಸಂಗ್ರಹಗಳಿಗೆ ಟಿಪ್ಪಣಿ ಬರೆದು, ಬರೆಸಿ ಕ್ರಮಬದ್ಧವಾಗಿ ಜೋಡಿಸಿಟ್ಟು ಮುಂದಿನ ಪೀಳಿಗೆಗೆ ಬಿಟ್ಟು ಹೋಗಿರುವುದು ಕರ್ನಲ್ ಮೆಕೆಂಝಿಯವರ ಮಹತ್ವದ ಸಾಧನೆಯಾಗಿದೆ. ಹಿಂದೆ ಜಾನಪದ ಧಾರ್ಮಿಕ ನಂಬಿಕೆಗಳು ಸಾಂಪ್ರದಾಯಿಕ ಪದ್ಧತಿಗಳ ಆಧಾರದಿಂದ ರಚಿತವಾಗಿದ್ದ ಇತಿಹಾಸವು ನೂತನ ಪರಿಸ್ಥಿತಿಯಲ್ಲಿ ವೈಜ್ಞಾನಿಕ ದೃಷ್ಟಿಕೋನಕ್ಕೆ ಒಳಪಟ್ಟು ಪರಿಶುದ್ಧ ರೂಪವನ್ನು ಪಡೆದು ಆಂತರಿಕ, ಬಾಹ್ಯ ವಿಮರ್ಶೆಗೆ ಒಳಪಟ್ಟು ಭಾರತೀಯ ಇತಿಹಾಸ ರಚನೆಗೆ ಒಂದು ಹೊಸರೂಪ ಸಿಕ್ಕಿತು.

ಕರ್ನಲ್ ಮೆಕೆಂಝಿ ಸಂಗ್ರಹಗಳು ಒಂದು ಹೊಸ ಯುಗವನ್ನು ಆರಂಭಿಸಿದ್ದವು. ಇಂತಹ ಸಂಗ್ರಹಗಳಿಂದ ರೂಪುಗೊಂಡ ಇತಿಹಾಸವೂ ಹೆಚ್ಚು ವ್ಯಾಪಕವೂ, ವಾಸ್ತವವೂ ಆಗಿದ್ದು ಭಾರತೀಯರ ಜೀವನದ ಸಮಗ್ರ ಚಿತ್ರಣವನ್ನು ಕೊಡುವಂತೆ ಇದ್ದಿತು. ನೂತನ ಇತಿಹಾಸ ರಚನೆಯೂ ಕೇವಲ ರಾಜಕೀಯ ಕ್ಷೇತ್ರಕ್ಕೆ ಮೀಸಲಾಗಿರದೆ ಸಾಮಾಜಿಕ ಆರ್ಥಿಕ ಬೌದ್ಧಿಕ ಕ್ಷೇತ್ರಗಳ ಜತೆಗೆ ಭೌಗೋಳಿಕ, ಪ್ರಾಣಿ, ಪಕ್ಷಿ, ಹಸಿರು, ಪಚ್ಚೆ, ಪೈರು, ಜಾತಿ, ರೀತಿ ರಿವಾಜು ಇನ್ನು ಮುಂತಾದ ಚಿತ್ರಗಳನ್ನು ನೀಡುವ ಹೊಸ ವೈಜ್ಞಾನಿಕ ಮಾರ್ಗವನ್ನು ತಂದುಕೊಟ್ಟಿತು.

ಹತ್ತೊಂಬತ್ತನೇ ಶತಮಾನದಲ್ಲಿ ಕರ್ನಲ್ ಮೆಕೆಂಝಿ ಸಂಗ್ರಹಿಸದ ಕೈಫಿಯತ್ತುಗಳು ಉಂಟು ಮಾಡಿದ ಮಹತ್ವದ ಬದಲಾವಣೆ ಎಂದರೆ ಇತಿಹಾಸ ರಚನೆಯೂ ಯಾವುದೇ ಒಂದು ವರ್ಗ ಜಾತಿ ಧರ್ಮ, ಪಂಥಕ್ಕೆ ಮೀಸಲಾಗಿರದೆ ಎಲ್ಲಾ

ವರ್ಗಗಳ ಅಭಿಪ್ರಾಯಗಳನ್ನು ನೈಜ ಜೀವನವನ್ನು ಚಿತ್ರಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದುದು. ಈ ರೀತಿಯ ಬರವಣಿಗೆಗಳು ಒಂದು ರೀತಿಯಲ್ಲಿ ಪ್ರಜಾಪ್ರಭುತ್ವದ ಉದಯಕ್ಕೆ ನಾಂದಿಯನ್ನು ಹಾಡಿದ್ದವು ಎಂದು ಹೇಳಬಹುದು. ಇತಿಹಾಸವು ಸಮಸ್ತ ಜನತೆಯ ಜೀವನದ ನೈಜ ಚಿತ್ರಣವಾಗಿದ್ದಿತು. ಅದು ಕೆಲವು ವ್ಯಕ್ತಿಗಳ ಕೆಲವು ವರ್ಗಗಳ ವಂಶಗಳ ಕಥೆಯಾಗಿರದೆ ಮಾನವ ಜೀವನದ ನೈಜ ಚಿತ್ರಣವನ್ನು ನೀಡುವ ಪ್ರಂಶಸನೀಯವಾದ ಪ್ರಯತ್ನವಾಗಿತು. ಕರ್ನಲ್ ಮೆಕೆಂಝಿ ಮತ್ತು ಆತನ ಸಹಾಯಕರು ಈ ರೀತಿಯಲ್ಲಿ ವಿಶಾಲ ಮನೋಭಾವದಿಂದ ಐತಿಹಾಸಿಕ ಮಾಹಿತಿಯನ್ನು ಸಂಗ್ರಹಿಸಿ ನಾಡಿನ ನೈಜ ಚರಿತ್ರೆಯನ್ನು ಬಿಂಬಿಸುವ ಚರಿತ್ರೆಯ ರಚನೆಗೆ ಕಾರಣರಾದರು.

### ೩.೪ ಕೈಫಿಯತ್ತುಗಳ ಸಂಗ್ರಹದಲ್ಲಿ ಎದುರಾದ ತೊಡಕುಗಳು

ಕರ್ನಲ್ ಮೆಕೆಂಝಿ ಭಾರತದ ತನ್ನ ಸೇವಾವಧಿಯಲ್ಲಿ ಅಪಾರ ಪ್ರಮಾಣದ ಮಾಹಿತಿಯನ್ನು, ವಸ್ತುಗಳನ್ನು, ಇತಿಹಾಸದ ಆಕರಗಳನ್ನು, ಕೈಫಿಯತ್ತುಗಳನ್ನು ಸಂಗ್ರಹಿಸಿದನು. ಈ ಮೂಲಕ ಬ್ರಿಟೀಷ್ ಅಧಿಕಾರಿಗಳ ಮತ್ತು ಅನೇಕ ಇತಿಹಾಸಕಾರರ ಪ್ರಶಂಸೆಗೆ ಪಾತ್ರನಾಗಿದ್ದಾನೆ. ಆದರೆ ಅವನು ಸಂಗ್ರಹಿಸಿರುವ ಕೈಫಿಯತ್ತು, ಮಾಹಿತಿಯ ಆಧಾರಗಳು ಗಾತ್ರದಲ್ಲಿ ಮಾತ್ರ ಗಣನೀಯವಾಗಿದ್ದರೂ ಬಳಕೆಯಲ್ಲಿ ಕೆಲವು ಸಮಸ್ಯೆಗಳನ್ನು ಎದುರಿಸಿದನು. ಕರ್ನಲ್ ಮೆಕೆಂಝಿ ಸಂಗ್ರಹಿಸಿದ ದಾಖಲೆಗಳನ್ನು, ಕಡತಗಳನ್ನು, ಇತರ ವಸ್ತುಗಳನ್ನು ಐತಿಹಾಸಿಕ ದೃಷ್ಟಿಕೋನದಿಂದ ಪರಿಶೀಲಿಸಲು ಹೊರಟಾಗ ಸಂಶೋಧಕನಿಗೆ ಅನೇಕ ತೊಡಕುಗಳು ಎದುರಾಗುತ್ತಿವೆ. ಇತಿಹಾಸ ರಚನೆಗೆ ಇವು ಅಧಿಕೃತ ಆಧಾರಗಳೆಂದು ಕೂಲಂಕಷವಾಗಿ ವಿಶ್ಲೇಷಿಸದೆ ಸರಿಯೆಂದು ಭಾವಿಸಿ ಅವುಗಳನ್ನು ಅಂಗೀಕರಿಸಿದರೆ ಇತಿಹಾಸಕ್ಕೆ ಅನ್ಯಾಯವೆಸಗಿದಂತಾಗುತ್ತದೆ.

ಕರ್ನಲ್ ಮೆಕೆಂಝಿ ಭಾರತ ಗಣಿತಶಾಸ್ತ್ರದ (ಇಂಡಿಯನ್ ಲಾಗಥಮ್ಸ್) ಅಧ್ಯಯನಕ್ಕೆ ಬಂದ ಒಬ್ಬ ನಿರುದ್ಯೋಗಿಯಾಗಿದ್ದು, ಕಾಲ ಕ್ರಮೇಣ ಎಲ್ಲಾ ಅನೇಕ ವಿಷಯಗಳನ್ನು ಕುರಿತ ಮಾಹಿತಿಯನ್ನು ವಸ್ತುಗಳನ್ನು ಸಂಗ್ರಹಿಸುತ್ತಾ ಹೋದನು. ಅವನು ಮೂಲತಃ ಅಥವಾ ತರಬೇತಿ ಹೊಂದಿದ ಇತಿಹಾಸಕಾರನಾಗಿರಲಿಲ್ಲ. ಅವನ ಮುಖ್ಯ ಕಾರ್ಯ ಬ್ರಿಟೀಷ್ ಸರ್ಕಾರದ ಆಜ್ಞೆಯಂತೆ ಹಲವಾರು ಪ್ರದೇಶಗಳಲ್ಲಿ ಸಂಚಾರವನ್ನು ಕೈಗೊಂಡು ಸರ್ಕಾರಕ್ಕೆ ಅನುಕೂಲವಾಗುವಂತಹ ವಿಷಯಗಳನ್ನು ಸಂಗ್ರಹಿಸುವುದು ಮುಖ್ಯವಾಗಿತ್ತು. ಭಾರತದ ಈ ಹಿನ್ನೆಲೆಯಲ್ಲಿ ಮಾಹಿತಿ ಸಂಗ್ರಹವನ್ನು ಪ್ರಾರಂಭಿಸಿದ ಕರ್ನಲ್ ಮೆಕೆಂಝಿಗೆ ತಾನು ಯಾವ ವಿಷಯವನ್ನು ಸಂಗ್ರಹಿಸಬೇಕು,

ಸ್ಥಳೀಯವಾಗಿ ಎಲ್ಲಿ ಹೇಗೆ ವಿಷಯವನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡಬೇಕು ಎಂಬ ಅನುಭವವಿರಲಿಲ್ಲ.

ಹೀಗಾಗಿ ಕರ್ನಲ್ ಮೆಕೆಂಝಿ ಅತ್ಯಂತ ವೈಜ್ಞಾನಿಕವಾಗಿ ಐತಿಹಾಸಿಕ ದಾಖಲೆಗಳನ್ನು ಸಂಗ್ರಹಿಸಿದನೆಂದು ಹೇಳುವುದು ಕಷ್ಟವಾಗುತ್ತಿದೆ. ಕರ್ನಲ್ ಮೆಕೆಂಝಿ ಸೂಕ್ಷ್ಮ ಬುದ್ಧಿಯುಳ್ಳವನೂ, ವಿವೇಕಿಯೂ, ಚಾಣಾಕ್ಷನೂ ಆಗಿದ್ದರೂ ಸಹ ಆರಂಭದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ರಾಜಕೀಯ ಹಿನ್ನೆಲೆಯಲ್ಲಿ ಅವನು ಕಾರ್ಯನಿರ್ವಹಿಸಬೇಕಾಗಿದ್ದಿತು. ಆದುದರಿಂದ ಕರ್ನಲ್ ಮೆಕೆಂಝಿ ಬೌದ್ಧಿಕ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿಸಿಕೊಳ್ಳುವಂತಿರಲಿಲ್ಲ. ಬ್ರಿಟೀಷರಿಗೆ ಬೇಕಾದ ಮಾಹಿತಿಯನ್ನು ಕಲೆಹಾಕುವುದೇ ಆತನ ಮುಖ್ಯ ಕರ್ತವ್ಯವಾಗಿದ್ದಿತು. ಭಾರತದ ಅಂದಿನ ರಾಜಕೀಯ ಪರಿಸ್ಥಿತಿಯು ಸಂಕೋಲೆಗಳಿಂದ ಕೂಡಿತ್ತು. ಬ್ರಿಟೀಷರು ಹಲವಾರು ದೇಶೀಯ ರಾಜರುಗಳನ್ನು ಎದುರಾಳಿಗಳನ್ನಾಗಿ ಮಾಡಿಕೊಂಡಿದ್ದರು. ಮೈಸೂರಿನಲ್ಲಿ ಟಿಪ್ಪುವನ್ನು ಯುದ್ಧದಲ್ಲಿ ಸೋಲಿಸಿದ್ದರೂ ಅವನ ಹಿಂಬಾಲಕರು ಬೆಂಬಲಿಗರು ದಂಗೆ ಏಳುವ ಬಗ್ಗೆ ಬ್ರಿಟೀಷರಿಗೆ ಚಿಂತೆ ಕಾಡುತ್ತಿತ್ತು. ಆದುದರಿಂದ ತಮ್ಮ ಎದುರಾಳಿಗಳ ಬಗ್ಗೆ ಅಗತ್ಯ ಮಾಹಿತಿಯನ್ನು ಪಡೆದುಕೊಳ್ಳುವುದು ಬ್ರಿಟೀಷ್ ಸರ್ಕಾರದ ಮುಖ್ಯ ಗುರಿಯಾಗಿದ್ದಿತು. ಕರ್ನಲ್ ಮೆಕೆಂಝಿ ದಕ್ಷಿಣ ಭಾರತದ ಹಲವಾರು ರಾಜ್ಯಗಳಲ್ಲಿ ಸಂಚರಿಸಿ ಸ್ಥಳೀಯರು ಬ್ರಿಟೀಷರ ಬಗ್ಗೆ ಯಾವ ರೀತಿಯ ಅಭಿಪ್ರಾಯವನ್ನು ಹೊಂದಿದ್ದಾರೆಂದು ತಿಳಿದು ಅದನ್ನು ಸರ್ಕಾರಕ್ಕೆ ವರದಿ ಮಾಡಬೇಕಾಗಿದ್ದಿತು. ಈ ಹಿನ್ನೆಲೆಯಲ್ಲಿ ಕರ್ನಲ್ ಮೆಕೆಂಝಿ ಬ್ರಿಟೀಷ್ ಪರವಾದ ಮಾಹಿತಿಗಳನ್ನು ಅಭಿಪ್ರಾಯಗಳನ್ನು ಸಂಗ್ರಹಿಸಿದನೆಂದು ಕೆಲವು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಇಂತಹ ಬ್ರಿಟೀಷ್ ಪರವಾದ ಅಭಿಪ್ರಾಯಗಳು ನೈಜ ಇತಿಹಾಸದ ಅಧ್ಯಯನಕ್ಕೆ ಅಡ್ಡಿಯಾದುದಾಗಿದ್ದಿತ್ತೆಂದು ಕೆಲವು ವಿದ್ವಾಂಸರು ಭಾವಿಸುತ್ತಾರೆ. ಇದೇ ರೀತಿಯಲ್ಲಿಯೇ ಕರ್ನಲ್ ಮೆಕೆಂಝಿ ಟಿಪ್ಪುವನ್ನು ಕುರಿತು ಸಂಗ್ರಹಿಸಿದ ಮಾಹಿತಿಯು ನಿಷ್ಪಕ್ಷಪಾತವಾಗಿರಲಿಲ್ಲ. ಟಿಪ್ಪು ಸುಲ್ತಾನನ ವಿರುದ್ಧದ ಹೇಳಿಕೆಗಳನ್ನು ಕರ್ನಲ್ ಮೆಕೆಂಝಿ ಅನಿವಾರ್ಯವಾಗಿ ಸಂಗ್ರಹಿಸಬೇಕಾಯಿತು. ಇದೂ ಕೂಡ ಕರ್ನಲ್ ಮೆಕೆಂಝಿ ನಿಷ್ಪಕ್ಷತವಾಗಿ ದಾಖಲೆಗಳನ್ನು ಸಂಗ್ರಹಿಸಿದ್ದನ್ನು ಕಾಣಬಹುದು.

ಪಾಶ್ಚಿಮಾತ್ಯ ಬೌದ್ಧಿಕ ಕ್ಷೇತ್ರದಲ್ಲಿ ಇತಿಹಾಸವನ್ನು ಕುರಿತು ಪ್ರಬುದ್ಧವಾದ ಜಿಜ್ಞಾಸೆ, ಚರ್ಚೆಗಳು ಆ ಕಾಲಘಟ್ಟದಲ್ಲಿ ನಡೆದಿದ್ದವು. ಅನೇಕ ವಿದ್ವಾಂಸರು ಚರಿತ್ರೆಯ ಪರಿಶುದ್ಧ

ಸ್ವರೂಪವನ್ನು ರೂಪಿಸಲು ಪ್ರಯತ್ನಿಸುತ್ತಿದ್ದರು. ಈ ಹಿನ್ನೆಲೆಯಿಂದ ಬಂದ ಪಾಶ್ಚಿಮಾತ್ಯರಿಗೆ ಭಾರತೀಯರ ಇತಿಹಾಸ ಪ್ರಜ್ಞೆಯ ಬಗ್ಗೆ ತೀವ್ರವಾದ ಅಸಮಾಧಾನವುಂಟಾಗಿದ್ದುದು ಸ್ವಾಭಾವಿಕವಾಗಿದ್ದಿತು. ಭಾರತೀಯ ವಿದ್ವಾಂಸರು ತಮ್ಮ ನಾಡಿನ ಚರಿತ್ರೆಯನ್ನು ತಮ್ಮದೇ ಆದ ರೀತಿಯಲ್ಲಿ ಪರಿಭಾವಿಸಿಕೊಂಡಿದ್ದರು. ಪಾಶ್ಚಿಮಾತ್ಯ ಇತಿಹಾಸದಲ್ಲಿ ಇದ್ದಂತೆ ಇಲ್ಲಿ ಕಾಲಮಾನ ಮತ್ತು ಭೌಗೋಳಿಕ ಅಂಶಗಳಿಗೆ ಹೆಚ್ಚಿನ ಮಹತ್ವವಿರಲಿಲ್ಲ. ಮೇಲಾಗಿ ಭಾರತೀಯರ ಬರವಣಿಗೆಗಳಲ್ಲಿ ಧರ್ಮ ಮತ್ತು ಮೂಢನಂಬಿಕೆ, ಜಾತಿ ಇವುಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗಿದ್ದಿತು. ಪಾಶ್ಚಿಮಾತ್ಯರ ವೈಜ್ಞಾನಿಕ ಮನೋಭಾವಕ್ಕೆ ವಿರೋಧವಾಗಿ ಅಜ್ಞಾನ, ಮೂಢನಂಬಿಕೆ, ಧಾರ್ಮಿಕ ಶ್ರದ್ಧೆ ಇವುಗಳೇ ಭಾರತೀಯ ಚಿಂತನೆಯ ಮೂಲ ಅಂಶಗಳಾಗಿದ್ದವು. ಆದುದರಿಂದ ಕರ್ನಲ್ ಮೆಕೆಂಝಿಯು ಸಂಗ್ರಹಿಸಿದ ಕೈಫಿಯತ್ತುಗಳನ್ನು ಅಧ್ಯಯನ ಮಾಡಲು ಪ್ರಾರಂಭಿಸಿದಾಗ ಇಂತಹ ಸೈದ್ಧಾಂತಿಕ ವೈರುಧ್ಯಗಳನ್ನು ಎದುರಿಸ ಬೇಕಾಗುತ್ತದೆ.



ಕೈಫಿಯತ್ತುಗಳು ಶುದ್ಧ ಇತಿಹಾಸದ ರಚನೆಗಳಾಗಿರದೆ ವಿವಿಧ ವಿಷಯಗಳನ್ನು ಹೊಂದಿದ್ದ ಸಂಗ್ರಹಗಳಾಗಿದ್ದವು. ಈ ಬರವಣಿಗೆಗಳಲ್ಲಿ ಧರ್ಮ ಪುರಾಣ, ದಂತಕತೆ ಜಾನಪದ ಮೂಢನಂಬಿಕೆ ಇವುಗಳ ಜತೆಗೆ ಚರಿತ್ರೆ ವಿಷಯಗಳು ಸೇರಿಕೊಂಡು ಗೊಂದಲಗೂಡಾಗಿದ್ದವು. ಈ ಮಿಶ್ರಣದಿಂದ ಶುದ್ಧ ಇತಿಹಾಸವನ್ನು ಬೇರ್ಪಡಿಸಿ ಅದನ್ನು ದಾಖಲಿಸುವುದು ಕಷ್ಟಕರವಾಗಿದ್ದಿತು. ಕರ್ನಲ್ ಮೆಕೆಂಝಿಯ ಸಂಗ್ರಹದಲ್ಲಿನ ವಿಷಯಗಳನ್ನು ಶುದ್ಧ ಇತಿಹಾಸವೆಂದು ಭಾವಿಸಿ ಅಧ್ಯಯನ ಮಾಡಲು ಹೊರಟಾಗ ಇತಿಹಾಸಕಾರನು ಅತ್ಯಂತ ಜಾಗರೂಕನಾಗಿ ಅಲ್ಲಿ ಕಾಣುವ ತೊಡಕುಗಳನ್ನು, ದೋಷಗಳನ್ನು ನಿವಾರಿಸಿಕೊಂಡು ಮುಂದುವರಿಯಬೇಕಾಗುತ್ತದೆ.

ಸೈದ್ಧಾಂತಿಕವಾಗಿ ಪಾಶ್ಚಿಮಾತ್ಯ ಮತ್ತು ಪೌರ್ಯಾತ್ಯ ಚಿಂತನೆಗಳಲ್ಲಿ ಭಿನ್ನಾಭಿಪ್ರಾಯಗಳು ನಮ್ಮ ಬರವಣಿಗೆಯ ಮೇಲೆ ಪ್ರಭಾವವನ್ನು ಬೀರುವುದರಿಂದ ಪಾಶ್ಚಿಮಾತ್ಯ ಲೇಖಕರ ಬರವಣಿಗೆಗಳನ್ನು ಅತ್ಯಂತ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ತಾತ್ವಿಕ ಭಿನ್ನಾಭಿಪ್ರಾಯಗಳಿರುವಂತೆ ಭಾಷಾ ಸಮಸ್ಯೆಗಳು ಈ ಬರವಣಿಗೆಗಳನ್ನು ಅಧ್ಯಯನ ಮಾಡುವಲ್ಲಿ ಅಡ್ಡಿಯಾಗಿರುವುದನ್ನು ಗಮನಿಸಬೇಕಾಗುತ್ತದೆ.

ಕರ್ನಲ್ ಮೆಕೆಂಝಿ ಭಾರತೀಯ ಗಣಿತಶಾಸ್ತ್ರವನ್ನು ಅಧ್ಯಯನ ಮಾಡುವ ಉದ್ದೇಶದಿಂದ ಬಂದರು. ಕ್ರಮೇಣ ಸ್ಥಳೀಯ ಭಾಷೆ, ಸಾಹಿತ್ಯ, ಸಂಸ್ಕೃತಿ ಇವುಗಳನ್ನು ಅಧ್ಯಯನ ಮಾಡುವುದು ಅನಿವಾರ್ಯವಾಯಿತು. ಭಾರತದಲ್ಲಿ ಅಧ್ಯಯನ ಕೈಗೊಂಡು ಕರ್ನಲ್ ಮೆಕೆಂಝಿಯ ಕಾರ್ಯವು ಶ್ಲಾಘನೀಯವಾಗಿ ಕೆಲಸವನ್ನು ನಿರ್ವಹಿಸಿದ್ದಾರೆ ಎಂದು ಹೇಳಬಹುದು. ಆತ ಸಂಗ್ರಹಿಸಿದ ಸಾಹಿತ್ಯ ಕೃತಿಗಳ ಮಹತ್ವವನ್ನು ಜಗತ್ತಿಗೆ ತೋರಿಸಿಕೊಟ್ಟವನು. ಆದರೆ ಕರ್ನಲ್ ಮೆಕೆಂಝಿಗೆ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಅರಿತುಕೊಳ್ಳುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ಕರ್ನಲ್ ಮೆಕೆಂಝಿ ತನ್ನ ಅಧ್ಯಯನ ಸಂಗ್ರಹ ಕಾರ್ಯದಲ್ಲಿ ಅನೇಕ ಭಾಷಾಂತರಕಾರರನ್ನು, ಸಹಾಯಕರನ್ನು ವಿದ್ವಾಂಸರನ್ನು ನೇಮಿಸಿಕೊಂಡಿದ್ದನು. ಅವರಲ್ಲಿ ಕೆಲವು ಉತ್ತಮ ಭಾಷಾಜ್ಞಾನ ಸಾಹಿತ್ಯ ರಚನಾ ಕೌಶಲ್ಯವುಳ್ಳ ಸಹಾಯಕರು ಇದ್ದರು. ಆದರೂ ಸಹ ಕರ್ನಲ್ ಮೆಕೆಂಝಿಯ ಸಂಗ್ರಹ ಕಾರ್ಯದಲ್ಲಿ ವಿವಿಧ ಭಾಷೆಗಳಿಂದ ಇಂಗ್ಲೀಷ್ ಭಾಷೆಗೆ ಅನುವಾದ ಮಾಡುವಾಗ ಅನೇಕ ತೊಡಕುಗಳನ್ನು ಎದುರಿಸಿದನು.

ಕರ್ನಲ್ ಮೆಕಂಝಿ ಮತ್ತು ಆತನ ಸಂಗಡಿಗರು ನಾಲ್ಕಾರು ಭಾಷೆಗಳನ್ನಾಡುವ ಪ್ರದೇಶಗಳಲ್ಲಿ ಸಂಚರಿಸಿ ಅಲ್ಲಿ ಸಿಗುವ ಮಾಹಿತಿಯನ್ನು ಸಂಗ್ರಹಿಸಬೇಕಾಗಿದ್ದಿತು.[೧೦] ಈ ಕಾರಣಕ್ಕಾಗಿ ಕರ್ನಲ್ ಮೆಕಂಝಿಯ ಸಂಗ್ರಹದಲ್ಲಿ ಭಾಷಾ ಸಾಹಿತ್ಯದಲ್ಲಿ ದೋಷಗಳನ್ನು ಕಾಣಬಹುದಾಗಿದೆ. ಬರವಣಿಗೆಯಲ್ಲಿನ ಲೋಪದೋಷಗಳೂ ಸಹ ಕರ್ನಲ್ ಮೆಕೆಂಝಿ ಕೈಫಿಯತ್ತುಗಳಲ್ಲಿ ಕಂಡು ಬರುತ್ತವೆ.[೧೧] ಕರ್ನಲ್ ಮೆಕೆಂಝಿ ಮತ್ತು ಅವನ ಸಹಾಯಕರು ವಕ್ತೃಗಳು ಹೇಳುವ ಪದಗಳನ್ನು ತಪ್ಪಾಗಿ ಕೇಳಿಸಿಕೊಂಡು ತಮ್ಮ ಬರವಣಿಗೆಯಲ್ಲಿ ಅನೇಕ ತಪ್ಪುಗಳನ್ನು ಮಾಡಿರುವುದು ಕಂಡು ಬರುತ್ತದೆ. ಇಂತಹ ಕಾಗುಣಿತ ದೋಷಗಳಿಂದ ವಿರುದ್ಧವಾದ ಅರ್ಥಗಳು ಅಪಾರ್ಥಗಳು ಉಂಟಾಗುವ ಸಂಭವವೇ ಹೆಚ್ಚು.

ಕರ್ನಲ್ ಮೆಕೆಂಝಿ ಸಂಗ್ರಹಿಸಿರುವ ದಾಖಲೆಗಳನ್ನು ಅಧ್ಯಯನ ಮಾಡುವಾಗ ಇತಿಹಾಸಕ್ಕೆ ಸಂಬಂಧಪಟ್ಟ ಅನೇಕ ಗಂಭೀರ ಸಮಸ್ಯೆಗಳು ಎದುರಾಗುತ್ತವೆ. ಅವನಿಗೆ ದೊರೆತ ದಾಖಲೆಗಳನ್ನು ಬರೆದ ಸ್ಥಳೀಯರು ನುರಿತ ಅಥವಾ ಸುಶಿಕ್ಷಿತ ಇತಿಹಾಸಕಾರರಾಗಿರಲಿಲ್ಲ. ಮೇಲಾಗಿ ಭಾರತೀಯರಲ್ಲಿ ಇತಿಹಾಸವನ್ನು ಅತ್ಯಂತ ವಸ್ತುನಿಷ್ಠವಾಗಿ ನಿಖರವಾಗಿ ಹೇಳುವ ಶಿಷ್ಟ ಸಂಪ್ರದಾಯವು ಬೆಳೆದು ಬಂದಿರಲಿಲ್ಲ. ತಮ್ಮ ಊರಿನ, ದೇವಾಲಯ ಹಾಗೂ ಇತರ ಸ್ಮಾರಕಗಳನ್ನು ವೈಭವೀಕರಿಸಿ ವಿವರಿಸುವುದು ನಮ್ಮ ಜನರಲ್ಲಿ ರೂಢಿಯಲ್ಲಿದ್ದ ವಿಧಾನವಾಗಿದ್ದಿತು. ಅದೇ ರೀತಿಯಲ್ಲಿಯೇ ಸ್ಥಳೀಯ ನಾಯಕರನ್ನು, ಕೆಲವು ಸಂಗತಿಗಳನ್ನು ಉತ್ಪ್ರೇಕ್ಷೆಗೊಳಿಸಿ ಅದನ್ನು ಹಾಡಿಹೊಗಳುವುದು

ಸಾಮಾನ್ಯ ಸಂಗತಿಯಾಗಿದ್ದಿತು. ಇದನ್ನು ಎಂ.ಎಂ.ಕಲ್ಬುರ್ಗಿಯವರು ಆರ್ಯೀಕರಣವೆಂದು ಹೆಸರಿಸಿದ್ದಾರೆ.[೧೨] ತಮ್ಮ ದಾಖಲೆಗಳಲ್ಲಿ ಸ್ಥಳೀಯ ವಕ್ತೃಗಳು ಸಾಮಾನ್ಯವಾಗಿ ಬ್ರಾಹ್ಮಣರೇ ಆಗಿದ್ದುದರಿಂದ ಅವರು ತಮ್ಮ ವೈಯಕ್ತಿಕ ನಂಬಿಕೆ, ಪೂರ್ವಾಗ್ರಹ ಹಾಗೂ ಅಜ್ಞಾನದ ಪರಿಣಾಮದಿಂದ ವಿಷಯಗಳನ್ನು ವಿಕೃತಗೊಳಿಸುತ್ತ ಹೋಗಿದ್ದರೆಂದು ಇವರು ತಮ್ಮ ಸ್ಥಳಗಳಲ್ಲಿ ಪ್ರಚಲಿತವಾಗಿದ್ದ ಪೌರಾಣಿಕ, ಧಾರ್ಮಿಕ ಕತೆಗಳನ್ನು ನಂಬಿಕೆಗಳನ್ನು ದಾಖಲಿಸಿದರು. ಅಂತಹ ಪೌರಾಣಿಕ ಹಿನ್ನೆಲೆ ಇಲ್ಲದಿದ್ದರೂ ತಾವೇ ಇಂತಹ ಒಂದು ಅದ್ಭುತ ಕತೆಯನ್ನು ಸೃಷ್ಟಿಸಿ ಅದನ್ನು ಹೇಳುತ್ತಿದ್ದರು. ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಘಟನೆಗಳನ್ನು ತಮ್ಮ ಪ್ರದೇಶಗಳಿಗೆ ಹಾಗೂ ಗ್ರಾಮಗಳಿಗೆ ಕಲ್ಪಿಸಿಕೊಂಡು ಹೇಳುವುದು ಸಾಮಾನ್ಯ ಸಂಗತಿಯಾಗಿದ್ದಿತು. ಹಳ್ಳಿಗಳಲ್ಲಿ ಶ್ಯಾನುಭೋಗರು, ಪಟೇಲರು, ದೇವಾಲಯದ ಅರ್ಚಕರು, ಸ್ಥಳೀಯ ವಿಚಾರಗಳನ್ನು ಹೇಳುತ್ತಿದ್ದುದರಿಂದ ಅವರು ತಮ್ಮದೇ ಆದ ವೈಯಕ್ತಿಕ ದ್ವೇಷಾಸೂಯೆ, ಪೂರ್ವಾಗ್ರಹಗಳನ್ನು ಬೆರೆಸಿ ಕತೆಗಳನ್ನು ಸೃಷ್ಟಿಸುತ್ತಿದ್ದರು. ಇದನ್ನು ಕರ್ನಲ್ ಮೆಕೆಂಝಿ ಹಾಗೂ ಅವನ ಸಹಪಾಠಿಗಳು ಪೂರ್ವಪರ ವಿಮರ್ಶಿಸದೆ ದಾಖಲಿಸಿದ್ದನ್ನು ಕಾಣಬಹುದು.

ಕೈಫಿಯತ್ತುಗಳನ್ನು ಬರೆದವರು ಸಾಮಾನ್ಯರ ನಡುವೆ ಬಾಳಿದ ಕರಣಿಕರು, ಅಕ್ಷರಸ್ಥರು. ಕೆಲವೊಮ್ಮೆ ಸಾಮಾನ್ಯರ ಜೊತೆ ವ್ಯವಹರಿಸುತ್ತಲಿದ್ದ ಅಧಿಕಾರಿಗಳು. ಇವರು ಸಹಜವಾಗಿಯೇ ಆ ಕಾಲದ ಆಡು ಭಾಷೆಯನ್ನು, ಆಡಳಿತ ಭಾಷೆಯನ್ನು ಬಳಸಿದ್ದಾರೆ. ಒಂದು ಕಡೆ ಆಡು ಭಾಷೆಗೆ ಹತ್ತಿರವಾದ ಧ್ವನಿ ಉಳಿದುಕೊಂಡುದು. ಇನ್ನೊಂದು ಕಡೆ ಆಡಳಿತದಲ್ಲಿ ಸೇರಿಕೊಂಡಿದ್ದ ಅನ್ಯ ಭಾಷೆಯ ಪದಗಳನ್ನು ವಿಶೇಷವಾಗಿ ಬಳಸಿರುವುದು ಕರ್ನಲ್ ಮೆಕೆಂಝಿಯ ಸಂಗ್ರಹಿಸಿದ ಆಕರಗಳಾದ ಕೈಫಿಯತ್ತುಗಳ ಮುಖ್ಯ ಲಕ್ಷಣವಾಗಿದೆ. ಒಟ್ಟು ಇಲ್ಲಿಯ ಭಾಷಾ ಸ್ವರೂಪವನ್ನು ಹೀಗೆ ಸಂಗ್ರಹಿಸಬಹುದು.

ಕರ್ನಲ್ ಮೆಕೆಂಝಿ ಕೈಫಿಯತ್ತುಗಳ ಸಂಗ್ರಹ ಕಾರ್ಯದಲ್ಲಿ ಕನ್ನಡ ಭಾಷೆಯಲ್ಲಿ ಎದುರಿಸಿದ ತೊಡಕುಗಳು ಈ ರೀತಿಯಾಗಿ ವಿಶ್ಲೇಷಿಸಬಹುದು. ಆಡು ಭಾಷೆಯನ್ನಾಗಲೀ, ಗ್ರಂಥಸ್ಥ ಭಾಷೆಯನ್ನಾಗಲೀ ಲಿಪಿಬದ್ಧಗೊಳಿಸುವಾಗ ಅಂದಿನ ಬರವಣಿಗೆಯ ಕ್ರಮದಲ್ಲಿ ಕೆಲವು ದೋಷಗಳು ಬಳಕೆಯಲ್ಲಿದ್ದವು. ಅವುಗಳಲ್ಲಿ ಮುಖ್ಯವಾದುದು ಅಕ್ಷರದ ಅಂಗವಾಗಿ ಬರುವ ಮಹಾಪ್ರಾಣಗಳನ್ನು – ದೀರ್ಘಗಳನ್ನು ಸರಿಯಾಗಿ ಬರೆಯುತ್ತಿದ್ದರು. ಹೀಗೆ ತಪ್ಪಾಗಿ ಬರೆದಿರುವುದುನ್ನು ಈ ರೀತಿಯಾಗಿ ನೋಡಬಹುದು. ಉದಾಹರಣೆಗೆ ಕೋಟೋ–ಕೊಟೆ, ದೇವಸ್ಥಾನ–ದೆವಸ್ಥಾನ, ಕೈಫಿಯತ್ತು–ಕೈಪಿಯತ್ತು, ಭೈರವ–ಬೈರವ ಇತ್ಯಾದಿ. ಕೆಲವು ಸಂದರ್ಭಗಳಲ್ಲಿ ಇವುಗಳಿಗೆ

ವ್ಯತಿರಿಕ್ತವಾದ ಉದಾಹರಣೆಗಳೂ ಸಿಗುತ್ತವೆ. ಉಳಿಗದವರು<ಊಳಿಗದವರು, ಗಟ್ಟದ<ಘಟ್ಟದ.[೧೩]

ಕನ್ನಡ ಭಾಷೆಯಲ್ಲಿ ಯಕಾರಾಗಮ, ವಕಾರಾಗಮಗಳ ಪಾತ್ರ ಮುಖ್ಯವಾದುದು. ಸ್ವರಗಳು ಕರಗುವಲ್ಲಿ ಅರ್ಥವನ್ನು ಎತ್ತಿ ಹಿಡಿಯುವುದಕ್ಕಾಗಿ, ಬರುವ ಇವು. ನಮ್ಮ ಭಾಷೆಯನ್ನು ನಿಗ್ರಹಿಸುತ್ತ ಬಂದಿವೆ. ಪದಗಳಲ್ಲಿಯೂ ಇವು ಕರಗಿ ಕನ್ನಡದ ರೂಪ ಪರಿವರ್ತನೆಗೆ ಕಾರಣವಾಗಿವೆ. ಕೈಫಿಯತ್ತುಗಳಲ್ಲಿ ಇದಕ್ಕೆ ಉದ್ದಕ್ಕೂ ಉದಾಹರಣೆಗಳು ಸಿಗುತ್ತವೆ. ಉದಾಹರಣೆಗೆ ಯೀ ವೂರಿಗೆ ಪೂರ್ವದಲ್ಲಿ ಮಿಥಿಲಾಪುರಿಯೆಂನ್ಲೊ ನಾಮ. ಯೀ ವೂರ್ರಿಗೆ ವಳಗೆ ಯಿರುವ – ಇತ್ಯಾದಿ.[೧೪]

ಕನ್ನಡದಲ್ಲಿ ಮೂಲತಃ ಇದ್ದುದು ಸಕಾರ. ಸಂಸ್ಕೃತದ ಶ, ಷಗಳು ಕನ್ನಡಕ್ಕೆ ಬರುವಾಗ ಸಕಾರಕ್ಕೆ ತಿರುಗಿವೆ. ಕೆಲವೊಮ್ಮೆ ಸಕಾರ ಶ, ಷ ಗಳಿಗೆ ತಿರುಗಿದೆ. ಮತ್ತೆ ಕೆಲವೊಮ್ಮೆ ಇವು ಪರಸ್ಪರ ಸ್ಥಾನಪಲ್ಲಟಗೊಳಿಸಿಕೊಂಡಿವೆ. ಶಿವ>ಸಿವ, ಪರಶುರಾಮ>ಪರಸರಾಮ, ಭಾಷೆ>ಭಾಶೆ, ಸೀಮೆ>ಶೀಮೆ, ಸೋದೆ>ಶೊದೆ.[೧೫]

ಸಂಯುಕ್ತಾಕ್ಷರ ವಿರಳಾಕ್ಷರವಾಗುವುದು ಕನ್ನಡ ಭಾಷೆಯಲ್ಲಿ ಸಹಜ. ಉದಾಹರಣೆಗೆ ದರ್ಶನ>ದರುಶನ, ವೈರಾಗ್ಯ>ವಯಿರಾಗ್ಯ, ಕೆಲವೊಮ್ಮೆ ಇದಕ್ಕೆ ವಿರುದ್ಧ ಪ್ರಕ್ರಿಯೆಗಳೂ ಜರುಗಿವೆ. ಉದಾಹರಣೆಗೆ ಹುಟ್ಟುವಳಿ>ಹುಟುವಳಿ, ಕಳುಹಿಸಿಕೊಟ್ಟು> ಕಳುಹ್ಸಿಕೊಟ್ಟು.[೧೬]

ವಿಭಕ್ತಿಪಲ್ಲಟ ಕನ್ನಡ ಭಾಷೆಯ ವಿಶಿಷ್ಟ ಲಕ್ಷಣ. ಕೇಶಿರಾಜ ಇದನ್ನು ಗುರುತಿಸಿ ವಿವರವಾಗಿಯೇ ಚರ್ಚಿಸಿದ್ದಾನೆ. ಇದು ಅರ್ಥಕ್ಕೆ ಬಾಧೆ ಬರದಂತೆ ಜರುಗುತ್ತಿದ್ದು, ಭಾಷೆಯನ್ನು ಸಂಕೀರ್ಣವಾಗಿ ಬಳಸಲು ಒದಗಿದ ಒಂದು ಅನುಕೂಲವೆಂದೇ ಹೇಳಬೇಕು. ಕೈಫಿಯತ್ತುಗಳಲ್ಲಿ ಈ ಕ್ರಿಯೆ ತಕ್ಕ ಪ್ರಮಾಣದಲ್ಲಿ ಕಂಡು ಬರುತ್ತದೆ. ಕೆಲವೊಮ್ಮೆ ಅರ್ಥಕ್ಕೆ ಬಾಧೆ ಬರುವಂತೆಯೂ ಬಳಸಿದ ಉದಾಹರಣೆಗಳು ಸಿಗುತ್ತದೆ. ಉದಾಹರಣೆಗೆ ಅರಮನೆಯು ಕಟ್ಟಿಸಿ, ಕುದುರೆಗಳ ತೆಗೆದುಕೊಂಡು ಹೋಗಿ ಇತ್ಯಾದಿ.[೧೭]

ಋಕಾರ, ರಕಾರದ ಒತ್ತುಗಳು ಬರೆಹದಲ್ಲಿ ಕೆಲವೊಮ್ಮೆ ಸ್ಥಾನಪಲ್ಲಟ ಪಡೆಯುವುದುಂಟು. ಕೈಫಿಯತ್ತು ಇದಕ್ಕೆ ಹಲವು ಉದಾಹರಣೆಗಳನ್ನೊಮ್ಮೆ ಒದಗಿಸುತ್ತವೆ. ಉದಾಹರಣೆಗೆ ಮೃತ>ಮ್ರುತ, ಗೃಹ>ಗ್ರುಹ, ವೃಂದಾವನ>ಉ್ರಂದಾವನ, ವೃತ್ತಾಂತ>ಉ್ರತ್ತಾಂತ, ವೃಷಭಧ್ವಜ>ಉ್ರಷಭಧ್ವಜ.[೧೮] ಬಲದ ಸ್ವರಗಳ ಪ್ರಭಾವಕ್ಕೆ

ಅನುಗುಣವಾಗಿ ಸ್ವರಸಮೀಕರಣ ಇಲ್ಲಿ ಜರುಗಿದುದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ. ಉದಾಹರಣೆ ಕಡಿದು>ಕಡದು, ಕುಳಿತುಕೊಂಡು>ಕುಳುತುಕೊಂಡು[೧೯] ರೂಪವ್ಯತ್ಯಾಸಗಳಲ್ಲದೆ ವಿದೇಶಿ ಪದಗಳ ಬಳಕೆಯೂ ಮಡಿಮೈಲಿಗೆಯ ಕೃತಕತೆಯನ್ನು ಮೀರಿ ಸಹಜವೆಂಬಂತೆ ಕಂಡು ಬರುತ್ತದೆ. ಲಡಾಯ, ಪರವಾನೆ ಖಾವಂದ, ಸನ್ನದು, ನವಾಬ, ಕುಂಪಣಿ, ಸರಕಾರ ಇತ್ಯಾದಿ ಪದಗಳನ್ನು ಇಲ್ಲಿ ಲಕ್ಷಿಸಬೇಕು. ಹೀಗೆ ಭಾಷೆಯ ವೈಶಿಷ್ಟ್ಯಗಳಲ್ಲದೆ ಗೊತ್ತುಮಾಡಿಸಿ>ಗುತ್ತು ಮಾಡಿಸಿ, ತೆಗೆದುಕೊಳ್ಳಬೇಕು> ತೆಗೆದುಕೊಳ್ಳಬೇಕು ಎಂಬಂಥ ರೂಪಗಳನ್ನು ಇಲ್ಲಿ ಕಾಣುತ್ತೇವೆ.

ಸರ್ವೆಯರ್ ಕರ್ನಲ್ ಮೆಕೆಂಝಿಯ ಸಂಗ್ರಹದಲ್ಲಿ ಇರುವ ಕೈಫಿಯತ್ತುಗಳಲ್ಲಿ ಬರುವ ಹಲವಾರು ಪದಗಳು, ಊರಿನ ಹೆಸರುಗಳು ಮತ್ತು ಭಾಷೆಯ ಬಳಕೆ ಹಾಗೂ ಆಧುನಿಕ ಕನ್ನಡ ಭಾಷೆ ಬಳಕೆಯಲ್ಲಿ ಬಹಳಷ್ಟು ಬದಲಾವಣೆ ಇದೆ, ಉದಾಹರಣೆಗೆ ಇಂದು–ಯಿಂದು, ಇದು–ಯಿದು, ಉಭಯ–ವುಭಯ, ಹಾಗೆ–ಹಾಂಗೆ, ಇವರನ್ನು–ಯಿವರನ್ನು, ಬಾದ್‌ಶಹಾ–ಪಸಶಹಾ, ಶಿವಮೊಗ್ಗ–ಸಿಮೊಗ್ಗ, ಅಂಗ್ರೇಜ್–ಇಂಗ್ರೇಜ್, ದಿವಸ–ದಿವುಸ, ಗೌಡ–ಗವುಡ, ಈ–ಯೀ, ಎರಡು–ಯರಡು, ಈವಾಗ–ಯೀವಾಗ, ಪರ್ಯಂತ–ಪರಿಯಂತ, ನಲವತ್ತು–ನಾಲವತು, ಊಳಿಗ–ವುಳುಗ, ಒಡೆಯ–ವೊಡೆಯ, ಒಂದು–ವೊಂದು, ಎದುರು–ಯಿದರು, ಒಬ್ಬ–ವೊಬ್ಬ, ಇಲಾಖೆ–ಯಿಲಾಖೆ, ಪುರೋಹಿತ–ಪವರೋಹಿತ

ಕರ್ನಲ್ ಮೆಕೆಂಝಿಗೆ ಮಾಹಿತಿ ನೀಡುತ್ತಿದ್ದ ವ್ಯಕ್ತಿಗಳಿಗೆ ಶುದ್ಧ ಇತಿಹಾಸ ಐತಿಹ್ಯ ಕತೆ ಇವುಗಳ ನಡುವಿನ ವ್ಯತ್ಯಾಸವು ತಿಳಿಯದಿದ್ದುದರಿಂದ ಅವರ ಕಥನಗಳು ಸತ್ಯ – ಅಸತ್ಯಗಳ ವಿಶ್ರಣವಾಗಿದ್ದವು. ಅನೇಕ ಗ್ರಾಮಗಳಲ್ಲಿ ಸ್ಮಾರಕ ದೇವಾಲಯಗಳನ್ನು ಕುರಿತು ಐತಿಹ್ಯಗಳು ಪ್ರಚಲಿತವಾಗಿದ್ದವು. ಇಂತಹ ಐತಿಹ್ಯಗಳು ಹಲವಾರು ಸ್ಥಳಗಳಲ್ಲಿ ಕಾಣಸಿಗುತ್ತಿದ್ದವು. ಉದಾಹರಣೆ ಮೊಲ–ನಾಯಿಯನ್ನು ಅಟ್ಟಿಸಿಕೊಂಡು ಹೋಗುವುದು, ಸರ್ಪ ಮಲಗಿದ್ದ ಮಗುವಿನ ಮೇಲೆ ಹೆಡೆಯನ್ನು ಎತ್ತಿರುವುದು, ಏಳು ಕೊಪ್ಪರಿಕೆ ಹಣ ಸಿಕ್ಕಿರುವುದು, ದೇವರ ವಿಗ್ರಹವು ಹೂತಿಟ್ಟಿರುವ ಸ್ಥಳದಲ್ಲಿ ಹಸು ಹಾಲನ್ನು ಕರೆಯುವುದು ಮುಂತಾದ ಐತಿಹ್ಯಗಳು ಅನೇಕ ಊರುಗಳ ದೇವಾಲಯಗಳ ವಿವರಣೆಯಲ್ಲಿ ಕಾಣಸಿಗುತ್ತವೆ.

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಪ್ರಮುಖ ಕೈಫಿಯತ್ತುಗಳಲ್ಲಿ ಒಂದಾದ ಉಡುಗಣಿ ಕೈಫಿಯತ್ತಿನಲ್ಲಿ ಕಾಣುವ ಒಂದು ಪ್ರಮುಖ ಐತಿಹ್ಯ ಗಮನಾರ್ಹವಾಗಿದೆ.

.....ಯೀಚಿಗೆ ಬಂದವರು ಶ್ರೀ ಕೇತ್ತಾರೇಶ್ವರಸ್ವಾಮಿ ದೇವಸ್ಥಾನವನ್ನು ಜಕಣಾಚಾರಿ ಕೈಯಿಂದ ಕಟ್ಟಿಸುವುದಕ್ಕೆ ರಾತ್ರಿ ಕಾಲದಲ್ಲಿ ಆರಂಭ ಮಾಡಿ, ಮರುದಿವ್ಯ ಬೆಳಗಾಗುವುದರೊಳಗೆ ದೇವಸ್ಥಾನ ಮುಗಿದುದರಿಂದ ಪ್ರಖ್ಯಾತ ಹೆಸರಾಯಿತು.[೨೦]

ಕರ್ನಲ್ ಮೆಕೆಂಝಿ ದಾಖಲೆಗಳನ್ನು ಸಂಗ್ರಹ ಮಾಡುವಾಗ ಎದುರಿಸಬೇಕಾದ ಮತ್ತೊಂದು ಸಮಸ್ಯೆ ಎಂದರೆ ದಾಖಲೆಯ ಮೂಲ ಪ್ರತಿ ಯಾವುದೆಂದು ನಿರ್ಧರಿಸುವುದು. ಕೆಲವು ವರ್ಷಗಳ ನಂತರ ಕರ್ನಲ್ ಮೆಕೆಂಝಿ ಬರೆಸಿದ್ದ ದಾಖಲೆಗಳು ಶಿಥಿಲವಾಗಿದುದರಿಂದ ಸಿ.ಪಿ. ಬ್ರೌನ್ ಎಂಬ ವಿದ್ವಾಂಸನು ಅವುಗಳನ್ನು ನಕಲು ಮಾಡಿಸಿದ್ದನು.[೨೧] ಈ ರೀತಿ ನಕಲು ಮಾಡುವಾಗ ಲೇಖಕರು ಹಲವು ರೀತಿಯ ತಪ್ಪುಗಳನ್ನು ಮಾಡಿ ಇತಿಹಾಸವನ್ನು ವಿಕೃತಗೊಳಿಸಿದ್ದಾರೆ. ಮೂಲಪ್ರತಿಯ ಕೆಲವು ಭಾಗಗಳು ಇಲ್ಲದಿರುವುದು ಅನೇಕ ಪುಟಗಳು ಪುನರಾವರ್ತನೆಗೊಂಡಿರುವುದು ಮುಂತಾದ ಅಂಶಗಳು ಅಧ್ಯಯನಕ್ಕೆ ತೊಡಕನ್ನುಂಟು ಮಾಡುತ್ತವೆ. ಭಾಷಾ ದೃಷ್ಟಿಯಿಂದಲೂ ಈ ದಾಖಲೆಗಳು ಲೋಪದೋಷಗಳಿಂದ ಕೂಡಿವೆ.[೨೨]

ನಕಲು ಪ್ರತಿ ಮಾಡುವವರು ಅನನುಭವಿಗಳು ಆಗಿದುದ್ದರಿಂದ ಅನೇಕ ಕಾಗುಣಿತ ದೋಷಗಳು ಭಾಷಾ ದೋಷಗಳು ಸಂಭವಿಸಿವೆ. ಹೀಗಾಗಿ ಅನೇಕ ದಾಖಲೆಗಳನ್ನು ಅಭ್ಯಾಸ ಮಾಡುವಾಗ ಮೂಲ ಪ್ರತಿಗಳನ್ನು ತಾಳೆ ಮಾಡಿ ಪರಿಶೀಲಿಸುವುದು ಅಗತ್ಯ. ಸ್ಥಳೀಯ ಇತಿಹಾಸ ಮತ್ತು ಸ್ಮಾರಕಗಳ ಕೆರೆ, ಕಟ್ಟೆ, ಕೋಟೆಗಳ ನಿರ್ಮಾಣವನ್ನು ಕುರಿತು ಕೆಲವು ವಿಚಿತ್ರವಾದ ಅದ್ಭುತ ಅಸಂಗತ ವಿಷಯಗಳನ್ನು ಸ್ಥಳೀಯ ವಕ್ತೃಗಳು ಹೇಳುತ್ತಾ ಬಂದಿರುವುದನ್ನು ಸಂಬಂಧಿಸಿದ ದಾಖಲೆಯಲ್ಲಿ ನೋಡಬಹುದಾಗಿದೆ.[೨೩]

ಹೀಗೆ ಬಿಟ್ಟರೆ ಕೈಫಿಯತ್ತುಗಳಲ್ಲಿ ಉಳಿದುಕೊಳ್ಳುವುದು ಸತ್ಯ. ಈ ಸತ್ಯವು ಅನ್ಯಮೂಲಗಳಿಂದ ಸಮರ್ಥನೆಗೊಳ್ಳುವಂಥದ್ದಿರಬಹುದು. ಇಲ್ಲವೆ ಕೊಟ್ಟ ಹೊಸ ವಿಷಯವಾಗಿರಬಹುದು. ಚರಿತ್ರೆಗೆ ಸಂಬಂಧಿಸಿದ ಹೆಸರುಗಳನ್ನು ತಪ್ಪು ತಪ್ಪಾಗಿ ಉಲ್ಲೇಖಿಸಿರುವುದು ಕೆಲವು ರಾಜವಂಶಗಳನ್ನು ಎಲ್ಲಾ ಕಡೆಯಲ್ಲಿಯೂ ಅನಗತ್ಯವಾಗಿ ಸೇರಿಸುತ್ತಾ ಹೋಗುವುದು ಕೆಲವು ಕೈಫಿಯತ್ತುಗಳಲ್ಲಿ ಕಂಡು ಬರುವ ಮುಖ್ಯ ದೋಷಗಳಾಗಿವೆ. ಅಂಗ, ವಂಗ, ಕಳಿಂಗ, ಛಪ್ಪನ್ನಾರು ದೇಶಗಳನ್ನು ಒಂದು ಊರಿನ ಒಬ್ಬ ಸಾಮಾನ್ಯ ದೊರೆಯು ಆಳುತ್ತಿದ್ದಾನೆಂಬ ಉಲ್ಲೇಖವು ಅನೇಕ ಕೈಫಿಯತ್ತುಗಲ್ಲಿ ಕಂಡು ಬರುತ್ತದೆ. ಗಂಗ, ಮೌರ್ಯ, ಗುಪ್ತ, ಶಾತವಾಹನ ಮೊದಲಾದ ಸಂತತಿಗಳನ್ನು

ಕುರಿತು ರಾಜಕೀಯ ಇತಿಹಾಸವನ್ನು ನಿರೂಪಿಸುವಾಗ ಪ್ರಸ್ತಾಪಿಸಿರುವುದು ಅಸಂಗತವಾದ ಅಂಶವಾಗಿದೆ. ಕೆಲವೊಮ್ಮೆ ರಾಜರ ಸರಿಯಾದ ಹೆಸರು ಸಂಖ್ಯೆಯನ್ನು ನಮೂದಿಸದಿರುವುದು ಇತಿಹಾಸದ ಅಧ್ಯಯನಕ್ಕೆ ತೊಡಕನ್ನುಂಟುಮಾಡುತ್ತದೆ. ಉದಾಹರಣೆಗೆ ಚಿತ್ರದುರ್ಗದ ನಾಯಕ ಪಾಳೆಯಗಾರರ ಇತಿಹಾಸದಲ್ಲಿ ಐದು ಜನ ಮದಕರಿ ನಾಯಕರು ರಾಜ್ಯವಾಳಿದ್ದಾರೆ. ಅವರ ಸರಿಯಾದ ಹೆಸರು ೧ನೇ ಮದಕರಿ ಇತ್ಯಾದಿ ಮತ್ತು ಕಾಲಮಾನವನ್ನು ಹೇಳದಿರುವುದರಿಂದ ಇತಿಹಾಸದ ಸತ್ಯಾಸತ್ಯತೆಗೆ ಭಂಗವುಂಟಾಗುತ್ತದೆ.[೨೪]

ಅದರಂತೆಯೇ ಕಾಲಮಾನವನ್ನು ಸರಿಯಾಗಿ ನಿರೂಪಿಸುವುದರಲ್ಲಿ ಕರ್ನಲ್ ಮೆಕೆಂಝಿ ಎದುರಿಸಿದ ಪ್ರಮುಖ ದೋಷವಾಗಿದೆ. ಶತಮಾನಗಳನ್ನು ಪ್ರಸ್ತಾಪಿಸಿದ್ದರೂ ಅವು ಯಾವ ವರ್ಷಕ್ಕೆ ಸೇರಿದ್ದೆಂಬುದು ತಿಳಿಯದೆ ಕೆಲವು ವೇಳೆ ಸರಿಯಾದ ಕಾಲವನ್ನು ಗುರುತಿಸಲು ಬೇರೆ ಆಧಾರಗಳನ್ನು ಹುಡುಕುತ್ತಾ ಹೋಗಬೇಕಾಯಿತು. ಭಾರತೀಯ ಕಾಲಮಾನವನ್ನು ಕೆಲವು ಶಕವರ್ಷಗಳ ಹೆಸರಿನಿಂದ ವಿವರಿಸುತ್ತಿರುವಾಗ ಒಂದು ವರ್ಷದ ಹೆಸರು ೬೦ ವರ್ಷಗಳ ನಂತರ ಪುನರಾವೃತ್ತಗೊಳ್ಳುವುದರಿಂದ ಇದು ಯಾವ ಕಾಲದೆಂದು ನಿರ್ಧರಿಸುವುದು ಕಷ್ಟವಾಗುತ್ತದೆಂಬುದು ಕರ್ನಲ್ ಮೆಕೆಂಝಿಯ ಅರಿವಿಗೆ ಬಾರದೆ ದಾಖಲಾಗಿರುವುದು ಕಂಡುಬರುತ್ತದೆ.[೨೫]

ಶ್ರೀನಿವಾಸ ಹಾವನೂರ್ ಹೇಳುವಂತೆ ರಾಜಕೀಯ ಇತಿಹಾಸದಲ್ಲಿ ವಂಶಾವಳಿ ಮತ್ತು ಘಟನೆಗಳನ್ನು ಸಿದ್ಧಪಡಿಸುವಲ್ಲಿ ಶತವರ್ಷ, ಬಿರುದು, ಹೆಸರುಗಳ ಉಲ್ಲೇಖದಲ್ಲಿರುವ ಅಸ್ಪಷ್ಟತೆಗಳು ಸಂಶೋಧಕನಿಗೆ ಇನ್ನಷ್ಟು ತೊಂದರೆಗಳನ್ನು ಮುಂದೊಡ್ಡುತ್ತವೆ. ಇದಲ್ಲದೆ ಏನಾದರೂ ಸಂದೇಹ ಉಂಟಾದಾಗ ತುಲನೆ ಮಾಡಿ ನೋಡಬೇಕೆಂದರೆ ಸಮಗ್ರ ಕರ್ನಾಟಕದ ಸಮರ್ಪಕವಾದ ಇತಿಹಾಸ ರಚನೆಯು ಇನ್ನು ಆಗಿರಲಿಲ್ಲ.[೨೬]

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳೂ ಪೌರಾಣಿಕ ಹಿನ್ನೆಲೆಯಲ್ಲಿ ಆರಂಭವಾಗಿ, ಐತಿಹ್ಯಗಳು, ಸ್ಥಳೀಯ ಚರಿತ್ರೆ, ಸಂಕಥನ ಸಾಮಗ್ರಿ, ಸ್ಥಳ ಪುರಾಣಗಳ ನೆಲೆಯಲ್ಲಿ ರಚಿತವಾಗಿವೆ. ಇವುಗಳನ್ನು ವಿಷಯಾಧಾರಿತವಾಗಿ ವಿಂಗಡಿಸಲಾಗಿದೆ. ಪೌರಾಣಿಕ ಹಿನ್ನೆಲೆಯಿಂದ ಪ್ರಾರಂಭಿಸುವುದು, ಐತಿಹ್ಯಗಳನ್ನು ಲಿಖಿತವಾಗಿ ಬರೆದು ದಾಖಲಿಸುವುದು, ಸ್ಥಳೀಯ ಚಾರಿತ್ರಿಕ ಹಿನ್ನೆಲೆ ಬರೆಯುವುದು, ಸ್ಥಳ ಪುರಾಣ ತಿಳಿದವರ ಮುಖೇನ ದಾಖಲಿಸುವುದು, ಅಚ್ಚರಿಯ ವಿಷಯಗಳನ್ನು ರಹಸ್ಯದ

ವಿಷಯಗಳನ್ನು, ಯಾರಿಗೂ ಇದುವರೆಗೂ ಗೋಚರಿಸಿದ ಸಂಗತಿಗಳನ್ನು ಇದ್ದರೆ ದಾಖಲಿಸಾಗಿದೆ.

## ೩.೫ ಕೈಫಿಯತ್ತುಗಳ ಸಂಗ್ರಹದಲ್ಲಿ ಅನುಸರಿಸಿದ ಕಾರ್ಯವಿಧಾನ

ಕರ್ನಲ್ ಮೆಕೆಂಝಿ ಒಂದು ಹಳ್ಳಿಯಲ್ಲಿ ಕ್ಷೇತ್ರಕಾರ್ಯ ಮಾಡಿ ಅಲ್ಲಿಯ ಜನರನ್ನು ಸಂದರ್ಶಿಸಿ, ಮೇಲಿಂದ ಮೇಲೆ ಪ್ರಶ್ನೆಗಳನ್ನು ಹಾಕುತ್ತಾ, ಹಲವಾರು ವಿಷಯಗಳ ಬಗೆಗೆ ಮಾಹಿತಿಯನ್ನು ಕಲೆಯಾಕುತ್ತಿದ್ದ. ಆತ ಮುಖ್ಯವಾಗಿ ಗಮನಿಸುತ್ತಿದ್ದುದು: ಹಳ್ಳಿಯ ಜನರ ಜೀವನ, ಅಲ್ಲಿನ ಚಾರಿತ್ರಿಕ ಹಾಗೂ ಪೌರಾಣಿಕ ಹಿನ್ನೆಲೆ, ಅಲ್ಲಿಯ ಬೇಸಾಯ ಕ್ರಮ, ಜನರ ಭಾಷೆ, ಜಾನಪದ ವಸ್ತು ಹಾಗೂ ಶಾಸನಗಳ ಸಂಗ್ರಹ, ತಾಳೇಗರಿ ಗ್ರಂಥಗಳ ಸಂಗ್ರಹ,  ಕಡತಗಳ ಸಂಗ್ರಹ. ಈ ರೀತಿ ಆತನ ಭೇಟಿ ಹಲವಾರು ಉದ್ದೇಶಗಳಿಂದ ಕೂಡಿರುತ್ತಿತ್ತು.

ಕರ್ನಲ್ ಮೆಕೆಂಝಿ ತನ್ನ ಸಂಶೋಧನಾ ಕಾರ್ಯಾರ್ಥವಾಗಿ ಹೊರಟ ಕಾಲ ವೈಜ್ಞಾನಿಕವಾಗಿ ಮುಂದುವರಿದ ಕಾಲವಾಗಿರಲಿಲ್ಲ. ಆತ ಏಕಾಂಗಿಯಾಗಿ ತನ್ನ ಕುದುರೆಯ ಮೇಲೆ ಸಾಗುತ್ತಾ ಹಳ್ಳಿ ಹಳ್ಳಿ ಸುತ್ತಿದ. ಕಾಡು ಮೇಡುಗಳಲ್ಲಿ ಅಲೆದ, ಮಳೆ, ಚಳಿ, ಬಿಸಿಲು, ಬೇಗೆ ಯಾವುದನ್ನೂ ಲೆಕ್ಕಿಸದೆ ಸರಿಯಾದ ಆಹಾರ ವ್ಯವಸ್ಥೆ ಇಲ್ಲದೆ ಅಲೆಮಾರಿಯಂತೆ ಅಲೆದಾಡಿದ. ತಾನು ಕಂಡ ಮರ, ಗಿಡ, ಪಶು, ಪಕ್ಷಿ, ಹೂ, ಕೃಷಿಕರ ಬೆಳೆ, ಎಲ್ಲವನ್ನೂ ಕುತೂಹಲ ಆಸಕ್ತಿಯಿಂದ ಗಮನಿಸಿ ಅವುಗಳ ಬಗ್ಗೆ ಟಿಪ್ಪಣಿ ರೂಪದಲ್ಲಿ ಬರೆದಿರಿಸಿದನು. ಅವನ ಸಂಗ್ರಹ ಕಾರ್ಯದಲ್ಲಿ ನೆರವಾದವರು ಸ್ಥಳೀಯರೇ ಆದ ಮುಗ್ಧ ಜನ ಹಳ್ಳಿಯ ಮುಖ್ಯಸ್ಥರು, ಪಂಡಿತರು, ಅಕ್ಷರಸ್ಥರು ಅವನಿಗೆ ಬರೆದುಕೊಟ್ಟರು. ಕರ್ನಲ್ ಮೆಕೆಂಝಿ ತಾನು ಹೋದಲ್ಲೆಲ್ಲಾ ಕೇಳಿ, ಕೇಳಿದಕ್ಕೆಲ್ಲ ತಮಗೆ ತಿಳಿದಿರುವುದನ್ನು ಹೇಳಿ, ಆತನಿಗೆ ತಮ್ಮ ಸಂಪೂರ್ಣ ಸಹಾಯ ಹಾಗೂ ಸಹಕಾರ ನೀಡಿದರು. ಬಹುಶಃ ಹಳ್ಳಿಯ ಜನ ಕರ್ನಲ್ ಮೆಕೆಂಝಿಗೆ ಸಹಕರಿಸದೆ ಇದ್ದರೆ, ಆತನ ಸಂಗ್ರಹಣೆಯು ದಾಖಲೆ ಖಂಡಿತ ಆಗುತ್ತಿರಲಿಲ್ಲ. ಈ ಕಾರಣದಿಂದಲೇ  ಕರ್ನಲ್ ಮೆಕೆಂಝಿಯನ್ನು ಇಂದಿನ ಇತಿಹಾಸಕಾರರು ಹಾಗೂ ಕನ್ನಡ ನಾಡಿನ ಜನತೆ ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ಹಳ್ಳಿ ಹಳ್ಳಿ ತಿರುಗುವಲ್ಲಿ ಎಲ್ಲವನ್ನೂ ವಿಸ್ಮಯ ಹಾಗೂ ಶ್ರದ್ಧೆಯಿಂದ ನೋಡುವ, ಕೇಳುವ ಹಾಗೂ ಬರೆಸಿ ತನ್ನೊಂದಿಗೆ ಒಯ್ಯುವ ಈ ಆಂಗ್ಲ ಅಧಿಕಾರಿ ಹಳ್ಳಿಯ ಮುಗ್ಧಜನರಿಗೆ ಒಬ್ಬ ಅಪರೂಪದ, ಅಪೂರ್ವ, ವ್ಯಕ್ತಿಯಾಗಿ ಕಂಡಿದ್ದಾನೆ. ಕರ್ನಲ್ ಮೆಕೆಂಝಿಯ ಸರಳತನ, ಸಜ್ಜನಿಕೆ, ಆಕರ್ಷಕ ವ್ಯಕ್ತಿತ್ವ, ಹಳ್ಳಿಯ

ಜನರಿಗೆ ಮೆಚ್ಚಿಗೆಯಾಗಿತ್ತು. ತನಗೆ ಸಹಾಯ, ಸಹಕಾರ ನೀಡಿದ ಹಳ್ಳಿಗರ ಸೇವಾಪರತೆ, ಉದಾರತೆ, ಮುಗ್ಧತೆಯನ್ನು ಗಮನಿಸಿ ತನ್ನ ವೇತನ ಅಥವಾ ಆದಾಯದಲ್ಲೇ ಅವರಿಗೆ ಹಣ ನೀಡುತ್ತಿದ್ದುದು ಮತ್ತೊಂದು ವಿಶೇಷತೆಗೆ ಸಾಕ್ಷಿಯಾಗಿದೆ.

ಯಾವ ವ್ಯಕ್ತಿಗೆ ಭೂಗೋಳಶಾಸ್ತ್ರದ ಬಗ್ಗೆ ಹೆಚ್ಚು ಜ್ಞಾನ, ಆಸಕ್ತಿ ಇರುತ್ತದೋ ಆತನನ್ನು ಅತಿ ಬುದ್ಧಿವಂತ ಎಂದು ಪರಿಗಣಿಸುತ್ತಾರೆ. ಎಲ್ಲಾ ಸಾಮಾಜಿಕ ವಿಜ್ಞಾನ ವಿಷಯಗಳಿಗೂ ಭೂಗೋಳ ತಾಯಿ ಬೇರು ಇದ್ದಂತೆ. ಇಂತಹ ಆಸಕ್ತಿ ಮತ್ತು ಜ್ಞಾನ ಕರ್ನಲ್ ಮೆಕೆಂಝಿಗೆ ಅಗಾಧವಾಗಿತ್ತು. ಆ ಕಾರಣಕ್ಕಾಗಿಯೇ ಆತನನ್ನು ಭಾರತದ ಪ್ರಥಮ ಸರ್ವೆಯರ್ ಜನರಲ್ ಎಂಬ ಹುದ್ದೆಗೆ ವಸಾಹತುಶಾಹಿ ಸರ್ಕಾರ ನೇಮಿಸಿಕೊಂಡಿತು ಎಂದೇ ಹೇಳಬಹುದು. ಸೈನ್ಯದ ಚಲನೆಗಾಗಿ ಭೂಸ್ವರೂಪವನ್ನು ಶೋಧಿಸುವ ಅಧಿಕಾರಿಯಾಗಿ ಹುದ್ದೆ ಅಲಂಕರಿಸಿದ ಮೇಲೆ ಭಾರತದ ಭೌಗೋಳಿಕ ಲಕ್ಷಣಗಳ ಬಗ್ಗೆ ಗಮನಹರಿಸಿ, ಕ್ಷೇತ್ರಕಾರ್ಯ ಮಾಡಿ, ಸಂಪೂರ್ಣ ವಿವರಗಳನ್ನು ಸಂಗ್ರಹಿಸಿಕೊಂಡನು. ನಕಾಶೆ ರಚಿಸುವುದು, ಮೇಲ್ಮೈ ಲಕ್ಷಣಗಳ ಬಗ್ಗೆ ಟಿಪ್ಪಣಿ ಬರೆದಿಡುವ ಹವ್ಯಾಸ ಮಾಡಿಕೊಂಡನು. ತನ್ನ ಸಂಗ್ರಹ ಕಾರ್ಯದಲ್ಲಿ ಯಾವುದೇ ರೀತಿಯ ತೊಂದರೆ ಬಂದರೂ ಎದೆಗುಂದದೆ ಮುನ್ನಡೆಯುವ ಸ್ವಭಾವ ಆತನದಾಗಿತ್ತು. ಅದರಿಂದಾಗಿಯೇ ತನಗೆ ದೊರೆತ ಅಲ್ಪ ಕಾಲಾವಧಿಯಲ್ಲಿಯೇ ಹೆಚ್ಚು ಕೆಲಸ ಮಾಡುವಂತಹ ಹಾಗೂ ಸಾಧಿಸುವಂತಹ ಮನೋದಾರ್ಢ್ಯವನ್ನು ಹೊಂದಿದ್ದ. ಆತನು ಕೆಲಸಗಳಲ್ಲಿ ತೋರುತ್ತಿದ್ದ ಶ್ರದ್ಧೆ, ಅಚ್ಚುಕಟ್ಟು, ನಿಯಮಬದ್ಧತೆಯನ್ನು ಆತನ ಮೇಲಾಧಿಕಾರಿ ಕಲೆಕ್ಟರ್‌ಗಳು ಕರ್ನಲ್ ಮೆಕೆಂಝಿ ಒಬ್ಬ ಶ್ರೇಷ್ಠ ಭೂಮಾಪಕ ಹಾಗೂ ಅಸಾಮಾನ್ಯ ಭೂಗೋಳ ತಜ್ಞ, ಕೆನ್ಸಿಂಗ್‌ಟನ್‌ನ ರಾಯಲ್ ಜಿಯಾಗ್ರಫಿಕಲ್ ಸಂಸ್ಥೆಯ ಉಪನ್ಯಾಸ ಭವನದ ಗೋಡೆಯಲ್ಲಿ ಕರ್ನಲ್ ಮೆಕೆಂಝಿಯ ಹೆಸರು ಎಂದೆಂದಿಗೂ ಅಮರವಾಗಿರುತ್ತದೆ ಉಲ್ಲೇಖಿಸಿದ್ದಾರೆ.

ಸರಿ ಸುಮಾರು ೩೮ ವರ್ಷಗಳ ಕಾಲ ಭಾರತದಲ್ಲಿದ್ದು ಇಷ್ಟೊಂದು ಅದ್ಭುತ ಕೆಲಸಗಳನ್ನು ಮಾಡಿದರೂ ಕರ್ನಲ್ ಮೆಕೆಂಝಿಗೆ ತನ್ನ ಕಾರ್ಯದ ಬಗ್ಗೆ ಸಮಾಧಾನವಿರಲಿಲ್ಲ. ತಾನು ಸಂಪಾದಿಸಿ, ಸಂಗ್ರಹಿಸಿದ ಎಷ್ಟೊ ಪ್ರಾಕ್ತನ ವಸ್ತುಗಳನ್ನು ಯೋಗ್ಯ ರೀತಿಯಲ್ಲಿ ಪರಿಶೀಲಿಸಲು ಸಾಧ್ಯವಾಗದೆ ಬಿಟ್ಟುಹೋದ ಬಗ್ಗೆ ಬಹಳಷ್ಟು ಕಳಕಳಿಯನ್ನು ವ್ಯಕ್ತಪಡಿಸಿದ್ದಾನೆ. ಈ ಕಾಲಾವಧಿಯಲ್ಲಿ ನಾನು ಅಲೆದಾಡಿದ ಸ್ಥಳಗಳಲ್ಲಿ ಇನ್ನೂ ಉಳಿದಿರುವ ಪ್ರಾಚ್ಯ ವಸ್ತುಗಳನ್ನು ಸೂಕ್ತವಾಗಿ ಪರಿಶೀಲಿಸಲು ಸಾಧ್ಯವಾಗದ್ದಕ್ಕೆ ವಿಷಾದಿಸುತ್ತೇನೆ ಎಂದು ಕರ್ನಲ್ ಮೆಕೆಂಝಿ ಹೇಳಿಕೊಂಡಿದ್ದಾನೆ.

ಕೈಫಿಯತ್ತುಗಳು ಸಂಶೋಧಕ ವಿದ್ವಾಂಸರಿಗೆ ಲಭ್ಯವಾಗುವ ಮುನ್ನ ಕರ್ನಾಟಕದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಪುನರ್ ರಚಿಸಲು ಪ್ರಯತ್ನಪಟ್ಟ ಸಂಶೋಧಕರಿಗೆ ಪ್ರಧಾನವಾಗಿ ಮಾಹಿತಿ ಲಭ್ಯವಿದ್ದುದು ಶಿಲಾ ಶಾಸನ ಹಾಗೂ ತಾಮ್ರಪಟ್ಟಶಾಸನಗಳಿಂದ ಮಾತ್ರ.[೨೭] ಶಾಸನಾಧಾರಗಳಿಗೆ ಪೂರಕವಾಗಿ ಸಾಹಿತ್ಯ ಕೃತಿಗಳು ಸಹಾಯಕವಾಗಿದ್ದವು, ವಿದೇಶಿ ಬರವಣಿಗೆಗಳು ಅಲ್ಲಲ್ಲಿ ಬೆಳಕು ಚೆಲ್ಲುತ್ತಿದ್ದವು. ಆದಾಗ್ಯೂ ಲಭ್ಯವಿದ್ದ ಕರ್ನಾಟಕದ ಆಧುನಿಕ ಹಾಗೂ ಪೂರ್ವಕಾಲದ ಅನೇಕ ವಿಷಯಗಳು ಅಸಮರ್ಪಕವಾಗಿಯೇ ಉಳಿದುಕೊಂಡಿದ್ದವು.[೨೮] ಕರ್ನಾಟಕದಾದ್ಯಂತ ಶಾಸನಗಳ ಸಂಗ್ರಹಣೆಯ ಕಾರ್ಯ ಐರೋಪ್ಯ ಅಧಿಕಾರಿ/ವಿದ್ವಾಂಸರಿಂದಲೇ ಆರಂಭವಾಗುತ್ತದೆ. ಚರಿತ್ರೆ–ರಚನಾ ಕಾರ್ಯಗಳಿಗೆ, ಸಂಶೋಧಕರಿಗೆ ಆಸಕ್ತಿ ಹುಟ್ಟಿಸುವಂತಹ ನಿಗೂಢ ವಿಷಯಗಳು, ಗೊತ್ತಿಲ್ಲದ ಹಲವಾರು ವಿಷಯಗಳು ಶಾಸನಗಳಿಂದ ಲಭ್ಯವಾದುವು ಈ ಕಾರ್ಯದಲ್ಲಿ ಬಿ.ಎಲ್. ರೈಸ್, ರಾಬರ್ಟ್ ಸೀವೆಲ್, ಜೆ.ಎಫ್. ಫ್ಲೀಟ್, ವಾಲ್ಟರ್ ಈಲಿಯಟ್, ಜಾನ್ ಬರ್ಗೆಸ್, ಎಫ್. ಕೀಲ್ ಹಾರ್ನ್, ಡಬ್ಲ್ಯೂ ಟೇಲರ್, ಮೆಡೋಸ್ ಟೇಲರ್ ಇನ್ನೂ ಹಲವರು ಪ್ರಾತಃಸ್ಮರಣೀಯರು.[೨೯]

ಈ ಇತಿಹಾಸಕಾರರು ಐತಿಹಾಸಿಕ ಶಾಸನಗಳ ಸಂಗ್ರಹ ಹಾಗೂ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅವರ ಉದ್ದೇಶ ಏನೇ ಇದ್ದರೂ, ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳು ಪ್ರಸ್ತುತದಲ್ಲಿ ಪ್ರಮುಖ ಚಾರಿತ್ರಿಕ ದಾಖಲೆಗಳಾಗಿರುವುದು ಕಂಡುಬರುತ್ತದೆ. ಕೈಫಿಯತ್ತು, ಬಖೈರು, ನಾಮೆ, ಸಾಂಗತ್ಯ, ವಂಶಾವಳಿ, ಹಾಡುಗಬ್ಬಗಳು ಎಂಬ ಬೇರೆ ಬೇರೆ ಹೆಸರಿನಿಂದ ಕರೆಸಿಕೊಳ್ಳುವ ಈ ದಾಖಲೆಗಳಲ್ಲಿ ಟಿಪ್ಪು ಮರಣಾನಂತರ ಬ್ರಿಟಿಷರು ತೋರಿದ ಅಮಿಷಗಳನ್ನು ನಂಬಿದ ಪಾಳೇಗಾರರ ಸ್ಥಿತಿಗತಿ; ಟಿಪ್ಪು ವಿರುದ್ಧ ಬ್ರಿಟಿಷರಿಗೆ ಸಹಾಯ ಮಾಡಿ, ನಂತರ ಮೋಸ ಹೋದ ಸಂಗತಿಗಳ ಬಗೆ, ತಮ್ಮ ಭೂಪ್ರದೇಶವನ್ನು ತಮಗೇ ಕರುಣಿಸಿ ಎಂದು ಗೋಗರೆದು ಬರೆದುಕೊಂಡ ಮನವಿ ಪತ್ರಗಳ ವಿವರಗಳನ್ನು ನೋಡಬಹುದು.[೩೦] ಉದಾಹರಣೆಗೆ ಆನೇಕಲ್ ಪಾಳೆಗಾರರ ಕೈಫಿಯತ್ತು, ಅಂದಿನ ಪರಿಸ್ಥಿತಿಯಲ್ಲಿ ಬ್ರಿಟಿಷರನ್ನು ಮೆಚ್ಚಿಸಲು ಬರೆದ ದಾಖಲೆಗಳೆಲ್ಲವೂ ಸ್ವಾಭಾವಿಕವಾಗಿ ಟಿಪ್ಪುವಿನ ನಿಂದನೆ; ಒಡೆಯರಿಗೂ, ಬ್ರಿಟಿಷರಿಗೂ ನಿಷ್ಠೆ ತೋರುವುದನ್ನು ನೋಡಬಹುದು. ಈ ಚಾರಿತ್ರಿಕ ದಾಖಲೆಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಬ್ರಿಟಿಷರ ಸಮಯ ಸಾಧಕ ನೀತಿ ಹಾಗೂ ಒಡೆದು ಆಳುವ ನೀತಿ ಸ್ಪಷ್ಟವಾಗಿ ಕಂಡು ಬರುತ್ತದೆ.[೩೧]

## ೩.೬ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಕನ್ನಡ ನಾಡಿನ ಚರಿತ್ರೆಗೆ ನೀಡಿದ ಕೊಡುಗೆಗಳು

ಕನ್ನಡ ನಾಡಿನ ಇತಿಹಾಸದ ಕೊಂಡಿಗಳನ್ನು ಕಾಲಾನುಕ್ರಮದಲ್ಲಿ ಬೆಸೆಯಲು ಈ ಸಂಗ್ರಹಗಳು ಅತ್ಯಂತ ಉಪಯುಕ್ತವಾಗಿದೆ. ಕೈಫಿಯತ್ತುಗಳ ಪ್ರಾಮುಖ್ಯತೆ ಇತರೆ ಇತಿಹಾಸ ಅಧ್ಯಯನದ ಆಕರಗಳಿಗಿಂತ ಭಿನ್ನ ಮತ್ತು ಪೂರಕ ಆಕರವಾಗಿ ಅತೀ ವಿಭಿನ್ನ ಎಂಬುದು ಎಲ್ಲಾ ಇತಿಹಾಸ ಸಂಶೋಧಕರ ಒಮ್ಮತಾಭಿಪ್ರಾಯವಾಗಿದೆ. ಈ ಮೂಲಕ ದೊರೆತಿರುವ ಮಾಹಿತಿಗಳು ಕರ್ನಾಟಕ ಇತಿಹಾಸದ ಪುನರ್ ರಚಿಸಲು ಬಹಳ ಸಹಕಾರಿ ಮಾತ್ರವಲ್ಲದೇ ಕರ್ನಾಟಕವನ್ನು ಆಳಿದ ನಂದ, ಗಂಗ, ಚಾಲುಕ್ಯ, ಕದಂಬ, ಚೋಳ, ಕಳಚೂರಿ, ಹೊಯ್ಸಳ, ಕಂಪಿಲ, ವಿಜಯನಗರ ಅರಸರು, ಒಡೆಯರ್ ಅರಸರು, ಹೈದರಾಲಿ, ಟಿಪ್ಪು ಸುಲ್ತಾನ್ ಮತ್ತು ಸ್ಥಳೀಯ ಪಾಳೇಗಾರರ ಕುರಿತು ಮಾಹಿತಿ ನೀಡುವ ಆಕರಗಳಾಗಿವೆ. ಈ ಕೈಫಿಯತ್ತುಗಳ ಮಾಹಿತಿಯ ಭಂಡಾರದಲ್ಲಿ ಹೊಯ್ಸಳರ ಕುರಿತು ಅತಿ ಹೆಚ್ಚು ಮಾಹಿತಿ ಇದೆ. ಮೌರ್ಯ ಅರಸರ ಕುರಿತು ಅತೀ ಕಡಿಮೆ ಮಾಹಿತಿ ಇದೆ. ವಿಜಯ ನಗರ ಕಾಲದ ಮಾಹಿತಿ ಹೇರಳವಾಗಿ ಲಭ್ಯವಿದೆ. ನಂದ ಅರಸರ ಕಾಲಾನುಕ್ರಮದ ಹೆಸರುಗಳಲ್ಲಿ ಕೆಲವು ಬದಲಾವಣೆ ಇದ್ದರೂ ನಂದರ ಕಾಲದಲ್ಲಿ ಆಡಳಿತ ದೃಷ್ಟಿಯಿಂದ ಕರ್ನಾಟಕದ ಸಂಬಂಧಗಳು ಬಹಳ ಆಸಕ್ತಿದಾಯಕವಾಗಿವೆ. ನಂದ ಅರಸರು ಮತ್ತು ಅಂದಿನ ಕರ್ನಾಟಕದ ಜೊತೆ ಪ್ರಾದೇಶಿಕ ಮತ್ತು ಆಡಳಿತಾತ್ಮಕ ಸಂಬಂಧಗಳ ಕುರಿತು ಮಾಹಿತಿ ದೊರೆಯುವುದೂ ಸಹ. ಕರ್ನಾಟಕ ಇತಿಹಾಸವನ್ನು ಕ್ರಿಸ್ತಪೂರ್ವ ಯುಗಕ್ಕೆ ತೆಗೆದುಕೊಂಡು ಹೋಗುತ್ತದೆ. ಸಣ್ಣ ಪುಟ್ಟ ಸ್ಥಳೀಯ ಅರಸರ ಕುರಿತು ಮಾಹಿತಿ ಹೊರಹಾಕುವ ಈ ಕೈಫಿಯತ್ತುಗಳ ವಿಷಯ ವಿಸ್ತಾರ ಬಹಳ ಕುತೂಹಲ ಭರಿತ. ಈ ಕೈಫಿಯತ್ತುಗಳ ಭಾಗವಾಗಿ ರಾಜಕೀಯ ಮೇಲಾಟಗಳು, ಪಿತೂರಿಗಳು ಮತ್ತು ರಾಜಕೀಯ ಪ್ರೇರಿತ ಒಳಸಂಚುಗಳು ಹೆಚ್ಚು ವರ್ಣಿತವಾಗಿರುವುದು ಜನ ಸಾಮಾನ್ಯರ ಮೇಲೆ ಅಂತಹ ಘಟನೆಗಳೂ ಬೀರಿದ ಪ್ರತಿಕೂಲ ಪ್ರಭಾವವನ್ನು ಪ್ರತಿಫಲಿಸುತ್ತದೆ. ಇತರೆ ಇತಿಹಾಸದ ಆಕರಗಳಲ್ಲಿ ತೀರಾ ನಿರ್ಲಕ್ಷಕ್ಕೆ ಒಳಗಾಗಿರುವ ಕಂಪಿಲ ಅರಸರ ಬಗ್ಗೆ ಮಾಹಿತಿ ದೊರೆಯುವುದು ಕರ್ನಾಟಕದ ಪ್ರಾದೇಶಿಕ ರಾಜಕೀಯ ಸ್ಥಿತ್ಯಂತರಗಳ ಪ್ರಭಾವವೇ ಆಗಿದೆ. ೧೫೬೫ರಲ್ಲಿ ವಿಜಯ ನಗರ ಸಾಮ್ರಾಜ್ಯದ ಪತನಕ್ಕೆ ಕಾರಣವಾದ ರಕ್ಕಸ ತಂಗಡಿ ಯುದ್ಧದ ನಂತರ ಸಾಮಾನ್ಯ ಜನ ಜೀವನ ಏರು-ಪೇರಾದುದರ ಕುರಿತು ಈ ಕೈಫಿಯತ್ತುಗಳಲ್ಲಿ ಮಾಹಿತಿ ನೀಡಲಾಗಿದೆ.

ಈ ಕೈಫಿಯತ್ತುಗಳ ಮೂಲಕ ದೊರೆಯುವ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿನ ಯುದ್ಧೋತ್ಸಾಹ ಮತ್ತು ರಣ ತಂತ್ರಗಳ ಮಾಹಿತಿ

ಅಪೂರ್ವವಾದುದು. ಅಲ್ಲದೆ ಅನನ್ಯವಾದ ಐತಿಹಾಸಿಕ ಅಂಶಗಳನ್ನು ಒಳಗೊಂಡಿದೆ. ಇತರೆ ಪೂರಕ ಆಕರಗಳಲ್ಲಿ ನಿರ್ಲಕ್ಷಿಸಲ್ಪಟ್ಟಿರುವ, ಅಪೂರ್ಣವಾಗಿರುವ ಕನ್ನಡ ನಾಡಿನ ಮೇಲೆ ಮರಾಠ ಸೈನಿಕರ ನಿರಂತರ ಆಕ್ರಮಣಶೀಲವಾದ ಬಗ್ಗೆ ಉಲ್ಲೇಖವಿದೆ. ಅಲ್ಲದೆ ಜನಜೀವನವನ್ನು ಅವು ಪ್ರಭಾವಿಸಿದ ವಿಧಾನಗಳು, ಅದರಿಂದುಂಟಾದ ಭೀಕರ ಪರಿಣಾಮಗಳು ಈ ಕೈಫಿಯತ್ತುಗಳಲ್ಲಿ ಪ್ರತಿಬಿಂಬಿತವಾಗಿದೆ. ಇನ್ನು ಕನ್ನಡ ನಾಡಿನ ಆಡಳಿತ ಮತ್ತು ಒಳಾಡಳಿತ ನೀತಿಗಳಲ್ಲಿ ಭಾಗೀದಾರಾದ ಹಲವಾರು ಅಧಿಕಾರಿಗಳು, ಅವರ ಅಧಿಕಾರ ವ್ಯಾಪ್ತಿ ಮೊದಲಾದ ಕುರಿತು ಶಾಸನಗಳಲ್ಲಿ ದೊರಕುವ ಮಾಹಿತಿಗಳಂತೆಯೇ ಈ ಕೈಫಿಯತ್ತುಗಳ ಮಾಹಿತಿಯೂ ಪೂರಕವಾಗಿದೆ.

ಕರ್ನಲ್ ಮೆಕೆಂಝಿ ಅವರ ಸಂಗ್ರಹದ ಕಾರ್ಯದ ಆಗಾಧತೆ ತಿಳಿಯವುದು ಅವರ ಸಂಗ್ರಹಗಳು ನೀಡುವ ವೈವಿಧ್ಯಮಯ ಆಕರಗಳಿಂದ ಸ್ಪಷ್ಟವಾಗುತ್ತದೆ. ಭಾರತೀಯ ಮತ್ತು ಆಂಗ್ಲ ಇತಿಹಾಸಕಾರರು ಅವರನ್ನು ಬೆಂಬಲಿಸುವುದು ಈ ವಿದ್ವತ್ ಪೂರ್ಣತೆಗಾಗಿಯೇ.

ಕನ್ನಡ ಭಾಷೆಯಲ್ಲಿ ನುಸುಳಿ ಬಂದಿರುವ ಮರಾಠಿ, ಪರ್ಶಿಯನ್, ಹಿಂದಿ ಪದಗಳ ಬಳಕೆ ಕನ್ನಡ ಭಾಷೆಯಲ್ಲಿ ಪ್ರಾಂತೀಯ ಭಾಷಾ ಬಳಕೆ ಪದ ಪ್ರಯೋಗಗಳ ಕುರಿತು ಮಾಹಿತಿ ನೀಡುತ್ತವೆ. ಕನ್ನಡ ನುಡಿಗಳು, ನುಡಿಗಟ್ಟುಗಳು, ಅಚಾರ ವಿಚಾರಗಳು, ಸಂಪ್ರದಾಯಗಳು, ನಂಬಿಕೆಗಳು, ಮೂಢ ನಂಬಿಕೆಗಳು ಮೊದಲಾದುವುಗಳೆಲ್ಲವೂ ಕನ್ನಡ ಭಾಷೆಯೊಳಗಡೆ ಸೇರಿಸಲ್ಪಟ್ಟಿವೆ. ಸೈನಿಕ ವಿವರಣೆ ನೀಡುವ ವಾಕ್ಯಗಳಲ್ಲಿ ಇತರೆ ಭಾಷೆಯ ಪದಕೋಶಗಳು ಹೆಚ್ಚಾಗಿ ಸೇರಿಸಲ್ಪಟ್ಟಿವೆ ಎಂಬುದು ಮೇಲ್ನೋಟಕ್ಕೆ ಸಾಬೀತಾಗುತ್ತದೆ. ಗಡಿನಾಡ ಪ್ರದೇಶಗಳ ಕೈಫಿಯತ್ತುಗಳಲ್ಲಿ ಇತರೆ ಭಾಷೆಗಳ ಪದಗಳು ಹೆಚ್ಚಾಗಿ ಸೇರಿಕೊಂಡಿವೆ. ಅಧಿಕಾರಿಗಳ ಹೆಸರುಗಳು, ಆಯುಧೋಪಕರಣಗಳು, ಕೋಟೆಗಳ ಉಸ್ತುವಾರಿಕೆ ಪದಗಳೆಲ್ಲವೂ ಇತರೆ ಭಾಷೆಯಿಂದ ಎರವಲಾಗಿವೆ. ಪೌರಾಣಿಕ ವಿಷಯಗಳು ದೈನಂದಿನ ಭಾಷೆಯ ಜೊತೆ ಜೊತೆಗೆ ಪದ ಪ್ರಯೋಗವಾಗಿ ಬಳಕೆಯಾಗಿರುವುದು ಕನ್ನಡ ಭಾಷೆಯ ಪೌರಾಣಿಕ ಹಿನ್ನೆಲೆಯನ್ನು ಸಹ ಸೂಚಿಸುತ್ತವೆ. ಕನ್ನಡ ನಾಡು ನಂದರ ಕಾಲದ ಪ್ರಾಕೃತದಿಂದ ಟಿಪ್ಪು ಸುಲ್ತಾನನ ಕಾಲದ ಪರ್ಶಿಯನ್ ಕನ್ನಡದವರೆಗೆ ಮೂಲ ಕನ್ನಡ ಅನೇಕ ಸ್ಥಿತ್ಯಂತರಗಳನ್ನು ಒಳಗೊಂಡಿದೆ ಕನ್ನಡ ಪದಪ್ರಯೋಗದಲ್ಲಿ ಉಂಟಾದ ಬದಲಾವಣೆಗಳನ್ನು ಇಲ್ಲಿ ಕಾಣ ಬಹುದು ಹಾಗಾಗಿ ಕನ್ನಡ ಭಾಷೆಯ ಬೆಳವಣಿಗೆಯನ್ನು ಅವಲೋಕಿಸಲೂ ಸಹ ಈ ಕೈಫಿಯತ್ತುಗಳು ಸಹಕಾರಿ ಎನ್ನಬಹುದು.

**ಕರ್ನಾಟಕ ಇತಿಹಾಸ ರಚನೆಗೆ ಕೈಫಿಯತ್ತುಗಳ ಮಹತ್ವ**

ಭಾರತದ ಇತಿಹಾಸ ರಚನಾಶಾಸ್ತ್ರದ ಇತಿಹಾಸದಲ್ಲಿ ಕರ್ನಲ್ ಮೆಕೆಂಝಿಗೆ ಒಂದು ಮಹತ್ವದ ಸ್ಥಾನವಿದೆ. ಆತನು ಸಂಗ್ರಹಿಸಿದ ಅಪಾರ ಸಂಖ್ಯೆಯ ಕೈಫಿಯತ್ತುಗಳು ಇತಿಹಾಸ ರಚನೆಗೆ ಅಮೂಲ್ಯವಾದ ಆಧಾರಗಳಾಗಿವೆ. ಈತ ಭಾರತದ ಅನೇಕ ಭಾಗಗಳಲ್ಲಿ ಸಂಚರಿಸಿ ಸ್ಥಳೀಯ ಇತಿಹಾಸಕ್ಕೆ ಸಂಬಂಧಿಸಿದ ದಾಖಲೆ, ವಸ್ತು ಇತ್ಯಾದಿಗಳನ್ನು ಸಂಗ್ರಹಿಸಲು ಪ್ರಾರಂಭಿಸಿದಾಗ ಇತಿಹಾಸ ರಚನೆಯ ಒಂದು ಹೊಸ ಯುಗ ಆರಂಭವಾಯಿತು. ಕರ್ನಲ್ ಮೆಕೆಂಝಿಯ ಆಕರಗಳ ಸಂಗ್ರಹ ಎಷ್ಟು ಉಪಯುಕ್ತವೋ ಅಷ್ಟೆ ಸಮಸ್ಯಾತ್ಮಕವಾದ ಕಾರ್ಯವಾಗಿತ್ತು. ಆಗ ಬಳಕೆಯಲ್ಲಿದ್ದ ರೆವಿನ್ಯೂ ಪರಿಭಾಷಿಕ ಶಬ್ದಗಳನ್ನು ವ್ಯಾಖ್ಯಾನಿಸುವುದು ಕಷ್ಟಕರವಾದರೂ ಕರ್ನಲ್ ಮೆಕೆಂಝಿ ಆ ಕಾರ್ಯವನ್ನು ಸಮರ್ಥವಾಗಿ ನಿಭಾಯಿಸಿದನು.

ಕ್ರಿ.ಶ. ೧೮೦೦ರ ಕಾಲ ಬದಲಾವಣೆಯ ಕಾಲಘಟ್ಟವಾಗಿದೆ. ಕರ್ನಾಟಕದಲ್ಲಿ ರಾಜ್ಯ, ಸಾಮ್ರಾಜ್ಯಗಳು ಅಳಿದು, ಪಾಳೆಪಟ್ಟುಗಳು ಹುಟ್ಟಿ ಆ ಎಲ್ಲಾ ಪಾಳೆಪಟ್ಟುಗಳೂ ಹೈದರಾಲಿ ಕಾಲಕ್ಕೆ ಮೈಸೂರು ಸಂಸ್ಥಾನದಲ್ಲಿ ವಿಲೀನಗೊಂಡಿದ್ದು ಒಂದು ಮಹತ್ವದ ಘಟ್ಟ. ಐರೋಪ್ಯರಿಗೆ ಮುಖ್ಯವಾಗಿ ಬ್ರಿಟಿಷರಿಗೆ ಸವಾಲಾಗಿ ಅದು ಅಂತಿಮವಾಗಿ ಟಿಪ್ಪುವಿನ ಮರಣಾನಂತರ ಮತ್ತೊಂದು ಹೊಸ ರಾಜಕೀಯ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದ ಕಾಲ. ಬ್ರಿಟಿಷರ ಆಡಳಿತಕ್ಕೆ ಒಳಗಾದ ಭಾರತದಲ್ಲಿನ ಪ್ರಾಚೀನ ನಿರ್ಮಿತಿಗಳು, ಬರಹಗಳು–ಪತ್ರಗಳು, ದಾಖಲೆಗಳು ಮುಂತಾದವು ಸಂರಕ್ಷಿಸಲ್ಪಟ್ಟವು. ಆ ಹೊತ್ತಿಗಾಗಲೇ ಭಾರತಕ್ಕೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಭಾರತೀಯ ಸಮಾಜದಲ್ಲಿ ಉಂಟಾಗಿತ್ತು. ೧೭೯೯ರವರೆಗೂ ಪಾಶ್ಚಾತ್ಯ ಸಂಸ್ಕೃತಿ ಸುಭದ್ರವಾದ ನೆಲೆ ಕಂಡಿರಲಿಲ್ಲ. ಆನಂತರದ ಕಾಲಮಾನದಲ್ಲಿ ನಿರಾತಂಕವಾಗಿ ಭಾರತದಲ್ಲಿ ಪಾಶ್ಚಾತ್ಯ ಸಂಸ್ಕೃತಿ ವ್ಯಾಪಕವಾಗಿ ಹರಡುತ್ತಾ ಹೋಗಿ ಅದರ ಪರಿಣಾಮವಾಗಿ ಇತಿಹಾಸ ರಚನಾಶಾಸ್ತ್ರ ಹಲವಾರು ಬದಲಾವಣೆಯನ್ನು ಕಂಡಿತು.[೨] ಮುಖ್ಯವಾಗಿ ಪ್ರಭುತ್ವ ಮತ್ತು ಸಮಾಜದ ಮಧ್ಯೆ ಇದ್ದ ಮಾಧ್ಯಮ ಆಡಳಿತ ಭಾಷೆಯ, ಶಾಸನಶಾಸ್ತ್ರ ರಚನಾ ವ್ಯವಸ್ಥೆ. ಭಾರತದ ಹಿಂದಿನ ವ್ಯವಸ್ಥೆ ಕ್ರಮೇಣ ಕಣ್ಮರೆಯಾಗುತ್ತಾ ಹೋಯಿತು. ಹಾಗೆಯೇ ತಾಳೇಗರಿಯ ಬಳಕೆ ಕೊನೆಗೊಂಡು ಕಾಗದದ ಬಳಕೆ ಬೆಳೆಯಿತು. ಆ ಕಾಲದ ಅಕ್ಷರಸ್ಥರು ಅಥವಾ ಬುದ್ಧಿವಂತರೆನಿಸಿಕೊಂಡವರು ಈ ಹೊಸ ವ್ಯವಸ್ಥೆಯನ್ನು ಸ್ವಾಗತಿಸಿ, ಬಹು ಬೇಗ ತಮ್ಮ ಮನೋಧರ್ಮವನ್ನು ಅದಕ್ಕನುಗುಣವಾಗಿ ಕುದುರಿಸಿಕೊಂಡರು. ಆಗಲೇ ಸುಮಾರು ೩೦೦ ವರ್ಷಗಳಷ್ಟು ಹಿಂದೆ ಆಧುನಿಕ ಯುಗಕ್ಕೆ ಕಾಲಿಟ್ಟಿದ್ದ ಯೂರೋಪಿಯನ್ನರು

ಹೊಸ ಹೊಸ ವ್ಯವಸ್ಥೆಗಳನ್ನು ಭಾರತದಲ್ಲಿ ಜಾರಿಗೆ ತಂದರು. ಅದರಲ್ಲಿ ಬಹಳ ಮುಖ್ಯವಾದದ್ದು ಕಾಗದದ ಬಳಕೆ. ಶಾಸನ ಮತ್ತು ಸಾಹಿತ್ಯ ರಚನೆಯು ಕಾರ್ಯ ಶಿಲೆ, ತಾಳೆಗರಿ, ತಾಮ್ರಪಟ, ಓಲೆಗರಿಗಳ ಮೇಲೆ ಬರೆಯುವ ಬದಲಿಗೆ ಕಾಗದದ ಮೇಲೆ ಆರಂಭವಾಯಿತು.[೩೩] ಮೊದಲ ಆ ಬರಹಗಳನ್ನು ಕನ್ನಡ ನಾಡಿನಲ್ಲಿ ಕರ್ನಲ್ ಮೆಕೆಂಜಿಯ ಕೈಫಿಯತ್ತುಗಳ ಮೂಲಕವಾಯಿತು.

ಈಗೆ ಸುಮಾರು ೪೦ ಸಾವಿರ ಮೈಲಿಗಳಷ್ಟು ದೂರ ಸಂಚರಿಸಿ ತಾನು ಕಂಡ ಗ್ರಾಮ, ಪ್ರದೇಶಗಳ ಬಗ್ಗೆ ಸ್ಥಳೀಯ ಜನರನ್ನು ಕೇಳಿ ಲಭ್ಯವಿರುವ ಮಾಹಿತಿಯನ್ನು ಸಂಗ್ರಹಿಸುತ್ತಾ ಬಂದನು.[೩೪] ಕೆಲವು ಲೇಖಕರು ಬರೆದಿರುವಂತೆ ಇವನು ಕೇಳಿ ತಿಳಿದುಕೊಂಡದ್ದು ಬರಿಯ ರಾಜಕೀಯ ಹಾಗೂ ಆಯಕಟ್ಟಿನ ಪ್ರದೇಶಗಳನ್ನು ಕುರಿತ ಮಾಹಿತಿ ಆಗಿರಲಿಲ್ಲ. ಅವನದು ಜೀವನದ ಸಮಗ್ರವಾದ ಮಾಹಿತಿ ನೀಡುವ ಅಂಶಗಳ ಅಧ್ಯಯನವಾಗಿದ್ದಿತು. ಈತ ಸಂಗ್ರಹಿಸಿದ ಐತಿಹಾಸಿಕ ಮಾಹಿತಿ ಗಾತ್ರದಲ್ಲಿ ಮಾತ್ರವಲ್ಲ ಮಹತ್ವದಲ್ಲೂ ಗಮನಾರ್ಹವಾದುದಾಗಿದ್ದಿತು. ಸಾಮಾಜಿಕ, ಧಾರ್ಮಿಕ, ಆರ್ಥಿಕ ಜೀವನಕ್ಕೆ ಸಂಬಂಧಿಸಿದ ಭಾರತೀಯ ಜನ ಜೀವನದ ಪೂರ್ಣ ಚಿತ್ರವನ್ನು ನೀಡುವಂತಹ ಆಧಾರಗಳು ಅವನ ಸಂಗ್ರಹದಲ್ಲಿದ್ದವು. ಕರ್ನಲ್ ಮೆಕೆಂಜಿಯ ಆಕರಗಳ ಸಂಗ್ರಹಗಳು ಅಂತರ್ ಶಿಸ್ತೀಯ ಅಧ್ಯಯನಕ್ಕೆ ಭದ್ರ ಬುನಾದಿಯನ್ನು ಹಾಕಿವೆ. ಇಲ್ಲಿನ ಹೊಸ ದೃಷ್ಟಿಕೋನದಿಂದ ಚರಿತ್ರೆ ರಚನೆ ಮಾಡುವ ವಿಧಾನ ಆರಂಭವಾಯಿತೆಂದು ಹೇಳಬಹುದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಚರಿತ್ರೆಯನ್ನು ಚರಿತ್ರೆಯಾಗಿ ನೋಡುವ ಪ್ರವೃತ್ತಿ ಪ್ರಾರಂಭವಾಗಲು ಕಾರಣವಾಯಿತು. ಧಾರ್ಮಿಕ ಸಂಗತಿಗಳು, ವಂಶಾವಳಿಗಳು, ಮಠ ಮಾನ್ಯಗಳ ದೇಗುಲಗಳ ಕಥೆಗಳನ್ನೆ ಆಧಾರವಾಗಿಸಿಕೊಂಡಿದ್ದ ಚರಿತ್ರಕಾರರಿಗೆ ಚರಿತ್ರೆಯ ಅಧ್ಯಯನಕ್ಕೆ ದಾರಿಯಾಯಿತು. ಶಾಸನಗಳು, ಪ್ರಾಚೀನ ಸಾಹಿತ್ಯ ಕೃತಿಗಳನ್ನೇ ಅವಲಂಬಿಸಿಕೊಂಡಿದ್ದ ಇತಿಹಾಸಕಾರರಿಗೆ ಹೊಸದಾದ ಹಾಗೂ ಹೆಚ್ಚು ವಿಶ್ವಾಸಾರ್ಹವಾದ ಆಧಾರ ದೊರಕಿದಂತಾಯಿತು. ಪುರಾಣ ಮತ್ತು ಇತಿಹಾಸವನ್ನು ಬೇರ್ಪಡಿಸಿ, ಐತಿಹಾಸಿಕ ಸತ್ಯವನ್ನು ಹೊರ ತೆಗೆಯುವ ಕಾರ್ಯ ಕೈಫಿಯತ್ತುಗಳ ಸಂಗ್ರಹ ಮತ್ತು ಅಧ್ಯಯನದಿಂದ ಆರಂಭವಾಯಿತೆಂದು ಹೇಳಬಹುದು.

ಕರ್ನಲ್ ಮೆಕೆಂಜಿಯು ಐತಿಹಾಸಿಕ ಆಧಾರಗಳನ್ನು ಸಂಗ್ರಹ ಮಾಡಿದ್ದ ಆಕರಗಳು ಆ ಸಂದರ್ಭದಲ್ಲಿಯೇ ಬೌದ್ಧಿಕ ಕ್ಷೇತ್ರದಲ್ಲಿ ಹಲವಾರು ಗಮನಾರ್ಹವಾದ ಬೆಳವಣಿಗೆಗೆ ಕಾರಣವಾಗಿದ್ದವು. ಆ ಕಾಲಘಟ್ಟದಲ್ಲಿ ಕಾಗದದ ಬಳಕೆ ಹೆಚ್ಚಾಗಿ ರೂಢಿಗೆ ಬಂದಿದ್ದರಿಂದ

ಬರೆಯುವುದು, ಓದುವುದು ಹೆಚ್ಚು ಸುಲಭವೂ, ವ್ಯಾಪಕವಾಗಿಯೂ ಬೆಳೆಯಿತು. ಹೀಗೆ ಹಸ್ತಪ್ರತಿಗಳು ಗುಡಿ ಮಠಗಳಲ್ಲಿ, ಕೆಲವೇ ಕೆಲವು ವ್ಯಕ್ತಿಗಳ ಕೈಯಲ್ಲಿ ಅಡಗಿ ಕುಳಿತಿದ್ದ ಜ್ಞಾನ ಭಂಡಾರವನ್ನು ಕರ್ನಲ್ ಮೆಕೆಂಝಿ ಹೊರಜಗತ್ತಿಗೆ ಪರಿಚಯಿಸಿದನು. ಕರ್ನಲ್ ಮೆಕೆಂಝಿ ಹೊಸ ಆಧಾರಗಳನ್ನು ಹುಡುಕಿ ಅದನ್ನು ಸಂಗ್ರಹಿಸಿದ್ದು ಮಾತ್ರವಲ್ಲ, ಅದನ್ನು ಸಹಾಯಕರಾದ ಕಾವಲಿ ವೆಂಕಟ ಬೋರಯ್ಯ ಮೊದಲಾದವರ ಕೈಯಲ್ಲಿ ಬರೆಸಿದ್ದು ವಿನೂತನ ಪದ್ದತಿಯಾಗಿದ್ದಿತು.[೩೫] ಕರ್ನಲ್ ಮೆಕೆಂಝಿ ಸ್ಥಳೀಯ ಇತಿಹಾಸ ರಚನೆಗೆ ಪ್ರೇರಣೆ ನೀಡಿ, ಭಾರತದ ಇತಿಹಾಸ ರಚನಾಶಾಸ್ತ್ರದ ಬೆಳವಣಿಗೆಗೆ ಕಾರಣವಾಗಿದ್ದು ಮಾತ್ರವಲ್ಲ, ಒಂದು ರೀತಿಯಲ್ಲಿ ಕೆಳಸ್ತರದ ಇತಿಹಾಸ ರಚನೆಗೂ ಪ್ರೇರಣೆ ನೀಡಿದನೆಂದು ಹೇಳಬಹುದು. ಕರ್ನಲ್ ಮೆಕೆಂಝಿ ಇತಿಹಾಸವನ್ನು ಸೃಷ್ಟಿಸಿದಂತೆಯೇ ಇತಿಹಾಸಕಾರರನ್ನು ಸೃಷ್ಟಿಸಿದನೆಂಬುದನ್ನು ಸಂಶೋಧನೆಯಿಂದ ನಿರೂಪಿಸಬಹುದು. ಅಲ್ಲದೆ ತನ್ನ ಸಹಾಯಕರಾದ ಕಾವಲಿ ವೆಂಕಟ ಬೋರಯ್ಯ ಮತ್ತು ವೆಂಕಟಲಕ್ಷ್ಮಯ್ಯ, ವೆಂಕಟನಾರಾಯಣ ಮುಂತಾದವರನ್ನು ಕನ್ನಡ ನಾಡಿನ ಪ್ರಮುಖ ವಿದ್ವಾಂಸರೆಂದು ತೀರ್ಮಾನಿಸಬಹುದು.[೩೬] ಅವರು ನವಯುಗದ ಇತಿಹಾಸ ರಚನೆಗೆ ಸಹಾಯಕರಾಗಿದ್ದು ಮಾತ್ರವಲ್ಲ. ತಾವೇ ಕೈಫಿಯತ್ತುಗಳನ್ನು ರಚಿಸುವಷ್ಟು ಅನುಭವಿ ಲೇಖಕರಾಗಿದ್ದರು ಎಂದು ಒಪ್ಪಿಕೊಳ್ಳಬಹುದು. ಕರ್ನಲ್ ಮೆಕೆಂಝಿ ಕೈಫಿಯತ್ತುಗಳು ಮತ್ತು ಆಕರಗಳ ಸಂಗ್ರಹಕ್ಕಾಗಿ ಸ್ಥಳೀಯ ಪಂಡಿತರ ಕಚೇರಿಯನ್ನು ಅವನು ಸ್ಥಾಪಿಸಿದ್ದು, ಕನ್ನಡ ನಾಡಿಗೆ ನೀಡಿದ ಗಮನಾರ್ಹವಾದ ಮಹತ್ವದ ಕೊಡುಗೆಯೆಂದು ಹೇಳಬಹುದು. ಇತಿಹಾಸದೊಂದಿಗೆ ಕನ್ನಡ ಸಾಹಿತ್ಯದ ಆಧಾರಗಳನ್ನೂ ಕರ್ನಲ್ ಮೆಕೆಂಝಿ ಸಂಗ್ರಹಿಸಿದ. ಮೈಸೂರಿನಲ್ಲಿ ಹೆಚ್ಚು ಪ್ರಚಾರ, ಪ್ರೋತ್ಸಾಹವಿಲ್ಲದೆ ಸೊರಗುತ್ತಿದ್ದ ದೇವಚಂದ್ರರವರ ಜಾವಳಿ ಕತೆಯ ರಚನೆಗೂ ಈತ ಸಹಾಯ ಮಾಡಿದುದು[೩೭] ಕನ್ನಡ ನಾಡಿನ ಚರಿತ್ರೆಯ ರಚನೆಗೆ ಸಹಾಯಕವಾಗಿದೆ ಎಂದು ಹೇಳಬಹುದು.

ಕರ್ನಲ್ ಮೆಕೆಂಝಿ ಐತಿಹಾಸಿಕ ವಸ್ತುಗಳನ್ನು ಸಂಗ್ರಹಿಸಿದ್ದು ಮಾತ್ರವಲ್ಲದೆ, ತನ್ನ ದಾಖಲೆಗಳ ಸತ್ಯಾಸತ್ಯತೆಯನ್ನು ಓರೆಗಲ್ಲಿಗೆ ಹಾಕಿ ನೋಡುವ ಪ್ರಯತ್ನವನ್ನೂ ಮಾಡಿದನು. ಇಷ್ಟು ಮಹತ್ವದ ಕಾರ್ಯವನ್ನು ಸಾಧಿಸಿದನು. ಇನ್ನೂ ಹಲವಾರು ದಾಖಲೆಗಳನ್ನು ಸಂಗ್ರಹಿಸಲಾಗಲಿಲ್ಲ ಎಂಬ ಕೊರಗನ್ನು ವ್ಯಕ್ತಪಡಿಸಿದನು.[೩೮] ಕರ್ನಲ್ ಮೆಕೆಂಝಿ ಅವರ ಸಂಗ್ರಹದ ದಾಖಲೆಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸುವುದು ಇಂದಿನ ಸಂಶೋಧಕರು, ಚರಿತ್ರಕಾರರು, ವಿದ್ವಾಂಸರು ಮಾಡಬೇಕಾದ ಮಹತ್ವದ ಕಾರ್ಯವಾಗಿದೆ.

ಇತ್ತೀಚಿನ ದಿನಗಳಲ್ಲಿ ಇತಿಹಾಸ ರಚನೆಯಲ್ಲಿ ಕಂಡುಬರುತ್ತಿರುವ ಒಂದು ಮುಖ್ಯ ಬೆಳವಣಿಗೆಯೆಂದರೆ ಕೈಫಿಯತ್ತುಗಳ ಬಳಕೆಯೆಂದು ಹೇಳಬಹುದು. ಶಾಸನಗಳಿಗೂ, ಸಾಹಿತ್ಯಗಳಿಗೂ ಇರುವ ಇತಿಮಿತಿಗಳನ್ನು ಇತಿಹಾಸಕಾರರು ಅರಿತಿದ್ದಾರೆ. ಸೀಮಿತವಾಗಿದ್ದ ವಿಷಯಗಳಲ್ಲಿನ ಕೊರತೆಯನ್ನು ಕೈಫಿಯತ್ತುಗಳು, ಬಖೈರು, ಕಡತಗಳು ನಿವಾರಿಸಿವೆ ಎಂದು ಹೇಳಬಹುದು. ಬಖೈರುಗಳು ಪ್ರಮುಖ ವ್ಯಕ್ತಿಗಳ ವ್ಯಕ್ತಿತ್ವವನ್ನು ನಿರೂಪಿಸಿದರೆ, ಕಡತಗಳು ಅಧಿಕೃತ ಪ್ರಭುತ್ವದ ಸುತ್ತೋಲೆ ಅಥವಾ ಆಡಳಿತಾತ್ಮಕ ವಿಷಯಗಳಿಗೆ ಸೀಮಿತಗೊಂಡಿವೆ. ಆದರೆ ಕೈಫಿಯತ್ತುಗಳು ಸಾಮಾಜಿಕ, ಸ್ಥಳಪುರಾಣ, ರಾಜಕೀಯ, ಭೌಗೋಳಿಕ, ಸಂಪ್ರದಾಯ, ಜಾತಿ, ಮತ; ಕೋಟೆ, ಕೊತ್ತಲ, ಪ್ರಾಣಿ, ಪಕ್ಷಿ–ಹೀಗೆ ಇನ್ನೂ ಅನೇಕ ಪರಿಸರಗಳ ವಿವರಗಳನ್ನು ಒಳಗೊಂಡಿವೆ. ಬೇರೆ ಆಕರಗಳು ಉಪೇಕ್ಷಿಸಿದ ಅಂಶಗಳನ್ನು ಈ ಕೈಫಿಯತ್ತುಗಳು ಒಳಗೊಂಡಿರುವುದು. ಅವುಗಳ ಉಲ್ಲೇಖಿಸಿರುವ ಕಾಲ, ಬರೆದವರ ಹೆಸರು, ವಯಸ್ಸು, ವೃತ್ತಿ ಹಾಗೂ ಅವರ ರುಜು ಈ ಎಲ್ಲ ಅಂಶಗಳನ್ನು ಗಮನಿಸಬಹುದು. ಶಾಸನ, ಸಾಹಿತ್ಯ ಒಳಗೊಳ್ಳದ ಅನೇಕ ಸಂಗತಿಗಳು, ರಾಜವಂಶಗಳ ಬಗ್ಗೆ ಇರುವ ಐತಿಹ್ಯ/ದಂತಕಥೆಗಳು ತನ್ನದೇ ಆದ ಶೈಲಿಯಲ್ಲಿ ಹೆಣೆದುಕೊಂಡ ಬರಹಗಳು ಇವುಗಳಾಗಿವೆ. ವಿಜಯನಗರ ಕಾಲದ ಆಳ್ವಿಕೆಯಲ್ಲಿ ಅಸ್ತಿತ್ವಕ್ಕೆ ಬಂದ ಪಾಳೆಯಗಾರರ, ನಾಯಕರ, ಅಮರನಾಯಕರ ಒಟ್ಟಾರೆ ಹೇಳಬೇಕೆಂದರೆ ಊಳಿಗಮಾನ್ಯ ವ್ಯವಸ್ಥೆಯ ಹಾಗೂ ಸಣ್ಣಪುಟ್ಟ ಪಾಳೇಗಾರರ ಉಗಮ, ಆಳ್ವಿಕೆ, ದುರಂತಗಳ ಅಂತ್ಯದ ಬಗ್ಗೆ ಈ ಕೈಫಿಯತ್ತುಗಳಲ್ಲಿ ಇರುವಷ್ಟು ವಿವರಗಳು ಮತ್ತೆ ಎಲ್ಲೂ ಕಂಡುಬರುವುದಿಲ್ಲ.[೩೯] ರಾಜರ, ಸಾಮ್ರಾಟರ ಅಥವಾ ರಾಜ್ಯ, ಸಾಮ್ರಾಜ್ಯಗಳ ರಾಜಕೀಯ ಇತಿಹಾಸ ರಚನೆಗೆ ಕೊಟ್ಟಿರುವಷ್ಟು ಮಾನ್ಯತೆಯನ್ನು ಪಾಳೆಪಟ್ಟುಗಳಿಗೆ ಮತ್ತು ಸ್ಥಳೀಯ ದೊರೆಗಳ ಅಧ್ಯಯನದ ಬಗ್ಗೆ ಇತಿಹಾಸಕಾರರು ಹೆಚ್ಚು ಗಮನ ನೀಡದೆ ನಿರ್ಲಕ್ಷಿಸಿದ್ದಾರೆ. ಈ ನಿರ್ಲಕ್ಷ್ಯಕ್ಕೆ ಒಳಗಾದ ಸಣ್ಣಪುಟ್ಟ, ಸ್ಥಳೀಯ ಪಾಳೆಪಟ್ಟುಗಳ ಬಗ್ಗೆ ವಿಷಯಗಳನ್ನು ಮೇಳೈಸಿಕೊಂಡಿರುವ ಈ ಕೈಫಿಯತ್ತುಗಳು ಸ್ಥಾನಿಕ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಕರ್ನಲ್ ಮೆಕೆಂಝಿಯ ಕೈಫಿಯತ್ತುಗಳು ಮತ್ತು ಇತಿಹಾಸ ಆಕರ ಸಂಗ್ರಹಗಳು ಬಹು ಮುಖ್ಯ ಪಾತ್ರ ವಹಿಸುತ್ತವೆ.[೪೦] ಪಾಶ್ಚಾತ್ಯ ವಿದ್ವಾಂಸರು ಅಥವಾ ಸ್ಥಳೀಯ ಸಂಪ್ರದಾಯಸ್ಥ ವರ್ಗದ ವಿದ್ವಾಂಸರೆನಿಸಿಕೊಂಡಿರುವವರು ಬರೆದರೆ ಮಾತ್ರ ಅಧಿಕೃತ ಬರಹ ಎಂದು ಈವರೆಗೂ ನಂಬಲಾಗಿತ್ತು. ಇಂದು ಇತಿಹಾಸ ರಚನಾ ವಿಧಾನದ ದೃಷ್ಟಿಕೋನ ಬದಲಾಗಲು ಕರ್ನಲ್ ಮೆಕೆಂಝಿಯ ಇತಿಹಾಸ ಆಕರಗಳ ಸಂಗ್ರಹವೇ ಕಾರಣ ಎಂದು ಹೇಳಬಹುದು.

ಐರೋಪ್ಯರ ಪ್ರವೇಶಾನಂತರ ಭಾರತೀಯರಲ್ಲಿ ಹೊಸ ಇತಿಹಾಸದ ಪ್ರಜ್ಞೆ ಮೂಡಿ ಬಂತು. ಆಗ ಸುಲ್ತಾನರಿಗಿಂತ ಮೊಗಲ್ ಕಾಲದ ಪರ್ಷಿಯನ್ ದಾಖಲೆಗಳು ಇತಿಹಾಸವಾಗಿ ಪರಿಗಣಿತವಾದವು. ಹಾಗೆಯೇ ಮರಾಠಿ ಬರಹಗಳು ಇತಿಹಾಸಕ್ಕೆ ಆಕರಗಳಾದವು. ಕನ್ನಡ ನಾಡಿನಲ್ಲಿ ನಮಗೆ ಲಭ್ಯವಾದ ಇಂತಹ ಐತಿಹಾಸಿಕ ಮೌಲ್ಯದ ಸಾಮಾಜಿಕ ದಾಖಲೆಗಳೆಂದರೆ ನಲ್ಲಪ್ಪನ ಹೈದರ್ ನಾಮೆ,[೪೧] ರಾಮರಾಯನ ಬಖೈರು, ಇವನ್ನು ಬಿಟ್ಟರೆ ಕರ್ನಲ್ ಮೆಕೆಂಝಿ ಕಾಲಕ್ಕೆ ಆತ ಖುದ್ದಾಗಿ ಗ್ರಾಮೀಣ ಪ್ರಬುದ್ಧ ಜನರಿಂದ ಬರೆಸಿಕೊಂಡ ವೈವಿಧ್ಯದ ಪತ್ರಾವಳಿಗಳು, 'ಕೈಫಿಯತ್'ಗಳೆಂದೇ ದಾಖಲಿಸಬಹುದು.

ಭಾರತದ ಪ್ರಾಚೀನ ಐತಿಹ್ಯ, ಚರಿತ್ರೆಯನ್ನು ಪಾಶ್ಚಾತ್ಯರಿಗೆ ಪರಿಚಯಿಸಿದ ಕೀರ್ತಿ ಕರ್ನಲ್ ಮೆಕೆಂಝಿಗೆ ಸಲ್ಲುತ್ತದೆ. ಇಂತಹ ಒಬ್ಬ ಅಪರೂಪದ ಪ್ರಾಚ್ಯ ಸಂಶೋಧಕ, ಸಂಗ್ರಹಕಾರನನ್ನು ನೆನಪಿನಲ್ಲಿಡುವುದು ಹಾಗೂ ಆತ ಪ್ರಾರಂಭಿಸಿದ ಕಾರ್ಯವನ್ನು ವಿದ್ಯುಕ್ತವಾಗಿ ಮುಂದುವರಿಸಿಕೊಂಡು ಹೋಗುವುದು ಸಂಶೋಧಕರ, ಚರಿತ್ರಕಾರರು, ವಿದ್ವಾಂಸರ ಆದ್ಯ ಕರ್ತವ್ಯವಾಗಿದೆ.

ಯೂರೋಪಿಯನ್ ಕಾಗದ, ಹಾಗೂ ಬಿಳಿಯ ಬಟ್ಟೆಯ ಮೇಲೆ ಅಳಿಸಲಾಗದ ಶಾಯಿಯಿಂದ ಬರೆಯುವ ಹೊಸ ಪದ್ಧತಿಗೆ ನಾಂದಿ ಹಾಕಿದವನು ಕರ್ನಲ್ ಮೆಕೆಂಝಿ. ಇಂತಹ ಸ್ಥಿತ್ಯಂತರದಲ್ಲಿ ಚರಿತ್ರೆ ಕಟ್ಟುವ ಕಾಯಕವನ್ನು ಕೆಲ ಸಂಪ್ರದಾಯಸ್ಥ, ಅನಕ್ಷರಸ್ಥ, ಬುದ್ಧಿವಂತ, ಜಾತಿ-ಜನಾಂಗದವರು, ಸ್ಥಳ-ವ್ಯಕ್ತಿಗಳ ಚರಿತ್ರೆಯನ್ನು ತಮ್ಮದೇ ಆದ ಜಾನಪದ ಶೈಲಿಯಲ್ಲಿ ನಿರೂಪಿಸುತ್ತಿದ್ದರು. ಗದ್ಯ, ಪದ್ಯ, ಹಾಡುಹಬ್ಬ, ಪ್ರತೀತಿ, ದಂತಕಥೆ, ಐತಿಹ್ಯ, ಲಾವಣಿ, ಹೆಳವರ ಪದ, ದೊಂಬಿದಾಸರ ಪದಗಳು, ಸಾಂಗತ್ಯ, ಸಂವಾದ, ಕೋಲಾಟದ ಪದ, ಸೋಬಾನೆ ಪದ, ಕೈಫಿಯತ್ತು, ಕಡತ, ಬಖೈರು, ನಾಮೆಗಳು ಇವೇ ಮುಂತಾದ ಜಾನಪದ ರೂಪಕಗಳು ತಮ್ಮದೇ ಆದ ಗ್ರಾಮೀಣ ಸೊಗಡು, ಭಾಷಾ ಶೈಲಿಯಲ್ಲಿ ರಚಿಸಲ್ಪಟ್ಟವು. ಮೌಖಿಕ ಇತಿಹಾಸ, ಮೌಖಿಕ ಪರಂಪರೆಗೆ ಇಂದು ಮಾನ್ಯತೆ ಕೊಡುವ ಕಾಲ. ಪ್ರಸ್ತುತ ಕಾಲದಲ್ಲಿ ಆ ಚಾರಿತ್ರಿಕ ದಾಖಲೆಗಳ ಅಧ್ಯಯನದ ದೃಷ್ಟಿಕೋನ ಮತ್ತು ಸಂಶೋಧನೆ ರಾಜಕೀಯ ಇತಿಹಾಸವನ್ನು ಸ್ವಲ್ಪಮಟ್ಟಿಗೆ ಸರಿಸಿ, ಸಾಮಾಜಿಕ ಮತ್ತು ಜನರ ಸ್ಥಿತಿಗತಿಗಳ ಬಗ್ಗೆ ಇತಿಹಾಸ ಅಧ್ಯಯನ ಆರಂಭವಾಗಿರುವ ಇಂದು, ಕೆಳಸ್ತರದ ಸಾಮಾನ್ಯ ಜನರ ಅಭಿವ್ಯಕ್ತಿಗೆ ಮಾನ್ಯತೆ ಕೊಡುವುದೇ ಈ ಮೌಖಿಕ ಇತಿಹಾಸವೆಂದು ಕರೆಯಬಹುದಾಗಿದೆ. ಇಂತಹ ಜನಸಾಮಾನ್ಯರ ಆಡುಭಾಷೆಯ, ತಮ್ಮದೇ ಆದ ಶೈಲಿಯಲ್ಲಿ ರಚಿಸಲ್ಪಟ್ಟ ಘಟನಾವಳಿಗಳು ಅನಂತರದ ಐತಿಹಾಸಿಕ

ಸಾಮಾಗ್ರಿಗಳಿಗೆ ನೆರವಾಗುವುದರಲ್ಲಿ ಸಂದೇಹವಿಲ್ಲ.[೬೨] ಇಂತಹ ಭಾರತೀಯ ಸಮಾಜದ ಪರಂಪರೆಯನ್ನು ಕಂಡ ಕರ್ನಲ್ ಮೆಕೆಂಝಿ ಆ ಎಲ್ಲವನ್ನೂ ಲಿಖಿತ ರೂಪದಲ್ಲಿ ದಾಖಲಿಸುತ್ತಾ ಹೋಗುತ್ತಾನೆ. ೧೮೦೦-೧೮೨೧ರ ಅವಧಿಯಲ್ಲಿ ಬರೆಸಿ, ಸಂಪಾದಿಸಿದ ಲಿಖಿತ ರೂಪದ ನವೀನ ಆಕರಗಳೇ ಈ ಕೈಫಿಯತ್ತುಗಳು. ಇವು ಕನ್ನಡ ನಾಡಿನ ಮಹತ್ವದ ಕೊಡುಗೆಗಳಾಗಿವೆ.

**ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ವಿಜಯನಗರ ಸಾಮ್ರಾಜ್ಯದ ದಾಖಲೆಗಳು**

ಕರ್ನಲ್ ಮೆಕೆಂಝಿ ಸಂಗ್ರಹಿತ ಕೈಫಿಯತ್ತುಗಳಲ್ಲಿ ವಿಜಯನಗರದ ಬಗೆಗಿನ ಆಶಯಗಳನ್ನು ಹೀಗೆ ವಿಶ್ಲೇಷಿಸಲಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಅರಸರ ಆಳ್ವಿಕೆಯ ಕಾಲವು ಸುವರ್ಣ ಯುಗವೆಂದೇ ಉಲ್ಲೇಖವಾಗಿದೆ. ಈ ಸಾಮಾಜ್ಯ ಕ್ರಿಶ ೧೩೩೬ರಲ್ಲಿ ಸ್ಥಾಪಿಸಲ್ಪಟ್ಟಿತು. ಕ್ರಿಶ ೧೫೬೫ ರಲ್ಲಿ ಜರುಗಿದ ತಾಳಿಕೋಟೆ ಯುದ್ಧದವರೆಗೆ ಎಲ್ಲಾ ಕ್ಷೇತ್ರಗಳಲ್ಲಿ ಅಂದರೆ ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿತ್ತು. ಕ್ರಿಶ ೧೫೬೫ ರಿಂದ ೧೭ನೇ ಶತಮಾನದ ಆರಂಭದ ಕಾಲದವರೆಗೆ ಈ ಸಾಮ್ರಾಜ್ಯ ಅಸ್ತಿತ್ವನ್ನು ಹೊಂದಿದ್ದರೂ ಈ ಕಾಲವನ್ನು ಅವನತಿಯ ಕಾಲವೆಂದು ಇತಿಹಾಸಕಾರರು ಗುರುತಿಸಿದ್ದಾರೆ. ವಿಜಯನಗರದ ಆಳ್ವಿಕೆಯ ಅವಧಿಯು ಕನ್ನಡ ನಾಡಿನ ಇತಿಹಾಸದಲ್ಲಿ ಅಷ್ಟೇ ಅಲ್ಲದೇ ಇಡೀ ದಕ್ಷಿಣ ಭಾರತದ ಇತಿಹಾಸದ ಪುಟಗಳಲ್ಲಿಯೇ ಬಹಳ ಮಹತ್ವದ್ದು. ಕರ್ನಲ್ ಮೆಕೆಂಝಿ ಸಂಗ್ರಹಿತ ಕೈಫಿಯತ್ತುಗಳಲ್ಲಿ ವಿಜಯನಗರದ ರಾಜಕೀಯ ಚರಿತ್ರೆಯಲ್ಲಿ ಹಲವಾರು ಚಕ್ರವರ್ತಿಗಳು, ಮಂತ್ರಿಗಳು, ದಂಡನಾಯಕರು, ಅಮರನಾಯಕರು ಮತ್ತು ಸ್ಥಳೀಯ ಪ್ರಭುಗಳು ಆಳ್ವಿಕೆ ನಡೆಸಿದ ಸೂಚನೆಗಳು ದೊರಕುತ್ತವೆ. ಕ್ರಿ.ಶ ೧೩೩೬ರಲ್ಲಿ ವಿಜಯನಗರ ಸಾಮಾಜ್ಯದ ಸ್ಥಾಪನೆ ಭಾರತದ ಇತಿಹಾಸದಲ್ಲಿಯೇ ಮಹತ್ವಪೂರ್ಣ ಹಾಗೂ ಆ ಸಂದರ್ಭದ ಇತಿಹಾಸದ ಘಟನೆಗಳನ್ನು ವಿಶ್ಲೇಷಿಸಿದ್ದಾರೆ. ಅತ್ಯಂತ ಔಚಿತ್ಯಪೂರ್ಣವಾದ ಘಟನೆ. ಹೊಯ್ಸಳ ಆಳ್ವಿಕೆಯ ಅಂತಿಮ ಘಟ್ಟ ಮತ್ತು ದಕ್ಷಿಣ ಭಾರತದ ಮೇಲೆ ನಿರಂತರವಾಗಿ ಸಾಗಿದ್ದ ಮಹಮ್ಮದೀಯರ ಆಕ್ರಮಣ ಎಂಬ ಈ ಎರಡು ಐತಿಹಾಸಿಕ ಕಾಲ ಕರ್ನಾಟಕದ ಇತಿಹಾಸದಲ್ಲಿ ಒಂದು ಹೊಸ ಮನ್ವಂತರಕಾಲ. ದೆಹಲಿಯ ಸುಲ್ತಾನನಾದ ಅಲ್ಲಾವುದ್ದೀನ್ ಖಿಲ್ಜಿಯಿಂದ ಪ್ರಾರಂಭವಾದ ದಕ್ಷಿಣ ಭಾರತದ ಮೇಲಿನ

ದಂಡೆಯಾತ್ರೆಗಳ ಮೂಲಕ ರಾಜಕೀಯ ಪರಿಸ್ಥಿತಿಯಲ್ಲಿ ಅರಾಜಕತೆಯನ್ನು ಸೃಷ್ಟಿ ಮಾಡಿತು. ಸಂಗಮ ಸಹೋದರರೆಂದು ಎಲ್ಲರೂ ಒಪ್ಪಿದರೂ ಅವರ ಮೂಲಸ್ಥಳ ಮತ್ತು ಪೂರ್ವಸಂಬಂಧದ ಬಗೆ ಕುರಿತಾಗಿ ಭಿನ್ನಾಭಿಪ್ರಾಯಗಳಿಗೆ. ಅವರ ಮೂಲದ ಬಗ್ಗೆ ಎರಡು ಮುಖ್ಯವಾದವಿದೆ ತೆಲುಗು ಅಥವಾ ಓರಂಗಲ್ ಮೂಲವಾದ ಮತ್ತು ಕನ್ನಡ ಇಲ್ಲವೆ ಹೊಯ್ಸಳ ಮೂಲದ ವಾದ. ತೆಲುಗು ಮೂಲದ ಪ್ರತಿಪಾದಕರಿಗೆ ಮುಸ್ಲಿಂ ಇತಿಹಾಸಕಾರರ ಬರಹಗಳೇ ಮುಖ್ಯ ಆಧಾರ. ಆದರೆ ಸತ್ಯಸಂಗತಿಯೇನೆಂದರೆ ಬೇರೆ ಬೇರೆ ಮುಸ್ಲಿಂ ಇತಿಹಾಸಕಾರರು ಸಂಗಮ ಸಹೋದರರ ಮೂಲದ ಬಗ್ಗೆ ವಿರೋಧಾಭಾಸದ ಹೇಳಿಕೆಗಳನ್ನು ನೀಡಿದ್ದಾರೆ. ಈ ವಾದ ಪ್ರಾಂತೀಯ ಅಭಿಮಾನದಿಂದ ಪ್ರೇರಿತವಾದುದರಿಂದ ದೋಷಪೂರ್ಣವಾಗಿದೆ. ಸಂಗಮ ಪುತ್ರನಾದ ಹರಿಹರ ಮೂರನೇ ಬಲ್ಲಾಳನ ಅಧಿಕಾರಿಗಳಲ್ಲೊಬ್ಬನಾಗಿದ್ದ. ಕಾಲಕ್ರಮೇಣ ಮಹಾಮಂಡಲೇಶ್ವರ ಪದವಿ ಪಡೆದ. ಶಾಸನವೊಂದರ ಪ್ರಕಾರ ಮೂರನೇ ಬಲ್ಲಾಳನ ಸಹೋದರಳಿಯ ಬಲ್ಲಪ್ಪ ದಂಡನಾಯಕ ವಿಜಯನಗರ ಸಾಮ್ರಾಜ್ಯ ಸ್ಥಾಪಕನಾದ ಹರಿಹರನ ಮಗಳನ್ನು ವರಿಸಿದನೆಂಬ ಮಾಹಿತಿ ದೊರೆತಿದೆ. ಇದು ಹೊಯ್ಸಳ ಮತ್ತು ವಿಜಯನಗರದೊಂದಿಗೆ ಇದ್ದ ವೈವಾಹಿಕ ಸಂಬಂಧವನ್ನು ಸೂಚಿಸುತ್ತದೆ. ವಿಜಯನಗರ ರಾಜರೆಲ್ಲರ ಬಿರುದುಗಳು ಕನ್ನಡ ಭಾಷೆಯಲ್ಲಿಯೇ ಇದ್ದು, ಅವು ಇತರ ಭಾಷೆಯ ಶಾಸನಗಳಲ್ಲೂ ಉಲ್ಲೇಖಿತಗೊಂಡಿದೆ. ಅವರಿಗೆ ಕರ್ನಾಟಕದ ದೇವಾಲಯಗಳ ಬಗ್ಗೆ ವಿಶೇಷ ಆಸಕ್ತಿಯಿತ್ತು. ಶಾಸನವೊಂದು ೨ನೇ ಹರಿಹರನನ್ನು ಆಂಧ್ರರಾಜ ಮದಗಜಗಳಿಗೆ ಸಿಂಹಪ್ರಾಯನೆಂದು ಕರೆದಿದೆ. ಇದು ತೆಲುಗು ವಿರೋಧಿ ನಿಲುವಲ್ಲದೆ ಬೇರೇನು? ತೆಲುಗು ಬರೆಹಗಾರರಾದ ವಲ್ಲಬಾಚಾರ್ಯ ಮತ್ತು ಶ್ರೀನಾಥರೇ ಸಂಗಮ ಅರಸರನ್ನು ಕರ್ನಾಟಕ ಕ್ಷಿತಿನಾಥ ಎಂದು ಕರೆದಿದ್ದಾರೆ. ಒಟ್ಟಿನಲ್ಲಿ ತೆಲುಗು ಮೂಲದ ವಾದ ಸಮರ್ಥನೀಯವಲ್ಲ. ಸಾಮ್ಯಾಜ್ಯದ ಸ್ಥಾಪಕರು ಹೊಯ್ಸಳ ರಾಜ್ಯಕ್ಕೆ ಸೇರಿದವರೆಂಬುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಹೊಯ್ಸಳ ರಾಜ್ಯ ಅವಸಾನ ಕಾಲದಲ್ಲಿ ಸಂಗಮನ ಮಕ್ಕಳಾದ ಹರಿಹರ, ಬುಕ್ಕ, ಕಂಪಣ, ಮಾರಪ ಮತ್ತು ಮುದ್ದಪರು ೧೩೩೬ ರಲ್ಲಿ ಏಪ್ರಿಲ್ ೧೮ ರಂದು ಸಾಮ್ರಾಜ್ಯವನ್ನು ಸ್ಥಾಪಿಸಿ ವಿಜಯನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಈ ಎಲ್ಲಾ ಮಾಹಿತಿಗಳೂ ಕರ್ನಲ್ ಮೆಕೆಂಝಿ ಅವರು ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಈ ರೀತಿ ತೆರೆದುಕೊಳ್ಳುತ್ತವೆ.

ವಿಜಯನಗರ ತುಂಗಭದ್ರ ನದಿಯ ದಕ್ಷಿಣ ತೀರದಲ್ಲಿದೆ. ಅದಕ್ಕೂ ಪೂರ್ವದಲ್ಲಿ ನದಿಯ ಉತ್ತರ ದಡದಲ್ಲಿ ಆನೆಗೊಂದಿಯೆಂಬ ಪ್ರಾಚೀನ ಪಟ್ಟಣವಿತ್ತು. ಅದು ಮುಂದೆ

ರಾಜಧಾನಿಯ ಉಪನಗರವಾಯಿತು. ಐತಿಹ್ಯಗಳ ಪ್ರಕಾರ ರಾಮಾಯಣದಲ್ಲಿ ವರ್ಣಿಸಲಾದ ಪಂಪಾ ಸರೋವರ ಮತ್ತು ವಾನರ ರಾಜನಾದ ವಾಲಿಯ ರಾಜಧಾನಿ ಕಿಷ್ಕಿಂಧೆಯೂ ಇದೇ ಪ್ರದೇಶದಲ್ಲಿದ್ದವು. ಏಳನೇ ಶತಮಾನದ ಚಾಲುಕ್ಯರ ತಾಮ್ರಶಾಸನದಲ್ಲಿ ಈ ಸ್ಥಳವನ್ನು ಪಂಪಾಕ್ಷೇತ್ರವೆಂದು ಕರೆದಿರುವ ಬಗ್ಗೆ ಉಲ್ಲೇಖವಿದೆ. ಈ ಸ್ಥಳದ ಅಧಿಷ್ಠಾನ ದೇವರು ಶ್ರೀ ವಿರೂಪಾಕ್ಷ. ಹೀಗೆ ಈ ಮಹಾನಗರ ಪೌರಾಣಿಕ, ಧಾರ್ಮಿಕ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿತ್ತು.

ಕ್ರಿ.ಶ. ೧೩೩೬ ರಲ್ಲಿ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯ ಕೆಲವು ಖಚಿತ ಉದ್ದೇಶಗಳನ್ನು ತಳೆದಿತ್ತು. ಪರಧರ್ಮೀಯರು ಸ್ವರಾಜ್ಯ, ಸ್ವಧರ್ಮಗಳಿಗೆ ಗಂಡಾಂತರವನ್ನುಂಟು ಮಾಡಿದ ಸಂದರ್ಭದಲ್ಲಿ ಸ್ವಶಕ್ತಿಯಿಂದ ಹಿಂದೂಧರ್ಮ, ಬಲಿಷ್ಠವಾಗಿತ್ತು. ಇದಕ್ಕಾಗಿ ಎಲ್ಲ ಧರ್ಮ–ಪಂಥಗಳನ್ನು ಪೋಷಿಸುವ, ಪರಂಪರಾಗತ ವಿದ್ಯೆ, ಜ್ಞಾನಶಾಖೆಗಳನ್ನು ಊರ್ಜಿತಗೊಳಿಸುವ, ಸ್ವಭಾಷೆ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ನೀಡುವ ಆಶಯಗಳನ್ನು ವಿಜಯ ನಗರದ ಅರಸರು ಹೊಂದಿದ್ದರು.

ವಿಜಯನಗರ ಸಾಮ್ರಾಜ್ಯದ ೨೯ ಅರಸರುಗಳು ೩೧೦ ವರ್ಷಕಾಲ ಕರ್ನಾಟಕದಲ್ಲೂ ದಕ್ಷಿಣ ಭಾರತದ ಇನ್ನಿತರ ಪ್ರದೇಶಗಳಲ್ಲೂ ತಮ್ಮ ಸುದೀರ್ಘ ಆಳ್ವಿಕೆ ನಡೆಸಿದರು. ಸಾಮಾನ್ಯವಾಗಿ ಮೂರು ಶತಮಾನಗಳ ನಂತರ ಯಾವುದೇ ಸಾಮ್ರಾಜ್ಯ ಎಷ್ಟೇ ಬಲಿಷ್ಠ ಹಾಗೂ ವಿಸ್ತಾರವಾಗಿದ್ದರೂ ಅದು ಸ್ವಾಭಾವಿಕವಾಗಿ ಅವನತಿ ಹೊಂದಿರುವ ನಿದರ್ಶಗಳು ಇತಿಹಾಸದಲ್ಲಿ ಸಾಕಷ್ಟಿವೆ.

ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಸಾಮ್ರಾಜ್ಯ ಕೃಷ್ಣಾನದಿಯಿಂದ ರಾಮೇಶ್ವರದರೆಗಿನ ವಿಸ್ತಾರ ಹಾಗೂ ಸಮೃದ್ಧ ಪ್ರದೇಶವನ್ನು ಒಳಗೊಂಡಿತ್ತು. ಹೀಗೆ ಮೆರೆದ ಸಾಮ್ರಾಜ್ಯ ಕೃಷ್ಣದೇವರಾಯನ ಮರಣದ ನಂತರ ಮೂವತ್ತೈದು ವರ್ಷದೊಳಗಾಗಿಯೇ ಅವನತಿಯ ಹಾದಿ ಹಿಡಿಯಿತು. ಇದಕ್ಕೆ ಕಾರಣ ರಾಜ್ಯದ ಒಡೆತನಕ್ಕಾಗಿ ಆಗಿಂದಾಗ್ಗೆ ನಡೆಯುತ್ತಿದ್ದ ಅಂತಃಕಲಹಗಳು. ಕೃಷ್ಣದೇವರಾಯನ ಏಳು ವರ್ಷದ ಒಬ್ಬ ಮಗ ವಿಷಪ್ರಾಸನಕ್ಕೊಳಗಾಗಿ ಮೃತನಾದನು. ಕೃಷ್ಣದೇವರಾಯ ಮರಣ ಹೊಂದಿದಾಗ ಇನ್ನೊಬ್ಬ ಪುತ್ರನಿಗೆ ಹದಿನೆಂಟು ತಿಂಗಳಾಗಿದ್ದು ಆತ ಉತ್ತರಾಧಿಕಾರಿಯಾದ. ರಾಜ್ಯಾಡಳಿತದ ಹೊಣೆಯನ್ನು ತನ್ನ ಸಂಬಂಧಿಗಳಿಗೆ ವಹಿಸಿ ತಾನು ಹೆಚ್ಚು ಕಾಲ ವಿಶ್ರಾಂತಿಯಲ್ಲಿಯೇ ಕಳೆದ ಬಗ್ಗೆ ಉಲ್ಲೇಖವಿದೆ. ಈತನ ಅದಕ್ಷತೆಯಿಂದ ಆಡಳಿತ ದುರ್ಬಲಗೊಂಡಿತು. ಅಚ್ಯುತರಾಯ ಮಡಿದ ನಂತರ

ಇನ್ನೊಮ್ಮೆ ರಾಜ್ಯಕ್ಕಾಗಿ ಕಲಹವಾಯಿತು. ಹೀಗೆ ಅಂತಃಕಲಹಃ, ದುರ್ಬಲ ಉತ್ತರಾಧಿಕಾರಿಗಳೂ, ಆಡಳಿತದಲ್ಲಿ ಅದಕ್ಷತೆ ಇವು ವಿಜಯನಗರಕ್ಕೆ ಪತನಕ್ಕೆ ಕಾರಣವಾಯಿತು ಎಂದು ಉಲ್ಲೇಖವಿದೆ.

ತಾಳೀಕೋಟೆ ಯುದ್ಧದಲ್ಲಿ ಸುಮಾರು ಒಂದು ಲಕ್ಷ ಸೈನಿಕರು ಮಡಿದರು. ರಾಮರಾಯ, ವೆಂಕಟಾದ್ರಿಯಂತಹ ನಾಯಕರು ಪ್ರಾಣವನ್ನು ಕಳೆದುಕೊಂಡರು. ವಿಶ್ವವಿಖ್ಯಾತ ಹಂಪಿ ರಾಜಧಾನಿಯೇ ಬೆಂಕಿಗೆ ಆಹುತಿಯಾಯಿತು.

ರಾಮರಾಯನ ಮರಣಾನಂತರ ತಿರುಮಲನು ಹೇಡಿಯಂತೆ ವರ್ತಿಸಿದನು. ಯುದ್ಧರಂಗದಲ್ಲಿ ಇಲ್ಲವೆ ರಾಜಧಾನಿಯಲ್ಲಾದರೂ ಆತನ ಶತ್ರುಗಳನ್ನು ಎದುರಿಸಬಹುದಾಗಿತ್ತು. ರಾಜಧಾನಿಯ ಕೋಟೆಗಳು ಹಿಂದೆ ಅಸಂಖ್ಯಾತ ಆಕ್ರಮಣಗಳನ್ನು ಯಶಸ್ವಿಯಾಗಿ ಎದುರಿಸಿದ್ದವು. ತಿರುಮಲನ ಪಲಾಯನ ನಿಜವಾಗಿಯೂ ಅಸಮರ್ಥನೀಯ ತಿರುಮಲನು ರಾಜಧಾನಿಯನ್ನು ಶತ್ರಗಳಿಂದ ರಕ್ಷಣೆ ಮಾಡಿದ್ದರೆ. ವಿಜಯನಗರ ಪುನಃ ಚೇತರಿಸಿಕೊಳ್ಳಬಹುದಿತ್ತು. ಬದಲಾಗಿ ರಾಜಧಾನಿಯನ್ನು ಶತ್ರುಗಳಿಗೆ ಈತನೇ ಒಪ್ಪಿಸಿದನು ಎಂದು ಕರ್ನಲ್ ಮೆಕೆಂಝಿಯು ಕೈಫಿಯತ್ತುಗಳ ಮೂಲಕ ತಾತ್ವಿಕವಾಗಿ ವಿಶ್ಲೇಷಿಸಿದ್ದಾನೆ.

ಕ್ರಿ.ಶ. ೧೫೬೫ರ ತಾಳಿಕೋಟೆ ಯುದ್ಧದ ನಂತರ ವಿಜಯನಗರದ ಅರಸರು ದಕ್ಷಿಣ ಭಾರತದಲ್ಲಿ ಆಡಳಿತವನ್ನು ಕಳೆದುಕೊಂಡರು. ಸೀಮಿತ ಪ್ರದೇಶಗಳಲ್ಲಿ ಮಾತ್ರ ತಮ್ಮ ಆಡಳಿತವನ್ನು ಉಳಿಸಿಕೊಂಡರು. ಅಧಿಕಾರಕ್ಕಾಗಿ ಆಗಾಗ್ಗೆ ಅಂತಃಕಲಹ, ಅಂತರ್ಯುದ್ಧ, ಕೊಲೆಗಳಾದವು. ರಾಜಧಾನಿಯನ್ನೂ ಅನೇಕ ಬಾರಿ ಬದಲಾಯಿಸಬೇಕಾಯಿತು. ಸಾಮ್ರಾಜ್ಯದ ವಿಸ್ತಾರ ಕುಗ್ಗಿತು. ಬಿಜಾಪುರ, ಗೋಲ್ಕೊಂಡದವರ ಒತ್ತುವರಿ, ಮಾಂಡಲೀಕರ ಬಂಡಾಯ, ಸಾಮ್ರಾಜ್ಯವನ್ನು ನಿರಂತರವಾಗಿ ಪೀಡಿಸುತ್ತಿತ್ತು. ವಿಜಯನಗರದ ಕೊನೆಯ ರಾಜ ಮೂರನೇ ಶ್ರೀರಂಗ ಸಾಮ್ರಾಜ್ಯವಿಲ್ಲದ ಸಾಮ್ರಾಟನಾದ ಎಂದು ಕರ್ನಲ್ ಮೆಕೆಂಝಿಯು ಕೈಫಿಯತ್ತುಗಳ ಸಂಗ್ರಹದಿಂದ ವಿಜಯನಗರ ಸಾಮ್ರಾಜ್ಯದ ಪತನದ ದಿನಗಳನ್ನು ವಿಶ್ಲೇಷಿಸಿದ್ದಾನೆ.

ವಿಜಯನಗರ ಸಾಮ್ರಾಜ್ಯ ಹಿಂದೂ ಧರ್ಮ, ಸಂಸ್ಕೃತಿಯ ರಕ್ಷಣೆಗಾಗಿ ಸ್ಥಾಪನೆಯಾಗಿದ್ದು, ಅದರ ಪತನದ ನಂತರ ಹಿಂದೂ ಧರ್ಮದ ಪುನರುಸ್ಥಾನಕ್ಕಾಗಿ ರಾಷ್ಟ್ರೀಯತೆಯ ಉಳಿವಿಗಾಗಿ, ಮಹರಾಷ್ಟ್ರದಲ್ಲಿ ಛತ್ರಪತಿ ಶಿವಾಜಿ ತನ್ನ ಹೋರಾಟದ ಮೂಲಕ ಈ ಕಾರ್ಯವನ್ನು ಮುಂದುವರೆಸಿದನು.

ಕರ್ನಲ್ ಮೆಕೆಂಝಿಯ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಕುಮಾರರಾಮನ ಕುರಿತು ಈ ರೀತಿಯಾಗಿ ಉಲ್ಲೇಖವಿದೆ. ಪೂರ್ವದಲ್ಲಿ ಕುಮಾರ ರಾಮನೆಂಬಾತನು ಯೀ ರಾಜ್ಯವನ್ನು ಪ್ರತಿಪಾಲಿಸುತ್ತ ಯಿರಲಾಗಿ, ಶ್ರೀ ಷ್ಮರಾಯನು ಗಂಡನೆಂದು ಪಾಷಾವಜೀತರರ ಮಿಂಡ ನೆಂದು ಹೊಗಳಿಕೊಳ್ಳುತ್ತಯಿರಲಾಗಿ, ಯೀ ವರ್ತಮಾನವನ್ನು ನೇಮಿಯುವರು ಪಾಷಾನವರು ಕೇಳಿ, ಹನ್ನೆರಡು ಲಕ್ಷ ಪೌಜು ತೆಗೆದುಕೊಂಡು ಮೊಹಿಮು ಮಾಡಿ, ಯೀ ದೇಶಕ್ಕೆ ಬರಲಾಗಿ, ದರೋಜಿಗ್ರಾಮ ನಂದಿದುರ್ಗ ಆರಂಭಮಾಡಿಕೊಂಡು ಸಂಡೂರು ವಳಗಣ ಮಾರ್ತಾಂಡದುರ್ಗದ ಪರಿಯಂತ್ರವಾಗಿ ಉತ್ರದಕ್ಷಣ ಪೂರ್ವಪಶ್ಚಿಮ ಬುದ್ಧಿಗಣಿಮೆ ಆರಂಭಮಾಡಿ ವಡ್ಡರಳ್ಳಿ ಆರಂಭಮಾಡಿಕ್ಕೊಂಡು. ಪೂರ್ವಪಶ್ಚಿಮ ಯೀ ಮೇರೆಯಿಂದ ಪೌಜು ಯಿರಲಾಗಿ, ಯೀ ಪೌಜಿಗೆ ಸರದಾರನಾದಂತಾ ನೇಮಿಯಂಬವನು ಯೀ ವಡ್ಡನ ಜಂಡೆ ಹಾಕಿ ನಿಂತು ಯಿರಲಾಗಿದೆ, ಆ ಸಮಯದಲ್ಲಿ ಕುಮಾರರಾಮನು ಯಿವರಿಗೂ ಮೊಗಲಾಯಿ ಸೀಮೆ ನದಿ ಆಚೀಗೆ ಕುಮ್ಮಾಟಾಯೆಮಬೊ ಹತ್ರ ಮಹಾತ್ತು ಯಿದ್ದವಾಯಿತು. ಅವನ್ನ ಜೆಯಿಸಿಕ್ಕೊಂಡು ಪುನಹಾ ತಮ್ಮ ದೇಶಕ್ಕೆ ತೆರಳಿ ಹೋಗೋ ವ್ಯಾಳೆದಲ್ಲಿ. ಯೀ ದೇಶದಲ್ಲಿ ನಮ್ಮಾ ಗುರುತು ಯಿರಬೇಕೆಂದು ಯೋಚನೆ ಮಾಡಿ, ಪಾಲಕಿನಲ್ಲಿ ಸಕಲ ವಜೀರರನ್ನು ಕರೆಸಿ, ಯಿ ದಂಡಿಗೆ ನೀರುಬೇಕೆಂದು ಹೇಳಿ. ನಿಮ್ಮ ನಿಮ್ಮಾ ಪಾಲಿಗೆ ಹಂಚಿಕೆ ಮೇರಿಗೆ ವೊಂದು ಸಮುದ್ರಕ್ಕೆ ಸವನಾದ ಕೆರೆ ನಿರ್ಮಾಣಮಾಡಿರಿ ಎಂದು ನೇಮಿಯವರು ಅಪ್ಪಣೆ ಕೊಡಲಾಗಿ, ವರು ಹಂಚಿಕೆ ಮಾಡಿಕ್ಕೊಂಡ ವಿವರವು.

ನಂದಿದುರ್ಗಕ್ಕೆ ಉಪನಾಮಾ ದ್ವಾರಾವತಿದುರ್ಗ, ಬೆಟ್ಟ ಆರಂಭ ಮಾಡಿಕೊಂಡು ಕೂಡಿಗುಡ್ಡದ ಪರಿಯಂತ್ರ ತಗಲಿ ಯಿದ್ದೀತೆ ನಮ್ಮ ಪಾಲಕಿಯಿಟ್ಟು ಬೊಂಬಿನ ಅಡ್ಡಾಗಲ ಜಂಡೆದ ಉದ್ದ ಯೀ ಮರ್ಯಾದಿಯಲ್ಲಿ ಕೆರೆಯನ್ನು ನಿರ್ಮಾಣಮಾಡಲಾಗಿ, ಯಿಬ್ಬರೂ ಬಾನಿ (>ಖಾನ)ರಿಗೆ ಯೀ ಮಾಡಿದ ಮರ್ಯಾದಿಯಲ್ಲಿ ಕೆರೆ ಮುಗದು ಯಿವರಿಬ್ಬರು ಉಳಿಯಲಾಗಿ, ಖಾನ್‌ಸಾಹೇನಯೆಂಬೊ ಆತನು ನಮ್ಮಾ ಪಾಲಿಗೆ ಹಂಚಿಕೆ ಬರಲಿಲ್ಲಾವೆಂದು ಪ್ರತ್ಯೇಕವಾದ ಕೆರೆಯನ್ನು ನಿರ್ಮಾಣಮಾಡಿ ಖಾನ್ ಕೆರೆಯಂದು ಹೆಸರು ಯಿಟ್ಟನ್ನು. ಯಿನ್ನೊಬ್ಬ ಸರದಾರನು ಅದೇ ಮೇರಿಗೆ ತಾನು ವೊಂದು ಕೆರೆ ಕಟ್ಟಿ ಸಿಂಗನಕೆರೆಯೆಂದು ಹೆಸರು ಯಿಟ್ಟನ್ನು. ಉಭಯ ಜಿವದ ನಡ್ವೆ ಕೆರೆ ಕಟ್ಟಿಸದರು. ಹಿರೆಕೆರಿಗೆ ದರಿಯಾತಲಾವುಯಂದು, ಸಮುದ್ರದ ಹಾಗೆ ಯಿದದ್ ಕಾರಣ ಹೆಸರು ಯಿಟ್ಟನ್ನು. ಯೀ ಕೆರಿಗೆ ಉತ್ರಭಾಗ ಹರದಾರಿ ಖಾನನಕೆರೆ, ಪಶ್ಚಿಮಭಾಗ ಶಿಂಗನಕೆರೆ ಕೂಗಳತಿ ನಿರ್ಮಾಣ ಮಾಡಿ ನಮಯಶದ ಜಾಗದಲ್ಲಿ ವಡ್ಡರು ಯಿಳಿದ ಕಾರಣ

ದರೊಜಿ ಕೆರೆ ಹುಟ್ಟಿ ವಳಗೆ ಎರಡು ಹರದಾರಿ ಮೇಲೆ ದಕ್ಷಿಣಕ್ಕೆ ವಡ್ಡು ಯಂದು ಹೆಸರು ಯಿಟ್ಟು, ಗ್ರಾಮ ಕಟ್ಟಿಸಿ ಹನುಮಂತದೇವರು ಪ್ರತಿಷ್ಟಾ ಮಾಡಿ ಹೋಗಲಾಗಿ ವೊಡ್ಡರು ಯಿಳದ ಯಿದ್ದ ಕರನ ವಡ್ಡುಯೆಂಬೊ ಹೆಸರು ನಿರ್ಮಾಣವಾಯಿತು ಅವರು ಕೆಲವು ಕಾಲ ರಾಜ್ಯ ಆಳಿದರು ಎಂಬುದರ ಬಗ್ಗೆ ಕರ್ನಲ್ ಮೆಕೆಂಝಿ ಸಂಗ್ರಹದ ಕೈಫಿಯತ್ತುಗಳಲ್ಲಿ ಉಲ್ಲೇಖಿಸಲಾಗಿದೆ.

**ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಮಂಡಗಡ ಕೈಫಿಯತ್ತು ವಿಶ್ಲೇಷಣೆ**

**ಮಂಡಗಡ ಕೈಫಿಯತ್ತು ಸಾರ :** "ಈ ಕೈಫಿಯತ್ತುಗಳಲ್ಲಿ ಹರಿಹರನ ಬಗ್ಗೆ ವಿವರಣೆಗಳನ್ನು ನೋಡಬಹುದು. ಹರಿಹರರಾಯ ಗಜದೇಶದಿಂದ ಬಂದು ದೊಡ್ಡ ಕ್ಷೇತ್ರದಲ್ಲು ಅಗ್ರಹಾರ ದೇವಾಲಯ ಮಾಡಬೇಕೆಂದು ಯೋಚಿಸಿ ಹುಡುಕಿದಲ್ಲಿ ತುಂಗಾ ಮಧ್ಯಗಡೆಯಲ್ಲಿ ಋಷಿ ಆಶ್ರಮ ಯಿರುವದು ಕಂಡು, ಯೀ ಸ್ಥಳದಲು ಅಗ್ರಹಾರ ಮಾಡಬೇಕೆಂದು ನದಿ ಉಪದ್ರವ ಆಗದಂತೆ ಕಲ್ಲು ಕಟ್ಲ ಕಟ್ಟಿಸಬೇಕೆಂದು ಪ್ರಯತ್ನ ಮಾಡಿ ಕಟ್ಟಿಸುತ್ತ ಯಿದ್ದಲ್ಲಿ. ಆ ರಾಮ(>ಯ)ಗೆ ಈ ಸ್ಥಳದಲ್ಲಿ ಆಶ್ರಮಕೆ ಯೋಗ್ಯದೆ ಹೊರೆತು, ನರ ಮನುಷ್ಯರಿಗೆ ಯೋಗ್ಯವಲ್ಲಾ. ಕಲಿಯುಗ ಅಂತ್ಯ ಪರಿಯಂತ್ರ ತಾವು ತಪಸ್ಸು ಮಾಡುತ್ತ ಯಿರುತ್ತೆವೆ. ಯಿಲ್ಲಿ ನೀವು ಯಿ ಯೋಜನೆ ಮಾಡಬ್ಯಾಡ. ತೀರದ ದಡದಲ್ಲು ಆಜ್ಞಾಪಿಸಿದ್ದರಿಂದ ಋಷಿಗಳ ವಾಕ್ಯವನ್ನು ಜ್ಞಾಪ್ತಿಗೆ ತಂದುಕೊಂಡು, ಯಿ ಆಶ್ರಮಕ್ಕೆ ಸಮೀಪವಾದ ದಕ್ಷಿಣಭಾಗದ ತೀರದಲ್ಲೂ ಲಿಂಗಾಪುರದ ಗ್ರಾಮದಲು ಮಾಂಡವ್ಯ ಅಗ್ರಹಾರ ಯಂತ ಹೆಸರು ಯಿಟ್ಟು, ಹರಿಹರದೇವರ ದೇವಸ್ಥಾನವ ಕಟ್ಟಿಸಿದ. ಯಿ ಅಗ್ರಹಾರಕ್ಕೆ ದೇವರ ಪೂಜೆ ಬ್ರಾಹ್ಮಣರಿಗೆ ಸಹಾ ಉತ್ತರವಾಗಬೇಕೆಂದು ಅರಸುಗಳಿಗೆ ವಿಳಂಬ ಸಂವತ್ಸರದ ಆಷಾಢ ಶು ೧೫ರಲ್ಲು ನಿರುಪಾ ಹೇಳಿಕೊಂಡು ಉತ್ತರವ ಬಿಡಿಶಿದ ಎಂಬ ಉಲ್ಲೇಖವಿದೆ."[೪೩]

**ಮಂಡಗಡ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಹರಿಹರನ ಜೀವನ ಮತ್ತು ಸೈನಿಕ ಸಾಧನೆಗಳ ಬಗ್ಗೆ ಮತ್ತು ಆತನ ನಿರ್ಮಿಸಿದ ಅಗ್ರಹಾರ ನಿರ್ಮಿಸುವ ಬಗ್ಗೆ, ಮಾಂಡವ್ಯ ಅಗ್ರಹಾರ ಮತ್ತು ಹರಿಹರೇಶ್ವರ ದೇವಾಲಯ ಮಾಡಿದ ಹಾಗೂ ಅಗ್ರಹಾರದ ನಿರ್ವಹಣೆ ಬಗ್ಗೆ, ಋಷಿ ಜೀವನ ಕುರಿತು, ವಾನಪ್ರಸ್ಥಾಶ್ರಮ ಕುರಿತು, ನದಿಯ ನಿರ್ವಹಣೆ ಕುರಿತು, ನದಿ ತೀರದ ಜನ ಜೀವನ ಕುರಿತು, ಅಗ್ರಹಾರದ ನಿರ್ವಹಣೆಗೆ ಜನರನ್ನು ಆಯೋಜಿಸುವ ಕುರಿತು, ಸಮಾಜೋ ಧಾರ್ಮಿಕ

ಚಟುವಟಿಕೆಗಳ ಕುರಿತು ಕರ್ನಲ್ ಮೆಕೆಂಝಿಯು ತಾತ್ವಿಕ ವಿಶ್ಲೇಷಣೆಯನ್ನು ಕೈಫಿಯತ್ತುಗಳ ಮೂಲಕ ವಿಶ್ಲೇಷಿಸಿದ್ದಾನೆ.

**ವಸುಧಾರೆ ಕೈಫಿಯತ್ತು ಸಾರ** : "ತರುವಾಯ ಶಕ ೧೨೫೮ನೆಯ ಧಾತು ಸಂವತ್ಸರದಲ್ಲಿ ವಿದ್ಯಾರಣ್ಯಸ್ವಾಮಿ ಅನುಗ್ರಹದಿಂದ್ದಾ ವಿಜಯನಗರದ ಸಂಸ್ಥಾನದ ಕೆಳಗೆ ಹರಿಹರರಾಯರು ಮೊದಲು ಮಾಡಿಕೊಂಡು ೧೩ ಮಂದಿ ಕುರುಬರು ವಿಜಯನಗರದಲ್ಲಿ ವಿದ್ಯಾರಣ್ಯರ ಅನುಗ್ರಹದಿಂದಾ ಶಿಂಹ್ವಾಸನ ಮಾಡಿಕೊಂಡು ಅನೇಕ ದಿವಸ ಆಳಿದರು. ಆವಾಗ್ಯೆ ಯೀ ಗ್ರಾಮ ಬೇಲೂರು ನಾಡ ಕೆಳಗೆ ಯಿತ್ತು. ಹರಿಹರರಾಯರ ಕಾಲದಲ್ಲಿ ಅನೇಕ ಅಗ್ರಹಾರಗಳು ಯೀ ಬೇಲೂರು ಶೀಮೆ ಮೊದಲಾಗಿ ಕೊಟ್ಟರು. ಕುರುಬ ಸಂಸ್ಥಾನ ಹಾಳು ಆದ ಮೇಲೆ ಚಂದ್ರವಾ (>ವಂ) ಶಿಕರು ನರಪತಿ ಅರಸರುಗಳು ಜನ ೮ ಆಳಿದರು. ಆವ್ಯಾಗ್ಯೆ ಯೀ ಗ್ರಾಮವನ್ನು ಬೇಲೂರು ನಡಿನಲ್ಲಿ ಶೆರಿ(>ಸೇರಿ) ಆನೆಗಯಂದಿಗೆ ನಡಿಯಿತ್ತು. ಶಾಲಿವಾಹನ ಶಕ ೧೪೧೨ನೆಯ ಸಾದಾರಣ ಆರಭ್ಯಾ ೧೪೮೪ಕ್ಕೆ ರಕ್ತಾಕ್ಷಿ ಸಂ//ರದ ವರಿಗೆ ಪ್ರವುಡೇವರಾಯ ಮೊದಲಾಗಿ ರಾಮರಾಯರ ವರಿಗೇ."[೪೪]

**ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ** : ಹರಿಹರರಾಐ ಹೊಯ್ಸಳರ ಮಾಡಲೀಕ ಅಧಿಕಾರಿಯಾಗಿದ್ದ ಎಂಬ ಬಗ್ಗೆ ಹಾಗೂ ವಿಜಯನಗರ ಸ್ಥಾಪನೆ ಪ್ರೇರಣೆಯಾದ ವಿದ್ಯಾರಣ್ಯರ ಬಗ್ಗೆ,ಆ ಕಾಲದಲ್ಲಿ ನಿರ್ಮಾಣವಾದ ಅಗ್ರಹಾರಗಳ ಬಗ್ಗೆ ಉಲ್ಲೇಖವಿದೆ. ಪ್ರೌಢ ದೇವರಾಯ ಮತ್ತು ವಿಜಯನಗರದ ಉಳಿದ ಅರಸರ ಹಾಗೂ ಅಳಿಯ ರಾಮರಾಯನ ಬಗ್ಗೆಯೂ ಸಹ ಕೈಫಿಯತ್ತು ಚರಿತ್ರೆಯ ಆಕರಕ್ಕೆ ವಿಸ್ಕೃತವಾದ ಮಾಹಿತಿ ನೀಡುತ್ತದೆ.

**ಮಲ್ಲೂರು ಸಾಸಿವೆ ಹಳ್ಳಿ ಶೀಮೆ ಕೈಫಿಯತ್ತು ಸಾರ** : "ವಿದ್ಯಾರಣ್ಯರು ಶ್ರೀಪಾದದ ಅನುಗ್ರಹದಿಂದ ಹರಿಹರರಾಯ ಮಹಾರಾಯರು ರಾಜ್ಯಾ ಸಾಧಿಸಿದ್ದು ಶಕ ೧೨೫೮ಯ ಧಾತು ಸಂವತ್ಸರದಲ್ಲು ಯಾವತ್ತು ರಾಜ್ಯವನ್ನು ಸಾಧಿಸಿ ಅಗ್ರಹಾರ ಉತ್ತಿಕ್ಷೇತ್ರ ಮುಂತಾದನ್ನು ಸರ್ವಮಾನ್ಯವನ್ನು ಕೊಟ್ಟು ರಾಜ್ಯವನ್ನು ಆಳುತ್ತಾ. ಶ್ರೀಮನ್ಮಹಾ ಯಿವರ (>ರಾಜರ) ಕಡೆ ಪ್ರಧಾನ ಬಸವಪ್ಪದಣ್ಣಾಯಕರು ರಾಜ್ಯವನ್ನು ವಿಚಾರಿಸುತ್ತಾ ಯೀ ಸೂಳೆಕೆರೆ ಬಳಿಗೆ ಬಂದು ಪೂರ್ವತ್ತಾರೋಹಣವನ್ನು ಮಾಡಿ ಶಿದ್ದೇಶ್ವರ ದೇವರನ್ನು ಶರುಶನ ತೆಗೆದುಕೊಂಡು, ಯೀ ಮಹಾ ತಟಾಕವೂ ಅದಂಥಾ ಕೆರಿಯ ಶಿಥಿಲವಾಗಿ ಬಿದ್ದು. ಕೆರೆಯಲ್ಲಿ ನೀರು ಯಿಲ್ಲದ್ದರಿಂದ. ಯಿಂಥಾ ಮಹಾಘನ ಕೆರೆ ಯೆನು ಕಾರಣ

ಶಿಥಿಲವೆಯಿತೆಂಬ ದಾಗಿ ಸ್ಥಳದ ಶ್ಯಾನುಭೋಗ ಬಡಗಣದ ಕನಡಿಗ ಅಶ್ವಲಾಯಿನ ಸೂತ್ರದ ವಿಶಿಷ್ಟಗೋತ್ರದ ರುಗುಶಾಖೆಯ ಹೊನ್ನರಸೈಯ್ಯನವರ ರಾಮರಸೈಯ್ಯನು ಪೂರ್ವಪರ ಕೆರೆ ಹಿಟ್ಟಿದ ಆರಭ್ಯವಾಗಿಯಲ್ಲಾ ಉತ್ತಾಂತವನ್ನು ಶೃತ ಮಾಡಿ. ಯೀ ಹರಿದ್ರಾ ನದಿಯ ಪ್ರವಾಹ ವು ಕೋಡಿ ಕಡಿಗೆ ಬಿದ್ದದ್ದರಿಂದ. ಕೋಡಿಯಲ್ಲು ಹಳ್ಳ ಹರದು ಯೇರಿಗೆ ನೀರು ಹತ್ತದೆ ಯಿದ್ದದ್ದರಿಂದಯ ಯೀ ಕೋಡಿಯನ್ನು ಹಳ್ಳ ಹರದು ಯೇರಿಗೆ ನೀರು ಹತ್ತದೆ ಯಿದ್ದದ್ದರಿಂದಯ ಯೀ ಕೋಡಿಯನ್ನು ಭದ್ರವಾಗಿ ಕಟ್ಟಿಶಿ, ಯೀ ಕಡೆ ಬರುವ ಪ್ರವಾಹವನ್ನು ಹತ್ತುವ ಹಾಗೆ ಮಾಡಿಶಿದಲ್ಲಿ ಯೀ ಯೇರಿಗೆ ನೀರಿನ ಹುಯಿಲು ಕಟುವಾಗಿಲ್ಲವಾಗಿ, ಆಮೇಲೆ ಕೆರೆಗೆ ಪೂರ್ನವಾಗುತ್ತಾಯಿದ್ದತೆಂ ಬುದಾಗಿ ಅರಕೆ ಮಾಡಿಕೊಳ್ಳಲಾಗಿ, ಯೀ ಪೂರ್ವೊರ್ತ್ರವನ್ನು ಚಿತ್ತಕ್ಕೆ ತಂದು, ಅದೇ ಮೇರಿಗೆ ಯೀ ಹಳೆ ವಡವಿನ ಬಳಿಯ ಅಡ್ಡಗಟ್ಟಿಯನ್ನು ಹಾಕಿಶಿ, ಹೊಸ್ತಗಿ ತಮ್ಮ ಹೆಸರಿನಲ್ಲು ತೂಬನ್ನು ಕಟ್ಟಿಸಿ, ಬನ(>ಸ)ವನ ತೂಬು ಯಂಬುದಾಗಿ ಹೆಸರಿಟ್ಟುದು ಶಾಲಿವಾಹನ ಶಕ ೧೩೯೯ನೆಯ ವಿಶ್ವಾವನ್ನು ಸಂವತ್ಸರದಲ್ಲು, ಆಮೇಲೆ ಯೀ ಕೆರೆಯ ಪು(>ಪೂ)ರ್ನ ತಟಾಕವಾಗಯಿತು."[೪೫]

**ಮಲ್ಲೂರು ಸಾಸಿವೆ ಹಳ್ಳಿ ಶೀಮೆ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಶಿಥಿಲ ಕೆರೆಯ ಜೀರ್ಣೋದ್ಧಾರ, ಸೂಳೆಕೆರೆ ಕುರಿತು ನೀರಿನ ಕೋಡಿ ಮತ್ತು ಕೆರೆಯ ನೀರು ಅಪವ್ಯಯವಾಗದ ಕುರಿತು, ಪ್ರಾಣಿಗಳಿಗೆ ಮತ್ತು ಕೃಷಿಗೆ ನೀರು ಕಟ್ಟುವ, ಕೆರಗಳ ನೀರಿನ ಸದ್ಬಳಕೆ, ಕೋಡಿ ಬಿದ್ದು ನೀರು ಮತ್ತೆ ಪ್ರವಾಹದಿಂದ ಹಾಳಾಗದ ಕುರಿತು ಕೈಫಿಯತ್ತು ಮಾಹಿತಿ ನೀಡುತ್ತದೆ.

**ಮಲ್ಲೂರು ಸಾಸಿವೆ ಹಳ್ಳಿ ಶೀಮೆ ಕೈಫಿಯತ್ತು ಸಾರ :** ಸ್ತಳದ ಶ್ಯಾನುಭೋಗದ ಬೊಮ್ಮರಸೈಯನು ಪೂರ್ವಿಕನಾದ್ದರಿಂದ ಯೀತಗೆ ಯಿನಾಮು ಹಾಕಿಕೊಟ್ಟ ಗ್ರಾನಗಳು ಯಿಕ್ಕೇರಿ ಮಾಗಣಿ ವಳಗಣ ಕಾಶಿಪುರದ ಗ್ರಾಮ, ಕದುರನಹಳ್ಳಿ ಗ್ರಾಮ, ಉಭಯಂ ಗ್ರಾಮ ಯರಡು, ಹೊನ್ನಮವಡಿ ಗ್ರಾಮ, ಉಭಯ ಗ್ರಾಮ ಇನ್ನೂ ಯಿನಾಮು ಕೊಟ್ಟು,ಯೀ ಯರಡು ಶೀಮೆಸ್ಥಳದ ಶ್ಯಾನುಭವಿಕೆಯನ್ನು, ಗ್ರಾಮದಲ್ಲಿ ಯಿರುವ ಗದ್ದೆ ಬೆದ್ದಲು ಮುಂತಾದನ್ನು ವಿವರಿಸಿದ್ದಾರೆ.

**ಮಲ್ಲೂರು ಸಾಸಿವೆ ಹಳ್ಳಿ ಶೀಮೆ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಶ್ಯಾನುಭೋಗರ ಬೊಮ್ಮರಸೈಯನ ಮತ್ತು ಆತನ ಪೂರ್ವಿಕರ ಬಗ್ಗೆ, ಇನಾಮು

ಹಾಕಿಕೊಟ್ಟ ಗ್ರಾಮಗಳ, ಶ್ಯಾನುಭವಿಕೆಯ ಬಗ್ಗೆ ಗ್ರಾಮದಲ್ಲಿ ಯಿರುವ ಗದ್ದೆ ಬೆದ್ದಲು ಮುಂತಾದನ್ನು ವಿವರಿಸಿದ್ದಾರೆ.

**ಕುರುಗೋಡು ತಾಕುಕೆ ಬಳ್ಳಾರಿ ಕೈಫಿಯತ್ತು ಸಾರ :** "ವಿಜಯನಗರ ವಿದ್ಯಾರಣ್ಯರಿಂದಾ ನಿರ್ಮಿತ ವಿವರ: ಶಾಲಿವಾಹನ ಶಕ ವರುಷ ೧೨೫೮ನೇ ಧಾತು ಸಂವತ್ಸರ ವೈಶಾಖ ಶುದ್ಧ ೧೧೭ ಸಾಮ್ಯವಾರದಲ್ಲೂ ಯಿದಕ್ಕೆ ದೃಷ್ಟಾಂತ: ಶ್ಲೋಕ// ವಾಗೆಷ್ಟಕ್ಕೇನೆ ಮಿತ ಶಕೆ ಶಾಲಿವಾಹನಯಾತೆ ಧಾತುರ್ಯ್ಯಾಬ್ದೆ ಸುಗುಣ ಸಹಿತೆ ಮಾಸ ವೈಶಾಖ ನಾಮ್ನೇ/ ಶುಕ್ಷಪಕ್ಷ ಸುರುಗುರುಸಹಿತೆ ಸೌಮ್ಯವಾಸರೆ ಸುಲ್ಲಗ್ನ ಸಪ್ತಮ್ಯಾಂ ಶ್ರೀ ವೀರಪ್ರತಾಪ ಯಂಬ ಬಿರುದಾವಳಿಯಂ ಕೊಟ್ಟು ಮಾಡಿದರು."[೪೬]

**ಕುರುಗೋಡು ತಾಕುಕೆ ಬಳ್ಳಾರಿ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ವಿಜಯನಗರ ವಿದ್ಯಾರಣ್ಯರಿಂದಾ ನಿರ್ಮಿತವಾದ ದೇವಾಲಯಗಳು, ಶಾಲಿವಾಹನ ಶಕ ವರ್ಷ ಕುರಿತು, ಧಾತು ಸಂವತ್ಸರ ವೈಶಾಖ, ಶಕೆ ಶಾಲಿವಾಹನ, ಶ್ರೀ ವೀರಪ್ರತಾಪ ಎಂಬ ಬಿರುದಾವಳಿಯನ್ನು ಕೊಟ್ಟ ಬಗ್ಗೆ ಮಾಹಿತಿಯು ಅನಾವರಣವನ್ನು ಒಳಗೊಂಡಿದೆ.

**ಹಾರನಹಳ್ಳಿ ಕೈಫಿಯತ್ತು ಸಾರ :** "ಕಸಬೆಯಲ್ಲು ಗದ್ದೆಬೆದ್ದಲು ಸಹ ಉಂಬಳಿಮಾಡಿಸಿಕೊಟ್ಟು, ಯಿಶಾನ್ಯ ದಿಕ್ಕಿನಲ್ಲುಇ ಸೋಮೇಶ್ವರ ದೇವಸ್ಥಾನವನ್ನು ಕಟ್ಟಿಶಿ. ಚೆಲಿಕೆರ್ರೆ ಹೊಲ್ಲರಹಳ್ಳಿಯಂಬ ಗ್ರಾಮ ೨ನ್ನು ಪಡಿತರ ದೀಪಾರಾಧನೆ ಬಗ್ಗೆ ನಡೆಯುವಂತೆ ಉಂಬಳಿ ಕೊಡಿಸಿ, ಕಸಬೆಯಲ್ಲು ಗದ್ದೆಬೆದ್ದಲ್ಲು ಸಹ ಉಂಬಳಿ ಕೊಡಿಸಿ, ಕಡವಯನ್ನು ದೇವಸ್ಥಾನಗಳು ಬನಶಂಕರಿಗುಡಿ, ಕೋಡಿ ಅಮ್ಮನವರ ಗುಡಿ, ಕೈಲಾಸ ಮಲ್ಲೇಶ್ವರಸ್ವಾಮಿಯವರ್ರ ದೇವಸ್ಥಾನಗಳು ಬನಶಂಕರಿಗುಡಿ, ಕೋಡಿ ಅಮ್ಮನವರ ಗುಡಿ, ಕೈಲಾಸ ಮಲ್ಲೇಶ್ವರಸ್ವಾಮಿಯವರ್ರ ದೇವಸ್ಥಾನ ಮುಂತಾಗಿ ಕಟ್ಟಿಶಿ. ಮೈಲಾರ ತಮ್ಮಣ್ಣಗೆ ನಾಡಿಗತನವನ್ನು ನೇಮಕಮಾಡಿ, ಶೀಮೆ ಬಾರ್ರವ ದೊಡ್ಡ ತಿಮ್ಮಣ್ಣನಗೆ ವ್ಯವಹಾರಿಕೆಯನ್ನು ಕೊಡಿಸಿ, ನಾಗೇನಹಳ್ಳಿಯಲ್ಲು, ಹಾರನಹಳ್ಳಿ ಗ್ರಾಮ, ಮಂದಾಲೂರ್ರದ ಗ್ರಾಮ, ಕಸಬೆ ಹಾರನ ಹಳ್ಳಿಯಲ್ಲು ಗದ್ದೆಬೆದ್ದಲು ಸಹಾ ಕೊಡಿಶಿ, ಉಂಬಳಿ ಸನದು ಬರಸಿ ಕೊಟ್ಟು ಕೋಡೆಯನ್ನು ಕಟ್ಟಿಶಿ, ತಂನ ಮಗಳು ಸೋಮನಾಗತ್ತಿಗೆ ಯೀ ದಕ್ಷಿಣರಾಜ್ಯವನ್ನು ಜಹಗೀರು ಕೊಟ್ಟು ಹರಿಹರ ಸೋಮೇಶ್ವರತರಾಯರು ಮುಂದಕ್ಕೆ ಹೊರಟುಹೋದ ತರುವಾಯಿ ಯೀ ಕೋಟೆಯನ್ನು ಪೂರ್ತಿಯಾಗಿ ಕಟ್ಟಿಸಿ, ಅಗ್ರಹಾರದ ಬ್ರಾಹ್ಮಣರಿಗೆ ಮುಂತಾಗಿ ಸಾರೋಧರವಾಗಿ ನಡೆವಂತೆ ಮಾಡಿ ಊರ್ರಿಗೆ ದಕ್ಷಿಣದಲ್ಲು ಕೆರ್ರೆ

ಕಟ್ಟಸ್ಥಳ ಪ್ರಶಸ್ತವಾಗಿಯಿದ್ದದರಿಂದಾ ಯೀ ದೊಡ್ಡ ಕೆರೆಯನ್ನು ಕಟ್ಟಿಸಿ, ಯೀ ಕೆರಿ ಹಿಂದೆ ಕೋಟೆನ್ನು ಮಾಡಿಸಿ, ತಂನ ಹೆಸರು ನಿಲ್ಲವಂತೆ ಮಾಡಬೇಕು ಯಂದು ಯೋಚನೆ ಮಾಡಿ. ಕೆರೆ ವಿಸ್ತಾರವಾಗಿ ಕಟ್ಟಿಸಿ, ಯೀ ಕೆರೆ ಕೋಡಿಯಲ್ಲು ಯಿದ್ದ ಶಕ್ತಿದೇವತೆ ಕೋಡಿ ಅಮ್ಮನವರಿಗೆ ಪಡಿತರ ದೀಪಾರಾಧನೆ ಬಗ್ಯೆ ಯೇಳು ಕಂಡಿ. . . . ಕೋಟ. . .ಬಿ. .?. . .ಉಂಬಳಿ ಶಾಸನವನ್ನು ಬರಶಿಕೊಟ್ಟು, ದೇವತಾಸೇವೆ ನಡವಂತೆ ಮಾಡಿದರು."[೪೭]

**ಹಾರನಹಳ್ಳಿ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಉಂಬಳಿ ಮಾಡಿಸಿಕೊಡುವ ಮತ್ತು ಸೋಮೇಶ್ವರ ದೇವಸ್ಥಾನವನ್ನು ಕಟ್ಟಿಸಿದ ಬಗ್ಗೆ ವಿವರಣೆಯನ್ನು ಒಳಗೊಂಡಿದೆ. ಅಲ್ಲದೆ ಪಡಿತರ ದೀಪಾರಾಧನೆ, ಬನಶಂಕರಿಗುಡಿ, ಕೋಡಿ ಅಮ್ಮನವರ ಗುಡಿ, ಕೈಲಾಸ ಮಲ್ಲೇಶ್ವರಸ್ವಾಮಿ ಕಟ್ಟಿಸಿದ ಕುರಿತು, ನಾಡಿಗತನವನ್ನು ನೇಮಕಮಾಡಿದ ಬಗ್ಗೆ ಉಲ್ಲೇಖವಿದೆ. ದೊಡ್ಡ ತಿಮ್ಮಣ್ಣನಗೆ ವ್ಯವಹಾರಿಕೆಯನ್ನು ಕೊಡಿಸಿದ ಮತ್ತು ಉಂಬಳಿಯನ್ನು ಸನದು ಬರೆಸಿಕೊಟ್ಟ ಬಗ್ಗೆ, ಹೆಣ್ಣು ಮಗಳಿಗೆ ಜಹಗೀರು ಕೊಟ್ಟು, ಕೋಟೆ ಕಟ್ಟಿಸದ ಹಾಗೂ ಕೆರೆ ಕಟ್ಟಿಸಿ ಅದರ ಬಂದೋಬಸ್ತು ಮಾಡುವುದರ ಬಗ್ಗೆ ಅಲ್ಲದೆ ಸನ್ನದು ನಿರ್ವಹಣೆ ಬಗ್ಗೆಯೂ ದಾಖಲೆ ಒಳಗೊಂಡಿದೆ.

**ಹೊಳೆಹೊನ್ನೂರು ಕೈಫಿಯತ್ತು ಸಾರ :** "ಭೀಮಳರಾಯನು ಶಖ ೧೨೩೬ನೇ ಆನಂದ ಸಂವತ್ಸರ ೧೨೫೭ ಯುವ ಸಂವತ್ಸರ ವರಿವಿಗೂ ವರುಷ ೨೨. ಈತನ ಪ್ರಭುತ್ವ ಈತಂನು ಕಾಮಾತುರನಾಗಿ ತಂನ ರಾಜ್ಯ ಯಾವತ್ತು ಕೆಡಿಸಿಕ್ಕೊಂಡು ಬಹಳ ಅಜಾಗ್ರತೆಂಯಿಂದಾ ಇದ್ದು, ದಿನಚರಿಯಲ್ಲಿ ಬೇಟೆಯಾಡುವ ವ್ಯಸನಗಳಲ್ಲಿ ದಿನ ಕಳೆದು ಅನ್ಯಾಯದಿಂದ ತಂನ್ನ ಸೋದರ ಅಳಿಯಂದರಿಗೆ ಅಕ್ಕಗೆ ಸೊತ್ತನ್ನು ಹೆಂಡತಿ ಮಾತು ಕೇಳಿ ಗಲ್ಲಿ ಚಡಾವು ಮಾಡಿಸಿದನು.

**ಹೊಳೆಹೊನ್ನೂರು ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಹೊಳೆಹೊನ್ನೂರಿನ ಪ್ರದೇಶದಲ್ಲಿ ಭೀಮರಾಯನು ಆಳ್ವಿಕೆ, ಈತನ ವ್ಯಸನಗಳ, ಆಡಳಿತ ನಿರ್ವಹಣೆ ಮಾಡದೇ ಇದ್ದ ಬಗ್ಗೆ ಕುರಿತು ಉಲ್ಲೇಖಿಸಿದ್ದಾರೆ. ಅಲ್ಲದೆ ಭೀಮರಾಯನು ಕೆಟ್ಟ ಚಟಗಳಿಂದ ದಾಸನಾದವನು ಮೂಲಕ ಆಡಳಿತದಲ್ಲಿ ವಿಫಲನಾಗುತ್ತಾನೆ ಎಂಬ ಕುರಿತ ಉಲ್ಲೇಖವಿದೆ. ಹಿಂದೂ ಪಂಚಾಂಗದ ಆನಂದ ಸಂವತ್ಸರ ಬಗ್ಗೆ ದಾಖಲಾಗಿದೆ.

ಆತ ಶ್ಯಾಪವನ್ನು ಕೊಟ್ಟದ್ದು ಈತನ ವಂಶ ನಿರ್ವಂಶವಗಿ ರಾಜ್ಯ ಯಾವತ್ತು ಹಾಳಾಗಿ ಹೋಗಲಿ ಯಂಬದಾಗಿ. ಬಹಳ ದುಃಖದಿಂದ ಶ್ಯಾಪವನು ಕೊಟ್ಟದ್ದರಿಂದ

ದಿಲ್ಲಿ ಸುಲ್ತಾನರಿಂದ ಶ್ಯಾಹಾರು ಈ ಸೀಮೆ ಯಾವತ್ತು ಈತ ಕಟ್ಟಿಕ್ಕೊಂಡದ್ದು ಸಮಾಚಾರವನ್ನು ಕೇಳಿ ಹರಿಹರರಾಯ ಬುಕ್ಕರಾಯಗೇ ದಂಡು ಕಳುಹಿಸಿಕೊಟ್ಟು ಬಳ್ಳಾಳ ಸೀಮೆಯವರವನ್ನು ಕಟ್ಟಿಕೊಂಡು. ಆ ವಿವರಕ್ಕೆ ಬರಶಿ ಕಳುಹಿಸಿಂಬುದಾಗಿ ತಾಕೀದು ಮಾಡಿಸಿ ಕಳುಹಿದ ವಿಷಯದಲ್ಲಿ ಅವರು ಬಂದು ಕೃಷ್ಣಾನದಿ ಬಳಿಯಲ್ಲು ಮೊದಲು ಯುದ್ಧಮಾಡಿದ್ದಲ್ಲಿ ಪಾದಶಾಹಾನ ಕಡೆಯವರು ಮಾಡ್ಸಿ ಹೊದ್ದರಿಂದ ಪುನಹಾ ವಿದ್ಯಾರಣ್ಯರ ಅನುಗ್ರಹದಿಂದ ಶತ್ರುಗಳನ್ನು ಫೌಜು ಯವತ್ತನ್ನು ಕ್ಕೊಂಡು ಬಳ್ಳಾಳರಾಯರ ಜಯಿಸಿ ವಿಜಯನಗರವೆಂಬ ಪಟ್ಟಣವನ್ನು ಕಟ್ಟಿಶಿದ ಶಕೆ ೧೨೫೮ ಧಾತುಸಂವತ್ಸರದಲ್ಲಿ ವುದ್ಧಾರಮಾಡಿ ಈ ಸಂವತ್ಸರದಲ್ಲಿ ವಿದ್ಯಾರಂಣ್ಯರೂ ಈ ಪಟ್ಟಣವನ್ನು ಕಟ್ಟಿಸಿದರು."[೪೮]

**ಹೊಳೆಹೊನ್ನೂರು ಕೈಫಿಯತ್ತು ಸಾರ :** ಹರಿಹರರಾಯರು ಕೈಶಿ ಯಾವತ್ತು ಹೊಳೆಹೊನ್ನೂರು ಶೀಮೆ ಮೂಲ ಯಾವತ್ತು ಕೇಳಿ ತಂನ್ನ ಕಡೆಯವರಿಗೆ ತಾಕೀದು ಮಾಡಿಸಲಾಗಿ. ಅವರು ಹೊಳೆ ಹೊನ್ನೂರಿಗೆ ವಾಂಗ್ಮೂಲ ಯವತ್ತು ಕೇಳಿ ಅವರ ಮೊದಲು ಇದ್ದ ಕೊಟ್ಟೆ (> ಕೋಟೆ)ಗೆ ಸ್ವಲ್ಪ ದೂರದಲ್ಲಿ ಮಣ್ಣು ಕೋಟೆಯು ಕಟ್ಟಿ ಅಲ್ಲಿ ಊರು ಬಸ್ತಿ ಮಾಡಿಸಿ, ಅಲ್ಲಿ ನಾಡಿಗರನ ಕೈ ಬಡಗನಾಡು ಬ್ರಹ್ಮಣರಿಗೆ ಅ(ನಾ)ಡಿಗತನವಂನ್ನು ಕ್ಕೊಟಟು ಮೈಲಾರಲಿಂಗಯ್ಯಗೆ ಬಸವಯ್ಯಗೆ ಶಾಲಿವಾಹನ ಶಕ ೧೨೫೯ನೇ ಈಸ್ವರ ಸಂವತ್ಸರದಲ್ಲ್ಲಿ ಶ್ಯಾಸನವನ್ನು ಬರಸಿಕೊಟ್ಟನು. ಅದರ ಸುತ್ತಲೂ ಈ ಹೊಳೆಹೊಂನ್ನಿನ ನಾಡಿಗನ ಬಳಿಯಲ್ಲಿ ದೆಹಲಿಗೆಗಳನ್ನು ನಂಜರಾಯನ ಅವಾಂತರದಲ್ಲು ಹೋಯಿತು. ಶಾಲಿವಾಹನ ಶಕೆ ೧೨೫೮ ಧಾತು ಸಂವತ್ಸರ ಹರಿಹರರಾಯ ಆದಿಯಾಗಿ ವಿರುಪಾಕ್ಷರಾಯವರಗೆ ಅರಸುಗಳು ೧೫ ಮಂದಿ ಆನೇಗೊಂದಿ ಪ್ರಭುತ್ವಮಾಡಿದರು.[೪೯]

**ಹೊಳೆಹೊನ್ನೂರು ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಹೊಳೆಹೊನ್ನೂರಿನ ಪ್ರದೇಶದಲ್ಲಿ ಮಣ್ಣು ಕೋಟೆಯು ಕಟ್ಟಿಸುವ ಕುರಿತು ಹಾಗೂ ಬಡಗನಾಡು ಬ್ರಹ್ಮಣರ ಪಂಗಡ ಮತ್ತು ಬಾಹ್ಮಣರಿಗೆ ನಾಡಿಗತನ ಕೊಟ್ಟಿರುವ ಬಗ್ಗೆ, ದಾನದ ಶಾಸನ ಬರೆಸುವ ಕುರಿತು ಮಾಹಿತಿ ಇದೆ. ಓಂದೂ ಪಂಚಾಂಗದ ಈಶ್ವರ ಸಂವತ್ಸರ ಕಾಲಘಟ್ಟದಲ್ಲಿ ದಾಖಲಾದ ಘಟನಾವಳಿಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ.[೫೦]

**ಉಡುಗಣಿ ಕೈಫಿಯತ್ತು ಸಾರ :** "೧೦೦ ಯೀಚೆಗೆ ವಿದ್ಯಾನಗರದಲ್ಲೂ ನೂತನ ಪಟ್ಟಣ ನಿರ್ಮಾಣ ಆಳಿದ ದೊರ್‍ರಗಳು ಹರಿಹರರಾಯ ಮೊದಲಾದ ಶಕ ೧೨೧೬ನೇ

ಜಯ ಸಂ/ ಆರಭ್ಯ ಪ್ರಮಾದೀಚ ಸಂವತ್ಸರದ ವರಿಗೆ ಸಂದ ವರುಷ ೧೪೧೫.ಬುಕ್ಕರಾಯರು ಅಗ್ರಹಾರಗಳ ಬಿಟ್ಟ ವಿವರ ೧ ೧೨೯೧ನೇ ಕೀಲಕ ಸಂ/ ಶು ಸನ್ ೧ಕ್ಕೆ ಗ್ರಾಮ ೨ ವಿವರ, ಮುಚಲಿ ಗ್ರಾಮ, ಮುತ್ತಹಳ್ಳಿ ಗ್ರಾಮ, ಸದರಿ ಯಿವರ ಆಳಿಕೆ ವರುಷಾ ೧೦೦ಕ್ಕೆ (>೨೦೦ಕ್ಕೆ ) ವಿವರ, ೧೧೫ ಬಳೆಗಾವೆಯ . . .ವಾಸಿ ಜಯ ಸಂವತ್ಸರದಾರಭ್ಯಾ ಸವ. . . ೮೫ ಉಡುಗುಣಿಯ. . . ಬ್ಯಾವಾಗಿ ವಿರೋಧಿ ಆರಭ್ಯ ಪ್ರಮಾಣ ವಿಜಯ. ೨೦೦."[೫೧]

**ಉಡುಗಣಿ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ :** ಪ್ರಮಾದೀಚ ಸಂವತ್ಸರ ಕಾಲ ಘಟ್ಟದಲ್ಲಿ ಹಿಂದೂ ಪಂಚಾಂಗ ಹರಿಹರರಾಯ, ಬುಕ್ಕರಾಯ ಆಡಳಿ ಕುರಿತು ಅವರು ಆಡಳಿತ ನಡೆಸಿದ ವಿದ್ಯಾನಗರದಲ್ಲೂ ನೂತನ ಪಟ್ಟಣ ನಿರ್ಮಾಣ ಬಗ್ಗೆ ಅಲ್ಲದೆ ಅವರ ನಂತರ ಆಳಿದ ದೊರೆಗಳು ಮಾಹಿತಿಯನ್ನು ಒಳಗೊಂಡಿದೆ. ಬುಕ್ಕರಾಯರು ಅಗ್ರಹಾರಗಳ ಬಿಟ್ಟ ಹೋದ ವಿವರದೊಂದಿಗೆ ಮುಚಲಿ ಗ್ರಾಮಮುತ್ತಹಳ್ಳಿ ಗ್ರಾಮ ಮತ್ತು ಕುರಿತ ಮಾಹಿತಿಯನ್ನು ಒಳಗೊಂಡಿದೆ.

**ಬುಕ್ಕರಾಯ–ಹಳೇಬೀಡು ಕೈಫಿಯತ್ತು ಸಾರ :** "ಬುಕ್ಕರಾಯ ವಿಜಯನಗರ ಸಂಸ್ಥಾನವನ್ನು ವಿದ್ಯಾರಣ್ಯರು ಉದ್ಧಾರ ಮಾಡಿ ಕ್ಷತ್ರಿಯ ವಂಶದ ಚಿ(ಹು)ಕ್ಕ ಬುಕ್ಕರಾಯರೆಂಬುವರಿಗೆ ಪಟ್ಟವ ಕಟ್ಟಿದರು. ಆ ಬಳಿಕ ಆ ರಾಯರು ಅನೇಕ ಸಂಸ್ಥಾನವನ್ನು ಕಟ್ಟಿಸರು, ಆ ವಂಶದವರು.

**ತಾಲುಕ ಕಂಪಿಲಿ ಕೈಫಿಯತ್ತು ಸಾರ :** ಬುಕ್ಕರಾಯ. ವಿದ್ಯಾರಣ್ಯರು ೧೨೫೮ರಲ್ಲಿ ವಿದ್ಯಾನಗರವನ್ನು ನಿರ್ಮಾಣ ಮಾಡಿ, ವಿದ್ಯಾರಣ್ಯರು ಆಳಿದ್ದು ಶಖ ೧೨೮೪ ಪರಿಯಂತ್ರವು. ಯೀ ವಿದ್ಯಾರಣ್ಯರು ದೇಹ ಬಿಡುವ ಕಾಲಕ್ಕೆ ಬುಕ್ಕರಾಯನೆಂಬೊವ ಗೊಲ್ಲನು ಯಿದನು ತಪಸ್ಸು ಮಾಡೋ ಕಾಲಕ್ಕೆ ಬುಕ್ಕರಾಯನೆಂಬೊವ ಗೊಲ್ಲನು ಯಿದನು ಯಿವರು ತಪಸ್ಸು ಮಾಡೋ ಕಾಲಕ್ಕೆ ಹಾಲು ತಂದುಕೊಟ್ಟು ಯಿದ್ದದರಿಂದ ಅವರ್ರು ಅವನ ಮೇಲೆ ಅನುಗ್ರಹ ಮಾಡಿ ರಾಜ್ಯಪಟ್ಟಾಭಿಷೇಕವನ್ನು ಮಾಡಿದರ್ರು."[೫೨]

**ಕಮಲಾಪುರದ ಕೈಫಿಯತ್ತು ಸಾರ :** "ಬುಕ್ಕರಾಯ ಶೃಂಗೇರಿ ಭಟ್ಟ (ಮಾಧವ ಭಟ್ಟ) ಒಂದು ಗ್ರಾಮಕೆ ಕಮಲಾಪುರ ಯಂಬೋ ನಾಮವನ್ನು ಯಿಟ್ಟು ತದನಂತರ ವಿದ್ಯಾರಣ್ಯ ನಗರಯೊಂದು ಪಟ್ಟಣ ನಿರ್ಮಾಣ ಮಾಡಿ, ದೇವಿಗುಡಿಯಲ್ಲಿ ತಪಸ್ಸು ಮಾಡುವ ಸಮಯದಲ್ಲಿ ವಬ್ಬ ಗೊಲ್ಲರ ಬುಕ್ಕರಾಯ ಯಂಬವನು ನೈರುತ್ತದಲ್ಲಿ ಹಾಲು ತಂದುಕೊಟ್ಟು ಯವರಿಗೆ ಬಹು ಉಪಕಾರ ಮಾಡಿಕೊಂಡು ಯರಲಾಗಿಯೇ ಬುಕ್ಕಗೆ

ಪಟ್ಟಾಭಿಷೇಕ ಮಡಿ, ನಿರ್ಮಾಣ ಮಾಡಿದಂಥಾ ಪಟ್ಟಣಕ್ಕೆ ಅಧಿಪತಿ ಮಾಡಿ, ಬುಕ್ಕ ಮಹಾ ರಾಯ ಯೆಂಬ ಹೆಸರುಕೊಟ್ಟು ತಾವು ಪರಂಧಾಮಯಾತ್ರೆ ಮಾಡಿದರು."[೫೩]

**ಕಮಲಾಪುರದ ಕೈಫಿಯತ್ತು ಬಗ್ಗೆ ತಿಳಿದು ಬರುವ ಮಾಹಿತಿ** : ವಿಜಯನಗರದ ದೊರೆ ಬುಕ್ಕರಾಯನು ಗೊಲ್ಲರ ಪಂಗಡಕ್ಕೆ ಸೇರಿದನೆಂಬ ಮಾಹಿತಿ ಕೈಫಿಯತ್ತುಗಳಿಂದ ತಿಳಿದುಬರುತ್ತದೆ ಹಾಗೂ ವಿದ್ಯಾರಣ್ಯ ಎಂಬ ಪಟ್ಟವನ್ನು ನಿರ್ಮಿಸಿ, ದಾನ ದತ್ತಿಯನ್ನು ನೀಡಿರುವ ಉಲ್ಲೇಖ ಇದೆ.

**ಅಂಕನಾಥಪುರಂ ಅರ್ಕೇಶ್ವರ ಸ್ವಾಮಿ ಕೈಫಿಯತ್ತು.**

**ಕೈಫಿಯತ್ತು ಗಳಿಗೆಕೆರೆ (>ಕಂ) ಶಿಲಾಶಾಸನವು ನಕಲು ಕೆ.ಆರ್ ನಗರ** : "ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರಶಂಗಳು ೧೩೮೨ ಸಂವತ್ಸರದಲ್ಲಿ ಪ್ರತಾಪದೇವರಾಯ ಶಾಲಿವಾಹನ ಶಕ ವರಶಂಗಳು ೧೩೮೨ ಸಂವತ್ಸರದಲ್ಲಿ ಪ್ರತಾಪದೇವರಾಯ ಸಂಗಮಕ್ಷೇತ್ರ ಬಂದು ನಿತ್ಯದಾನಾದಿಗಳ ಕೊಡುವ ಸಮಯದಲ್ಲಿ ಚಿಕ್ಕದೀಕ್ಷತರುತೆಂಬವರು ನಿತ್ಯದಾನಕ್ಕೆ ಎಡಗೈಯ ಪೊಡ್ಡಲಾಗಿ. ಆ ದೊರೆ : ಯೀ ಪ್ರಕಾರ ಬ್ರಾಹ್ಮಣ ಎಡಗೈಯ್ಯ ವೊಡ್ಡಬಹುದೆ ಸ್ರೀಯರಿಗೆ ವಿತವ ಯೆಂದು ಕೇಳಲಗಿ, ಯೀ ಚಿಕ್ಕ ದೀಕ್ಷಿತರು ಹೇಳಿದ ಮಾತು ನಮ್ಮ ದಕ್ಷಿಣಹಸ್ತದಲ್ಲಿ ಯಜ್ಞಾಪುರುಷನ ಯಿದ್ದಾನೆ. ಆ ಹಸ್ತದಲ್ಲಿ ಯನು ಯಿಟ್ಟರೂ ದಗ್ದವಾಗಿ ಭಸ್ಮವಾದೀತು: ನಮಗೆ ಕೊಟ್ಟದ್ದು ಅಘಾತಹತವಾಗಿ ಅನಂತವಾಗಬೇಕು. ಅದ್ದರಿಂದ ದಕ್ಷಿಣಹಸ್ತದಲ್ಲಿ ನಿಮಿತ್ಯ ನೀ ಕೊಟ್ಟದ್ದು ಅಘಾತಹತವಾಗಿ ಅನಂತವಾಗಬೇಕು. ಆದ್ದರಿಂದ ದಕ್ಷಿಣಹಸ್ತ ಬಿಟ್ಟು ವಾ, ಹಸ್ತ ದಾನಕ್ಕೆ ವೊಡ್ಡಿದೆಯೆಂದು ಹೇಳಿದ್ದರಿಂದ ಆ ದೊರೆ ಆಶ್ಚರ್ಯಪಟ್ಟು, ಯಿದನ್ನು ತಮಗೆ ಪ್ರತ್ಯವಾಗೋ ರೀತಿ ತೋರಿಸಬೇಕು; ಕೇವಲ ಶಾಸ್ತ್ರ ಸಿದ್ಧವಾದಂತಹದ್ದು ಪ್ರತ್ಯಾಕ್ಷವಾದೀತೇ? ಯಿದರ ಅವಸ್ಯಕವಾಗಿ ನನ್ನ ಮೇಲೆ ದಯವಿಟ್ಟು, ತೋರಿಸಬೇಕು ಯೆಂದು ಆ ದೊರೆ ಕೇಳಲಾಗಿ, ಯೀ ಚಿಕ್ಕದೀಕ್ಷಿತರು ಪರಿಕ್ಷಿಸು, ಯಜ್ಞಾಪುರುಷಾ ಪ್ರತ್ಯಾಕ್ಷವಾದಾನು ಯಂದು(>ದ) ಪ್ರತ್ಯುತ್ತರವನ್ನು ಕೇಳಿ ಯಿವರ ದಕ್ಷಿಣಹಸ್ತದಲ್ಲಿಟ್ಟು ದಿಸಸ್ತ ಅತ್ತಿ (>ದೂದಿ ಹತ್ತಿ) ಸಹಾ ಯಿಟ್ಟು ವುರುವಲಾಗಿ, ಅವರ ಕೈಯಲ್ಲಿ ಯಿಟ ದೂದಿ ಆಸ್ತಿ (>ಹತ್ತಿ) ಸಹಾ ಯಿಟ್ಟು ವುರುವಲಾಗಿ, ಅವರ ಕೈಯಲ್ಲಿ ಯಿಟ ದೂದಿ ಆಸ್ತಿ(>ಹತ್ತಿ ಸಹ ಅಪಿ ಕ್ಷಣಕ್ಕೆ ಜಾಜ್ವಲ್ಯಮಾನವಾಗಿ ಪ್ರಜ್ವಲಮಾನವಾಗಿ ರುವುದನ್ನು ಅ ದೊರೆ ನೋಡಿ, ಆಶ್ಚರ್ಯಪಟ್ಟು ಅತಿ ಸಂತೋಷದಿಂದ ಅವರಿಗೆ ಅಂಪಾ(>ಹಂಪಾ) ಪುರ ಗ್ರಾಮವನ್ನು ದಾರೆಯೆರೆದು ಕೊಡುತ್ತೇನೆ; ಪರಿಗ್ರಹಿಸಿ ನನ್ನ

ಉದ್ಧರಿಸಬೇಕೆಂಬುದಾಗಿ ಪ್ರನಾಮಪುರಸ್ಕರವಾಗಿ ಪ್ರಾರ್ಥಿಸಿದಲ್ಲಿ ಯೀ ಚಿಕ್ಕದೀಕ್ಷಿತರು ಯಿಂತು ಹೇಳಿದರು."[೫೪]

**ಕೈಫಿಯತ್ತು ತಾಲುಕ ಅಜ್ಜಂಪುರ : ದೇವರಾಯ**

**ಕೈಫಿಯತ್ತು ತಾಲುಕ ಅಜ್ಜಂಪುರ:** "ಯಿತ್ತಲಾಗಿ ಸಾಳ್ವ ನರಸಿಂಗರಾಯರ ಆಳಿಕೆಯಲ್ಲಿ ಶಾಲಿವಾಹನ ಶಕ ವರುಷ ೧೪೨೬ನೆ ರಕ್ತಾಕ್ಷಿ ಸಂರದಲ್ಲಿ ಬಂಕನಗಟಗ್ರಾಮವನ್ನು ಚಿಕ್ಕಣಾದ್ಯರಿಗೆ ಸವಿನಾಣ್ಯೆ (> ಸವಿನಯ) ದತಿ ದಾನಧಾರ ಪೂರ್ವಕವಾಗಿ ಕೊಟ್ಟರು. ಯೀ ವರಿಗೂ ನಡದು ಬರುತ್ತಾ ಯಿದೆ. ಯೀ ನರಸಿಂಗರಾಯರ ಕಾಲದಲ್ಲು ಭೂಪತಿ ರಾಮರಾಯೆಉ ಶಿವನೇರಿಗ್ರಾಮವು ಪ್ರಾಕು ಸಣ್ಣದಾಗಿ ಯಿದ್ದದರಿಂದ ದೊಟ್ಟದಾಗಿ ಗ್ರಾಮವನ್ನು ಕಟ್ಟಿ ಕೋಟೆ, ಕೊತ್ತಲ ಮುಂತಾಗಿ ಮಾಡಿದನ್ನು. ರಾಯರು ಯೀಗಾ ರಾಯರಪಾದ ಕಣಿವೆಯಿರುವ ಬಳಿಗೆ ಬಂದು ನಿಂತು ನೋಡಿದಲ್ಲಿ ಯೀ ರಾಯರಪಾದ ಕಣಿವೆಯಿರುವ ಬಳಿಗೆ ಬಂದು ನಿಂ ತಉ ನೋಡಿದಲ್ಲಿ ಯೀ ಶಿವನೇರಿಯಂಬ ಗ್ರಾಮ ಉ ಮುಂದಕ್ಕೆ ಮೂರು ಹೆಜ್ಜೆ ಹೋದದ್ದರಿಂದಾ ಆಗಾ ನಡೆ ಶಿವನೆ'ಯಂಬದಾಗಿ ಹೆಸರಿಟ್ಟು ರಾಯರು ಅಲ್ಲಿ ತಮ್ಮ ಯರಡು ಪಾದವನ್ನು ಶಿಲೆಯನ್ನು ಕಡಶಿಯಿಟ್ಟು ತಿರುಗಿ ಹಿಂದಕ್ಕೆ ತಮ್ಮ ಪಟ್ಟಣಕ್ಕೆ ಹೋದರು ಆದಾರಭ್ಯ ಯೀ ಕಣಿವೆಯು ರಾಯರಪಾದ ಕಣಿವೆಯನೆನ್ನಿಸಿ ಕೊಳ್ಳುತ್ತಾಯಿದೆ ಎಂಬುದಾಗಿ ಕರ್ನಲ್ ಮೆಕೆಂಝಿಯ ಕೈಫಿಯತ್ತುಗಳಲ್ಲಿ ಉಲ್ಲೇಖಿಸಲಾಗಿದೆ."[೫೫]

**ಅಚ್ಯುತರಾಯ**

**ವಸುಧಾರೆ ಗ್ರಾಮದ ಕೈಫಿಯತ್ತು :** "ಅಚ್ಯುತರಾಯರ ಕಾಲದಲ್ಲಿ ಪುಟನಾಯಕಯಂಬವನು ನರಪತಿ ಅರಸಗಳ ಬಳಿಯ ಹಡಪದ ಕೆಲಸದಲ್ಲಿ ಯಿದ್ದು ಕೊಂಡು ಯಿದ್ದನು. ಅವನ ಜ್ಯಾತಿ ತೆಲುಗ ಬಣಜಿಗನು. ಯಿವನ ಮಗ ಕೃಷ್ಣಪ್ಪನಾಯಕ, ಯಿವನ ಮಗ ವೆಂಕಟಾದ್ರಿನಾಯಕ, ಯೀ ಮೂರು ಮಂದಿಯ ಆನೇಗೊಂದೀ ರಾಯರ ಬಳಿಯ ಬೇರೆ ಬೇರೆ ಚಾಜುಯ್ಲ್ಯ (ಚಾಕ್ರಿಯಲು) ವೆಂಕಟಾದ್ರಿನಾಯಕಾ ಯಂಬುವನ ಮದುವೆ ಹೆಂಡತಿಗೆ ಪುತ್ರಸಂತಾನವಿಲ್ಲಾ. ಯಿವನು ಯಿಟ್ಟು ಯಿದಂತ್ತಾ ಶ್ರೀಗೆ ( >ಸ್ತ್ರೀಗೆ) ಮಾತ್ರಾ ವಬ ಕುಮಾರಯಿದ್ದನ್ನು ವೆಂಕಟಪ್ಪನಾಯಕ ಯಿವನ ಶೀಮೆ ಯಾವತ್ತು ಜಪ್ತ ಆದಮೇಲೆ ತನ್ನ ತಾಯೀನ ಕರದುಕೊಂಡು, ರಹಸ್ಯವಾಗಿ ಪರಾಯಿ ಶೀಮೆಗೆ ಹೋದನು."[೫೬]

**ತಲಕಾಡು ಕೈಫಿಯತ್ತು ೧ ಮೇಕೆಂರಿಝಿ ಸಂಪುಟ** : ೧೬೨, ಉಲ್ಲಕ್ಷ ಸಾಕೆಬರವರು ಕಡೆಯಿಂದಾ ತಂದದ್ದರ ನಕಲು ತಾ. ೩೦ ನೇ ಮಹೆ ಡಿಶಂಬರ ಸ ೧೮೦೬ . . ಮೊಕ್ಕಮ ಮೈಸೂರು.

**ತಳಕಾಡು ತಾಲೂಕ ಅಗ್ರಾಹಾರ ಕೈಫಿಯತ್ತು** : "ಹಂಮಿಗೆ ಅಗ್ರಹಾರ ಶಾಲಿವಾಹನ ಶಕ ವರುಷ ೧೪೪೮ನೇ ವ್ಯಯನಾಮ ಸಂವತ್ಸರ ಶ್ರಾವಣ ಶು ೫ಲ್ಲು ಚತುಸಮುದ್ರಪರಿಯಿಂದಾ ಶ್ರೀಕೃಷ್ಣದೇವರಾಯ ಮಹಾರಾಯರುà³ ಆಷಾಡ ಶು.೧೫ ಚಂದ್ರಪರಾಗ ಪುಣ್ಯಕಾಲದಲ್ಲು ತಿಮ್ಮಣ್ಣ ಉಪಾಧ್ಯೆಯರ ಮಕ್ಕಳು ಲಕ್ಷ್ಮಣ ಉಪಾಧ್ಯರಿಗೆ ಉಮ್ಮತುರ್ರು ಗವಡಿಕೆ ಸಲ್ಲುವ ಕೊಯಾರು (>ಕಲ್ಲಯ್ಯನೂರು) ಸ್ಥಳದ ಪಶ್ಚಿಮವಾಹಿನಿ ತೀರದ ಹಂಮಿಗೆ ಗ್ರಾಮವನ್ನು . . . ದಾರಾಪೂರ್ವಕವಗಿ ಕೊಟ್ಟುಯಿದ್ದ ಬಗ್ಗೆ ಗ್ರಾಮಾ ಯೋಚೆಗೆ ವಿದ (>ಮಾಡಿದ ) ವೃತ್ತಿ ೨೫ಕೆ ೧೨೫೬೦"[೫೭]

**ಬೆಟ್ಟದ ಕೋಟೆ ಕೈಫಿಯತ್ತು**: "ಯೀ ರಾಯಪಟ್ಟ ಆರುವತ್ತೈದು ಪಟ್ಟದಲ್ಲಿ ಕೃಷ್ಣರಾಯರ ತಂದೆ ನರಸಿಂಗರಾಯರು ದಿವಸ್ತಿದಲ್ಲಿ ನಿಂತ ರಾಜ್ಯ ೩೧೦೦೦೦೦೦ ಮೂವತ್ತೊಂದು ಕೋಟಿ. ಇವರ ಮಗ ಕೃಷ್ಣರಾಯರು ಸಾಣೂರ ತಿಂಮ್ಮಮಂತ್ರಿ ಸಹಾ ಸಾಧಿಸ್ತರಾಜ್ಯ ೫೦೦೦೦೦೦೦ ಐದು ಕೋಟಿ ಉಭಯಂ ಯಂಭತ್ತೊಂದು ಕೋಟಿ ರಾಜ್ಯವಂನ್ನು ಧರ್ಮದಿಂದ ಪರಿಪಾಲನಮಂ ಮಾಡಿಕೊಂಡು ಯಿರುವ ಕಾಲದಲ್ಲಿ ಸಾನೂರ ತಿಂಮ್ಮಮಂತ್ರಿ ಆಲೋಚನೆಯಿಂದ ಕೃಷ್ಣರಾಯರು ರಾಜ್ಯಕ್ಕೆ ನವಢಣಾಯಕರ ಮಾಡಿ. ಯೀ ಢಣಾಯಕರಿಗೆ ಜನ ೧ ಕ್ಕೆ ವಂಬತ್ತು ವಂಬತ್ತು ಕೋಟಿ ರಾಜ್ಯವಂ ಹಂಚಿಕೊಡುವಲ್ಲಿ, ಯೀ ದಕ್ಷಿಣ ದೇಶದಲು ಸೋಮಂಣಢಣಾಯಕರಿಗೆ ಸೇರಿದ ಕಾರಣ ಯೀ ಢಣಯಕನು ಯೀ ದಕ್ಷಿಣ ದೇಶಕೆ ಸೇರಿದ ಉಂಮತ್ತೂರಿಗೆ ಬಂದು, ಅದನ್ನು ಸಂಸ್ಥಾನವಂ ಮಾಡಿ, ಅಲ್ಲಿ ನಂಜರಾಜವಡೆಯರನ್ನು ಯಿಟ್ಟು ಢಣಾಯಕವಡೆರು ಯೀ ದಕ್ಷಿಣದೇಶಕೆ ಬಂದು ಗೋವರ್ಧನಕ್ಕೆ ಪ್ರತಿನಾಮಧೇಯವಾದ ಕಮಲಾಚಲಪರ್ವತಕ್ಕೆ ಬಂದು ಸ್ವಾಮಿಯ ಸೇವೆಯಂ ಮಾಡಿ ತ್ರಿರಾತ್ರಿ ಅಲ್ಲಿ ವಾಸವಂ ಮಾಡುವ ಕಾಲದಲ್ಲಿಯಿವನಿಗೆ ಸ್ವಪ್ನವಾದ ಕಾರಣ ಸ್ವಪ್ನಾಭಿಪ್ರಾಯವನ್ನು ಮಂತ್ರಿಗಳ ಕೂಡ ಆಲೋಚಿಸಿ, ಯೀ ಸ್ವಪ್ನ ಪ್ರಕಾರಕ್ಕೆ ಆ ಕಮಲಾಚಲಕ್ಕೆ ಯರಡು ಸುತ್ತಿನ ಕೋಟೆಗೆ ಯೆಂಟು ಯೇಳು ಬಾಗಿಲು ಐದು ಯೀ ಗಿರಿಯಲ್ಲಿ ಅಷ್ಟ ತೀರ್ಥವಿಹುದು. ಯೀ ಹಂಸತೀರ್ಥದಲ್ಲಿ ಕಾಗೆ ಮುಳುಗಿ ಹಂಸಪಕ್ಷಿಯಾಯಿತು. ಯೀ ಮೇರೆಗೆ ರಾಜ್ಯವನ್ನು ಆಳಿಕೊಂಡು ಯಿರುವಲ್ಲಿ, ಶೆಖೆ ೫೨೦ ವರುಷ ಸಂದ ಮೇಲೆ ಯಿವರ ಭಾವಮೈದ ಚಂದಪ್ಪಢಣಾಯಕನು ಹಿಂಡಿ ಸಂಡಿಗೆ ನಿಮಿತ್ಯವಾಗಿ ಯಿಬ್ಬರಿಗೂ ಕಲಹ ಬಂದು ಯೀ

ಕೋಟೆಯನ್ನು ಹಲ್ಲಾಮಾಡಿದ್ದರಿಂದ ಶತ್ರುವಶವಾಗಬಾರದೆಂಬುದಾಗಿ ಯೀ ಢಣಾಯಕನು ಕಮ್ರರಿಗೆ ಬಿದ್ದು ಮೃತನಾಗಿ ಹೋದನು ತದನಂತರದಲ್ಲು ಯಿ ಚಂದಪ್ಪಢಣಾಯಕನು ಕುಡಲೂರ ಸಂಸ್ಥಾನದ ತ್ರಿಕದಂಬಪುರದಲ್ಲಿ ಶಾಲಿವಾಹನ ಶಕ ವರುಷ ೬೬೯ ವರ್‍ರಿಗ್ಯೂ ಯಿವರ ವಂಶಸ್ತರು ಆಳಿದರು.

ಯೀ ತದನಂತರ ಭೋಜರಾಜ ಮುಂತಾದ ರಾಯರುಗಳು ರಾಜ್ಯವನ್ನಾಳುವಲ್ಲಿ ಚತುರ್ದಿಕ್ಕುಗಳಿಗು ನಾಲ್ಕು ಮಂದಿ ಸಿಂಹಾಸನಾಧಿಪತಿಗಳ ಮಾಡಿ, ದಕ್ಷಿಣ ದೇಶದ ಸಿಂಹಾಸನಾಧಿಪ್ತಯವನ್ನು ವಿಜಯನಗರದ ರಾಯರಿಗೆ ನರಪತಿಯೆಂಬ ನಾಮವಂ ಕೊಟ್ಟು ದಕ್ಷಿಣದೇಶಕಧಿಪತಿಯಾಗಿ ಮಾಡಿದರು."[೫೮]

**ಅಂತಾಪುರ ಕೈಫಿಯತ್ತು :** "ಕ್ರಿಷ್ಣರಾಯರಿಗೆ ಪಟ್ಟವಾಗಿ ಪ್ರಾಗ್ದೇಸಕ್ಕೆ ತೆರಳುವ ವೇಳೆಯಲ್ಲಿ ರಾಜ್ಯದೊಳಗೆಯಿದ್ದ ಪಾಳೆಗಾರರು ಕರಿಸಿ, ಪೌಜು ಮಂದಿ ಮಾಡಿಕ್ಕೊಂಡು ಹೋಗಿ ತಾವು ಜೈಶಿ ಬಂದು ಯೀ ಪಾಳೆಗಾರರಿಗೆ ಅವರವರ ಮಾರ್ಯಾದೆ ಪೂರೈಕೆ ಮಾನಪಾನಗಳ ಮಾಡಿ ಕಳುಹಿಸಿದ ವೇಳೆಯಲ್ಲಿ, ಮೂಲಪುರುಷ ಕೊಮಾರರಾಮನ ವಂಶಸ್ಥರು ಬೊಮ್ಮಂತರಾಜ ಮರಳನವರ ವಂಶಸ್ಥರಿಗೂ ಮರ್ಯಾದಿ ಮಾಡೋ ವ್ಯಾಳೆಯಲ್ಲಿ ಬಿನ್ನಹ ಮಾಡಿಕೊಂಡರು ನಮಗೆ ಪೂರ್ವದಲ್ಲಿ ನಾಡದಳವಾರಿಗೆ ಕಾವಲಿ ಸ್ವಾಸ್ಥಿಬಾಗದ್ದು ಸುದ್ದಾ ನಡಉತ್ತಾಯಿತ್ತು. ಅದೆ ಪಾಲಿಸಿದರೆ ಪಾಲಿಸಬೇಕೆಂದು – ಸಂತೋಷ ಪಟ್ಟ ಕೃಷ್ಣರಾಯ ಕೊಟ್ಟ ತಾಲೂಕು ವಿವರ, ಕುತ್ತಾನೆ, ಸೊಂಡೂರು, ಜೆರಿಮಲ, ವನು (ಡ್ಡು) ದರೋದಿ (ಜ) ಸಹಾ, ಗುಡೆಕೊಟೆ, ಬಾಣರಾವಿ, ಉಜನಿ ಈ ೭ ತಾಲುಕ್ಯ ಜಾಗೀರು ಕೊಟ್ಟು ನಾಡ ದಳವಾರಿಕೆ ಕಾವಲ ಸ್ವಾಸ್ತಿ ಸುದ್ದಾ ಮಾಡಿಕೊಟ್ರು."[೫೯]

**ಹತ್ತಿ ಬೆಳಗಲ್ಲು ಕೈಫಿಯತ್ತು :** "ಯೀ ವೂರು ಬೆಟ್ಟದ ಮ್ಯಾಲೆ ಕೋಟೆ ಮನೆ ಮುಂತಾದ್ದವು ಕೆಲವು ಕಾಲದ ಮ್ಯಾಲೆ ಖಿಲವಾಗುತ್ತಾ ಬಂತು. ವಿಜಯನಗರದ ಅರಸರ ಕೆಳಗೆ ನಡೆಯುತಾಯಿರುವಾಗ್ಯೆ ಕ್ರಿಷ್ಣರಾಯ ಅಚ್ಯುತರಾಯ ಸದಾಶಿವರಾಯರ ಕಾಲದಲ್ಲೂ ಯೀವೂರಿಗೆ ಪಶ್ಚಿಮ ೧೦ ಹರದಾರಿ ಮ್ಯಾಲೆ ಅಗ್ರಹಾರ ಕಟ್ಟಿಸಿ ಬ್ರಾಹ್ಮರಿಗೆ ಸರ್ವಮಾನ್ಯವಾಗಿ ಬಿಟ್ಟರು. ಅವರ ಕಾಲದಲ್ಲೂ ಶಿಲಾಶಾಸನ ಹಾಕಿದ್ದು, ಮೂರು ಶಾಸನ ಯಿಥೆ, ಅದರಲ್ಲಿ ಶಾಲಿವಾಹನ ಶ ೧೪೩೨ ನೇ ಪ್ರಜೋತ್ಪತ್ತಿ ಸಂವತ್ಸರ ಯಂದು ಶಾಸನದಲ್ಲಿ ಯಿದೆ, ಯರಡನೆ ಶಾಸನದಲ್ಲು ಶಾಲಿವಾಹನ ಶಕ ೧೪೮೧ ನೇ ಶಿದ್ದಾರ್ತಿ ಸಂವತ್ಸರ ಯಂದು ಯಿಥೆ, ಯೀ ಯರಡು ಶಾಸನದಲ್ಲು ಶಕ ಸಂವತ್ಸರ

ವರಿಗೆ ಅಕ್ಷರಗಳು ತಿಳಿಯುತಾ ಯಿದೆ. ಕಡಿಮೆ ಅಕ್ಷರಗಳು ವೋದಲಿಕ್ಕೆ ಅಕ್ಷರಗಳು ಬರೋದಿಲ್ಲಾ. ಅಕ್ಷರಗಳು ಶಿಥಿಲವಾಗಿ ಹೋಗಿ ಯಿಥೆ ಆದ್ದರಿಂಧಾ ದಾಖಲಾಯಿರೋ ಬಗ್ಯೆ ಬರದು ಯಿದ್ದೇನೆ."[೬೦]

**ಚಿಕ್ಕಮಗಳೂರು ಕೈಫಿಯತ್ತುಗಳು** : ಚಿಕ್ಕನಹಳ್ಳಿಯಂಬಾ ಹೆಸರು ತೆಗೆದು ಚಿಕ್ಕಮಗಳೂರು ಯಂಬದಾಗಿ ಹೆಸರು ಯಿಟ್ಟು ಯಾವತು ಮೊಕರು ಮಾಡಿಶಿದರು.

**ರಾಮರಾಯ**

**ಕೈಫಿಯತ್ತು ತಾಲೂಕು ಅಜ್ಜಂಪುರ** : "ರಾಮರಾಯನ ಕಾಲದಲ್ಲಿ ಶಕವರುಷ ೧೪೮೦ ರಕ್ತಾಕ್ಷಿ ಸಂ|ಲ್ಲು ರಾಣಾ[ಜ+]ಗ ದೇವರಾಯರಿಗೆ ದಯಪಾಲಿಸಿದ್ದರಿಂದ ಯಿವರು ಮೊದಲು ಚೆನ್ನಪಟ್ಟಣದಲ್ಲಿದುಕೊಂಡು ಗಡಿ ೪೬ ಗಡಿ ಶೀಮೆಯನ್ನು ಅಳಿದು. ಶಕವರುಷ ಸಿದ್ಧಾರ್ಥಿ ಸಂ| ಆರಭ್ಯಾ ಶಕವರುಷ ೧೫೨೧| ನೆ ಸವುಮ್ಯ ಸಂ|ವರಿಗೆ ಆಳಿದ ವರುಷಾ೫೧."[೬೧]

**ಹೊಳೆಹೊನ್ನೂರು ಕೈಫಿಯತ್ತು** : ತರುವಾಯ ಶಕ ೧೪೧೨ ನೇ ಸಾಧಾರಣ ಸಂವತ್ಸರದಾರಭ್ಯ ೧೪೮೬ ರಕ್ತಾಕ್ಷಿ ಸಂವತ್ಸರದ ಮಾಘ ಬಹುಳ ೧೪ ವರುಷಗಳು ಆಳುವಲ್ಲಿ ಅರಸುಗಳು ಆನೆಗೊಂದಿ ಸಂಸ್ತಾನವನ್ನು ೮ ಮಂದಿ. ೨೪–೮ ತಿಂಗಳು ರಾಮರಾಯರ ಕಾಲ ಆಳಿದ ವಿವರ.

ಪ್ರಭುತ್ವ ಅಂತ್ಯದಲ್ಲಿ ಈ ಸದಾಶಿವರಾಯರ ಕಾಲಕ್ಕೆ ಅರಗದ ನಾಡು ವೆಂಟೆ. ಗುದ್ದಿನಾಡು ವೆಂಟೆ ಅಮರಮಾಗಣಿಯಾದಿ ಇಕ್ಕೇರಿ ಭದ್ರಗ ನಾಮ ಸದಾಶಿವರಾಯ ಶಾಲಿವಾಹನ ಶಕ ೧೪೬೭ ವಿಶ್ವಾವಸು ಸಂವತ್ಸರದಲ್ಲಿ ಕೊಟ್ಟುಬಿಟ್ಟಾ. ಆನೆಗೊಂದಿ ಸದಾಶಿವರಾಯನ ಕಾಲದಲ್ಲಿ ರಾಮರಾಯರು ಪ್ರಭುತ್ವ ಮಾಡುವಲ್ಲಿ ಚಿಕ್ಕದೇವರಾಯನಿಗೆ ಕೊಟ್ಟನ್ನು. ಶಾಲಿವಾಹನ ಶಕ ೧೪೭೬ ಆನಂದ ಸಂವತ್ಸರ ಚಂನ್ನಪಟ್ಟಣ ಮುದುರು ರಾಜಧಾನಿ ಮಾಡ್ಸಿ ಹೊಳೆಹೊನ್ನೂರು ಶೀಮೆ ಯಾವತ್ತು ೫೪ ವರುಷ ವರಿಗೆ ಆಳಿದು.

**ವಸುಧಾರೆ ಗ್ರಾಮದ ಕೈಫಿಯತ್ತು** : "ರಾಮರಾಯರ ಪ್ರಭುತ್ವದಲ್ಲಿ ಯೀ ಬೇಲೂರು ಶೀಮೆಯು ಅಮರ ಮಾಗಣೆಯಾಗಿ ವಬ್ಬ ಕ್ಷತ್ರಿಯದ ವಿಕ್ರಮಾರಾಯನು ಆನೆಗೊಂದೀ ಸಂಸ್ಥಾನದಲ್ಲಿ ಬಹಳ ದಿವಸಾ ಕಾದುಕೊಂಡು ಯಿದ್ದರಿಂದಾ ಯೀತಗೆ ತುಂಟರು ಯೀ ವಿಕ್ರಮರಾಯನು ರಾಮರಾಯರ ಕೆಳಗೆ ಕೆಲವು ವರುಷ ಪ್ರಭುತ್ವಮಾಡಿ ಆಮೇಲೆ ಸ್ವರ್ಗಸ್ಥನಾದನು. ಯೀವನಿಗೆ ಸಂತಾನವಿಲ್ಲವಾದ್ದರಿಂದ ಶೀಮೆಯಾವತ್ತು

ಆನೆಗೊಂದೀಯವರು ಜಪ್ತಿ ಮಾಡಿಕೊಂಡರು. ಆಮೇಲೆ ಆನೆಗೊಂದಿ ಸಂಸ್ಥಾನದಲ್ಲಿ ಸಂಗೀತಗಾರ ಭಿಕ್ಕಾರಿ ರಾಮಪ್ಪಯಂಬವನು ವಿದ್ಯದಲ್ಲಿ ಅರಸಗಳಿಗೆ ಮೇಚಿಶಿದ್ದರಿಂದ ಅರಸುಗಳು ಯೀವನಿಗೆ ಬೆಲೂರು ಪಯ್ಕಿ ಕಸಬ ಬೇಲೂರು ೪೦ ಸಾವಿರಾರು ಅಮರ ಮಾಗಣಿಯಾಗಿ ಕೊಟ್ಟರು. ಅವನು ವರುಷ ಪ್ರಭುತ್ವವಂನ್ನು ಮಾಡಿದನು. ಯಿವನಿಗೆ ಯಿಬ್ಬರು ಹೆಂಡತೆಯರು. ಯಿದರಲ್ಲಿ ವಬಳು ನಗರದ ಸಂಸ್ಥಾನದ ಪ್ರಧಾನಿ ಮಗಳು ೧. ಯರಡನೆಯವಳು ವೈಗರು [>ಐಗೂರು] ಗೊಪಾಲನಾಯಕಾಯಂಬವನು ಅರಸು ಪ್ರಧಾನಿ ಮಗಳು ೨. ಯೀ ಮೆರಿಗೆ ಯಿರುವಾಗ್ಯೆ ಭಿಕಾರಿ ರಾಮಪ್ಪಯ್ಯನು ಮೃತವಾದ ಮೇಲೆ ವೈಗೂರು [>ಐಗೂರು] ಗೊಪಾಲನಾಯಕಾಯಂಬವನು ಶೀಮೆ ಯಾವತ್ತು ತನ್ನ ಸ್ವಾಧೀನ ಮಾಡಿಕೊಂಡು ೧ ವಂದ್ದು ವರುಷ ಪ್ರಭುತ್ವಾ ಮಾಡಿದನು."[೭೨]

**ಯಗಟಿ ಕೈಫಿಯತ್ತು** : "ನರಪತಿವಂಶಕ್ಕೆ ಅಳಿಯನಾದಂತಾ ಅಳಿಯ ರಾಮರಾಜರು ಮುಸಲಮಾನರಿಗೆ ಪ್ರವರ್ತಕ ಮಾಡಲಾಗಿ, ಅವರು ಯೀ ವರ್ತಮಾನ ಕೇಳಿ ಸಯಿಸಲಾರದೆ ಬಂದು ರಾಜ್ಯವನ್ನು ಧ್ವಂಸಮಾಡಿ, ಆ ರಾಮರಾಜನವರ ತಲೆ ಕೊಯಿದು ಜಂಡೇಕೆ ಕಟ್ಟಿದರು. ಆಮೇಲೆ ಮೊಗಲಾಯಿ ಕೆಲಉ ಕಾಲವಿತ್ತು. ನರಪತಿ ವಂಶಸ್ತರು ಸದಾಶಿವರಾಯಗೆ ಪಾಕ್ಷಾನವರು ನೇಮಕಾ ಮಾಡಿ ಕೊಟ್ಟರು. ಆ ತರುವಾಯ ಪುನಹಾ ಮೊಗಲಾಯಿ ಆಯಿತು. ಆ ವೇಳೆಯಲ್ಲಿ ಮರುಳೆನವರ ವಂಶಸ್ಥ ಜಿನ[>ಚಿನ್ನ] ರಾಜನ ಮಗ ಬಳಸನಾಯಕನು ಯೀ ದೇಶ ವಡ್ಡಿ[>ಡ್ಡಿ] ನಸೀಮೆಯನ್ನು ಜೋರಾವಾಯಿಯಿಂದ ದರೋದಿ ಸಹಾ ಠಾಣ್ಯ ಹಾಕಿಕೊಂಡು, ದರೋದಿಗೆ ಬರಲಾಗಿ, ದರೋದಿಗೆ ಮುತ್ತಿಗೆ ಹಾಕಲಾಗಿ, ಆನೆಗೊಂದಿ ದೊರಿಗಳ ಬಂದು ಕಡದು ಮತ್ತಿಗೆ ಯೆಬ್ಬಿಸಿದರು. ಮದಿಕೆರಿನಾಯಕನು ಚಿತ್ರದುರ್ಗಕ್ಕೆ ಹೋದನು. ಮದಿಕೆರಿನಾಯಕನ ಠಾಣ್ಯ ವಡುಯಿತಾಯಿತನುಲಾಗಿ ಮದಿಕೆರಿನಾಯಕನು ಹಲವು ಕಾಲ ಅನುಭವಿಸಿದನು. ಆತನ ಮಗ ಕಸ್ತೂರಿ ರಂಗಪ್ಪನಾಯಕ ಕೆಲವು ಕಾಲ ಆಳಿದನು. ಆತನ ಮಗ ಮದಿಕೆರಿನಾಯಕನು ವಿಳಂಬ ಸಂವತ್ಸರದ ಪರಿಯಂತ್ರ ಆಳಿದನು. ಯೀಚಿಗೆ ದೊಡ್ಡ ನವಾಬರ ಠಾಣ್ಯ ಆಯಿತು. ಆತನು ಕೆಲಉ ದಿವಸ ಅನುಭವಿಸಿದನು. ಆತನ ಮಗ ಟೀಪುಸುಲ್ತಾನನು ಸೌಮ್ಯ ಸಂವತ್ಸರದ ಪರಿಯಂತ್ರ ಅನುಭವಿಸಿದನು. ಪುನಹಾ ನರಪತಿ ತಿರುಮಲರಾಯ ಸಾಧಾರಣ ಲಾಗಾಯಿತು. ಪರಿಧಾವಿ ಸಂತ್ಸರದ ಮಾಘ ಮಾಸದವರಿಗೆ ಬಾಣರಾವಿ ರಾಜ್ಯಾ ಸಾಧಿಸಿ ಅನುಭವಿಸಿದರು. ಪುನಹಾ ಟೀಪುಸಲ್ತಾನ್ನವರು ಒಬ್ಬರಗಂಗನವಾನೆಂಬ ಆತಮಿರಕ ಮರಧಿಖಾನ್ನನ ಫೌಝು ಸುದ್ಧಾ ಬಂದು ಠಾಣ್ಯ ಹಾಕಿದರು. ಸಿದ್ದಾರ್ತಿ ಸಂವತ್ಸರದ ಜೇಷ್ಠಮಾಸದಲ್ಲೂ ನರಪತಿ

ತಿರುಮಲರಾಯರು ಬಂದು ಠಾಣ್ಯ ಆಯಿತು. ಸಿದ್ದಾರ್ತಿನಾಮ ಸಂವತ್ಸರದ ಕಾರ್ತಿಮಾಸದ ಪರಿಯಂತ್ರಕ್ಕೂ ಠಾಣ್ಯಯಿತ್ತು. ಆಮೇಲೆ ಕುಂಪಣಿ ಸರಕಾರ ಠಾಣ್ಯ ಆಯಿತು. ಮಾರ್ಗಶಿರ ಮಾಲಗಾಯಿತು. ಶುಕ್ಲ ಸಂವತ್ಸರದ ಪುನಹಾ ಸರಕಾರ ಯಿಂಗ ರೇಜಿಅಮಲು ನಡುತ್ತಾಯಿದೆಯೆಂದು ಬರಕೊಟ್ಟು ಕೈಫಿಯತು."[೬೩]

**ವೆಂಕಟಪತಿರಾಯ**

**ಆರ್ಕಾಡ ಸಂಸ್ಥಾನದ ಕೈಫಿಯತ್ತು** : "ಪೂರ್ವದಲ್ಲಿ ಶ್ರೀ ವಿದ್ಯಾರಣ್ಯಸ್ವಾಮಿಗಳವರ ಅನುಗ್ರಹದಿಂದ ವಿಜಯನಗರ ಪಟ್ಟಣ ಕರ್ನಾಟಕ ಸಂಸ್ಥಾನ ನರಪತಿಯಾದ ಬುಕ್ಕರಾಯರು, ಅವರ ತಮ್ಮ ಚಿಕ್ಕರಾಯರು, ಅವರ ವಂಶದ ನರಸಿಂಹರಾಯರು, ಅವರ ಕುಮಾರ ಕೃಷ್ಣರಾಯರು, ಅವರ ಅಳಿಯ ರಾಮರಾಯರು ವಂಶಸ್ಥರಾದ ವೆಂಕಟಪತಿರಾಯರೆಂಬವರು ವಿಜಯನಗರ ಪಟ್ಟಣವನ್ನು ಬಿಟ್ಟು ... ಸಲತಲತು ಮಾಡಿಕೊಂಡು ... ದೊರೆತನ ಮಾಡುತ್ತ ಇದ್ದು, ವಂದು ದಿವಸ ತಿರುಪತಿಗೆ ದೇವರ ಸೇವೆ ನಿಮಿತ್ತ್ಯ ತನ್ನ ಫವುಜು ಅಹಲೇಕಾರರು ತನ್ನ ಕೈಕೆಳಗಣ ಎಪ್ಪತ್ತೆರಡು ಜನ ಮುಖಂಡ ಪಾಳ್ಯಗಾರರು ಮುಂತಾದವರನ್ನು ಸಂಗಡ ಕರೆದುಕೊಂಡು ಬಂದು ಇದ್ದದ್ದರಿಂದ, ಆತನ ಸೂಳೆ ದೊಡ್ಡ ಭೋಗಸಾನಿಯು ಚೇತಪಟ್ಟಿ ಚೆಂಗಲ್ಪಟ್ಟಿ ಪಾಳ್ಯಗಾರ ರಂಗಪತಿರಾಜನ ಮೇಲೆ ದೃಷ್ಟಿಯಿಟ್ಟದ್ದರಿಂದ ಆತನು, ತಮ್ಮ ಧಣಿಯಿಟ್ಟುಕೊಂಡ ಸೂಳೆಯು ತನಗೆ ತಾಯಿ ಸಮಾನ ವೆಂಬುದಾಗಿ ಒಪ್ಪದೆ ಹೋದ ಕಾರಣ, ಆಕೆ ಮರೆಮಾಚಿ ಮತ್ತೊಂದು ಪ್ರಕಾರ ವೆಂಕಟಪತಿರಾಯರ ಸಂಗಡ ಕ್ಷುದ್ರಗಳ ಹೇಳಿದ್ದರಿಂದ, ವೆಂಕಟಪತಿರಾಯರವರಿಗೆ ರಂಗಪತಿರಾಜನ ಮೇಲೆ ಸಿಟ್ಟು ಬಂದು, ಉಭಯತ್ರರಿಗೂ ಯುದ್ಧವಾಗಿ ವೆಂಕಟಪತಿರಾಯರ ಫವುಜು ಸುಮಾರು ಹತ್ತು ಲಕ್ಷ ಜನ ಪರಿಯಂತ ಇದ್ದದ್ದು ಸಿಕತ್ತಾಗಿ, ರಂಗಪತಿರಾಜನ ಹದಿನಾರು ಸಾವಿರ ಫವುಜಿನ ಒಂದು ಪತ್ತೆಯಾಗಿ ವೆಂಕಟಪತಿರಾಯರು ಅವರ ಸೂಳೆ ದೊಡ್ಡ ಭೋಗಸಾನಿ ಮುಂತಾದವರು ರಂಗಪತಿರಾಜನ ಹಸ್ತಗತವಾದ್ದರಿಂದ, ರಂಗಪತಿರಾಜನು ದೊಡ್ಡಭೋಗಸಾನಿಯ ಮೊಲೆಗಳ ಕುಯಿಸಿ ಕೊಂದು ಹಾಕಿಸಿ ಬಿಟ್ಟನು.

ಸದರಿ ಚೇತಪಟ್ಟಿ ಚಂಗಲ್ಪಟ್ಟಿ ರಾಜ್ಯವನ್ನು ರಾಯರು ತಿಮ್ಮರಾಯನ ಭಾವಮೈದನಾದ ಮಾಕರಾಜಗೆ ಕೊಟ್ಟು, ಫವುಜು ಸಹ ತಾವು ಪೆನುಗೊಂಡೆಗೆ ಪೋಗಿ ತಲುಪಿದರು. ಪೂಲರಂಗನ್ನನು ದಿಳೀ [>ಳ್ಳಿ] ಪಾದಷಾಯರಿಗೆ ಅರಿಕೆ ಮಾಡಿಸಿದ್ದರಿಂದ ದಿಳೀ [>ಳ್ಳಿ]ಯಿಂದ ಭಾರೀ ಫವುಜು ಸರದಾರರು ಸಹ ಪಯಣ ಮಾಡಿ, ಅವರ

ಸಂಗಡ ಈ ಪೂಲರಂಗನ್ನನನ್ನೂ ಕೂಡಲಿಟ್ಟು ಈ ಕರ್ನಾಟಕ ರಾಜ್ಯಕ್ಕೆ ಕಳುಹಿಸಿದ್ದರಿಂದ ಅವರು ಬಂದು, ಪೆನುಗೊಂಡೆಗೆ ಮುತ್ತಿಗೆ ಹಾಕಿ, ಪೆನುಗೊಂಡೆ ಹಲ್ಲಾ ಮಾಡಿ ತೆಗೆದುಕೊಂಡು, ವೆಂಕಟಪತಿರಾಯನು, ಅವರ ಸೂಳೆ ಚಿಕ್ಕಭೋಗಸಾನೀನು, ಅವಳ ತಮ್ಮ ಚವುರಪ್ಪ ನಾರನ್ನ ಮುಂತಾದವರೆನ್ನಾ ಹುಯಿದು ಹಾಕಿಸಿ, ಅವರ ರಾಜ್ಯ ಯಾವತ್ತು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಪೂಲರಂಗನ್ನನು ಕೆಲವು ಫವುಜು ತೆಗೆದುಕೊಂಡು ಚೇತಪಟ್ಟ ಚೆಂಗಲ್ಪಟ್ಟಿ ಬಳಿಗೆ ಹೋಗಿ ಮುತ್ತಿಗೆ ಹಾಕಿ ಹಲ್ಲಾ ಮಾಡಿ ಕಿಲ್ಲೆಯನ್ನು ಸ್ವಾಧೀನ ಮಾಡಿಕೊಂಡು. ಕಿಲ್ಲೇದಲ್ಲಿದ್ದ ತನ್ನ ಭಾವಮೈದನಾದ ಮಾಕರಾಜನ್ನು ಹುಯಿದು ಹಾಕಿ, ತಮ್ಮ ಚಿಕ್ಕಪ್ಪ ತಮ್ಮ ಅಣ್ಣ ರಂಗಪತಿರಾಜು, ಬಂಗಾರು ತಿಮ್ಮರಾಜನ್ನ ಹುಯಿದು ಹಾಕಿದ ಹಗೆ ಯಾವತ್ತು ತಾನು ತೀರಿಸಿಕೊಂಡನು. ಮುಂದೆ ತಾನು ಯಾವ ಬಗ್ಗೆ ಬದುಕಬೇಕೆಂಬುದಾಗಿ ತನ್ನ ಕತ್ತಿ ಹೂಣಿಕೊಂಡು ಆ ಕತ್ತಿಯ ಮೇಲೆ ಪ್ರಾಣ ಬಿಟ್ಟನು."[೬೪]

**ಅಮರನಾಯಕರು**

ದಕ್ಷಿಣ ಭಾರತವನ್ನಾಳಿದ ಅನೇಕ ರಾಜಮನೆತನಗಳು ಅನುಕೂಲದ ದೃಷ್ಟಿಯಿಂದ ತಮ್ಮ ವಿಸ್ತಾರವಾದ ಭೂಪ್ರದೇಶಗಳನ್ನು ವಿವಿಧ ಸ್ವರೂಪದ ಆಡಳಿತ ಘಟಕಗಳನ್ನಾಗಿ ವಿಭಾಗಿಸಿದುದು ಇತಿಹಾಸದುದ್ದಕ್ಕೂ ಕಂಡುಬರುತ್ತದೆ. ಪ್ರತಿಯೊಂದು ಆಡಳಿತ ಘಟಕವೂ ರಾಜನಿಂದ ನೇಮಿಸಲ್ಪಟ್ಟ ಒಬ್ಬೊಬ್ಬ ರಾಜಪ್ರತಿನಿಧಿಯ ಅಧೀನದಲ್ಲಿರುತ್ತಿತ್ತು. ಕೇಂದ್ರಸರ್ಕಾರವೇ ಸಾಮ್ರಾಜ್ಯದ ದೂರದ ಪ್ರದೇಶಗಳನ್ನು ನಿಯಂತ್ರಿಸುವುದು ಕಷ್ಟಸಾಧ್ಯವಾದ್ದರಿಂದ ಈ ಅಮರನಾಯಕರ ವ್ಯವಸ್ಥೆ ಜಾರಿಗೆ ಬಂದಿತು. ಮೌರ್ಯರಾಧಿಯಾಗಿ ಆಧುನಿಕ ಕಾಲದ ವಸಾಹತುಶಾಹಿಯವರೆಗಿನ ವಿವಿಧ ಕಾಲ ಘಟ್ಟಗಳಲ್ಲಿ ಅಮರನಾಯಕತನದ ಸ್ವರೂಪವು ವಿಕಾಸವಾದ ಬಗ್ಗೆ, ವಿಸ್ತಾರವಾದ ವ್ಯಾಪ್ತಿ, ಸಾಮರ್ಥ್ಯದ ನೆಲೆಯಲ್ಲಿ ಹೇಗೆ ಪ್ರಭಾವಗೊಂಡಿದೆ ಎಂಬುದು ಇಲ್ಲಿಯ ಪ್ರಮುಖ ಅಂಶ. ದಕ್ಷಿಣ ಭಾರತದ ಮಟ್ಟಿಗೆ ಕಾಕತೀಯರ ಆಡಳಿತಾವಧಿಯ ಸಾಮಂತರ ವ್ಯವಸ್ಥೆ ಹುಟ್ಟಿತಾದರೂ ಮುಂದೆ ವಿಜಯನಗರ ಅವಧಿಯಲ್ಲಿ ತೀವ್ರ ಸ್ವರೂಪ ಪಡೆಯಿತು. ಅದರಲ್ಲೂ ಕೃಷ್ಣದೇವರಾಯನ ಆಡಳಿತಾವಧಿಯ ಅಮರನಾಯಕರನ್ನೇ ಸಂಪೂರ್ಣವಾಗಿ ಅವಲಂಬಿಸಿದ್ದುದು ಸ್ಪಷ್ಟ. ಇವರು ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿದ್ದರೂ ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಸ್ವತಂತ್ರರಂತೆ ವರ್ತಿಸಿರುವುದುಂಟು. ಮುಂದೆ ಇದಕ್ಕೆ ಜನ ಬೆಂಬಲದ ಕಾರಣವಾಗಿ ಪಾಳೆಯಗಾರ ಶಾಹಿಯೂ ಪ್ರಬಲಗೊಂಡಿತು. ಕೃಷ್ಣದೇವರಾಯನು ತನ್ನ ಬೃಹತ್ ಸಾಮ್ರಾಜ್ಯವನ್ನು

ನಿಯಂತ್ರಿಸುವಲ್ಲಿ ಈ ಅಮರನಾಯಕರ ಪಾತ್ರ ಬಹುಮುಖ್ಯವಾಗಿದೆ. ಅಂತೆಯೇ ಈತನ ಅವಧಿಯಲ್ಲಿ ಭಾರೀ ಸಂಖ್ಯೆಯಲ್ಲಿ ಅಮರನಾಯಕರು ನೇಮಕಗೊಂಡಿರುವುದು ಗಮನಾರ್ಹವಾಗಿದೆ. ಚಕ್ರವರ್ತಿ ಹಾಗೂ ಜನಸಾಮಾನ್ಯರ ನಡುವೆ ಸಂಪರ್ಕ ಸೇತುವಾಗಿ ಕಾರ್ಯನಿರ್ವಹಿಸಿದ ಈ ಅಮರ ನಾಯಕರು ಜನಾನುರಾಗಿಯಾಗಿದ್ದಾರೆ; ಕೆಲವರು ಜನ ವಿರೋಧಿ ನೀತಿಯನ್ನು ಅನುಸರಿಸಿದ್ದಾರೆ. ಸಾಮಾಜಿಕ–ಆರ್ಥಿಕ–ರಾಜಕೀಯ ಸ್ಥಿತಿ–ಗತಿಗಳ ಹಿನ್ನಲೆಯಲ್ಲಿ ಪ್ರಮುಖ ಪಾತ್ರವಹಿಸಿರುವ ಇವರು ಸ್ಥಳೀಯ ಚರಿತ್ರೆ ದೃಷ್ಟಿಯಿಂದ ಗಮನಾರ್ಹ ಸಾಧನೆ ಮಾಡಿದ್ದಾರೆ ಎಂದು ಪ್ರೊ. ಲಕ್ಷ್ಮಣ್ ತೆಲಗಾವಿ ವ್ಯಾಖ್ಯಾನಿಸುತ್ತಾರೆ.

ಈ ಪದ್ಧತಿಯನ್ನು ನಾಯಕರ ಪದ್ಧತಿ ಅಮರನಾಯಕರ ಪದ್ಧತಿ ಅಮರಮಗಣಿ, ಅಮರಂ ಎಂದು ಗುರುತಿಸಲಾಯಿತು. ಇವರಿಗೆ ಸಾಮಂತನಾಯಕ ದಂಡನಾಯಕ ಮಂಡಲೇಶ್ವರ, ರಾಜ ಮಹಾರಾಜ ಒಡೆಯರ್ ಮುಂತಾದ ವಿವಿಧ ಹೆಸರುಗಳಿದ್ದು ಸಮ ದರ್ಜೆಯ ಅಧಿಕಾರವಿದ್ದಿತು ಎಂದು ಎ.ವಿ. ವೆಂಕಟರತ್ನಂ ತಿಳಿಸಿದ್ದಾರೆ.

ಮಹಾಲಿಂಗಂರವರ ಪ್ರಕಾರ ಅಮರನಾಯಕರು ಎಂದರೆ ಸಾಮ್ರಾಟನು ಭೂಮಿಯನ್ನು ತನ್ನ ಒಡೆತನದಲ್ಲಿ ಇಟ್ಟುಕೊಂಡಿದ್ದು ಅದನ್ನು ತನ್ನ ಆಶ್ರಿತರಿಗೆ ಹಂಚುತ್ತಿದ್ದನು. ಹೀಗೆ ರಾಜನಿಂದ ಭೂಮಿಯನ್ನು ಪಡೆದವರನ್ನು ನಾಯಕರೆನ್ನಲಾಗುತ್ತಿದ್ದು ಅವರ ಮೂಲಕ ಸಾಮ್ರಾಜ್ಯದಲ್ಲಿ ಏರ್ಪಟ್ಟ ಆಡಳಿತ ಪದ್ಧತಿಯನ್ನು ನಾಯಂಕರ ಪದ್ಧತಿ ಎಂದು ಕರೆಯುತ್ತಿದ್ದರು. ಎನ್.ವೆಂಕಟರಮಣಯ್ಯನವರ ಪ್ರಕಾರ ಒಂದು ನಿಗಧಿಯಾದ ಆದಾಯವನ್ನು ತರುತ್ತಿದ್ದ ಪ್ರದೇಶವನ್ನು ಒಬ್ಬ ಸೈನಿಕ ನಾಯಕನಿಗೆ ಒಂದು ನಿಗದಿಯಾದ ವಾರ್ಷಿಕ ಹಣವನ್ನು ಸಂದಾಯ ಮಾಡುವುದರ ಜೊತೆಗೆ ಗೊತ್ತಾದ ಸಂಖ್ಯೆಯಲ್ಲಿ ಸೈನಿಕರು ಅಶ್ವಗಳು ಮತ್ತು ಆನೆಗಳನ್ನು ಒದಗಿಸುವ ಷರತ್ತಿನ ಮೇಲೆ ವಿಜಯನಗರದ ರಾಜರು ಕೊಡುತ್ತಿದ್ದುದು ಅವರ ಸಾಮಂತರ ಪದ್ಧತಿ.

ಅಮರ ನಾಯಕ ಪದ ಅರ್ಥವನ್ನು ಪರಿಶೀಲಿಸಿದಾಗ ಇದು ಅಮರ+ನಾಯಕ+ತನ ಎಂಬ ಪದಗಳ ಮಿಶ್ರಣವಾಗಿದೆ. ಎಚ್.ಎನ್. ವಿಲ್ಸನ್ ಅವರು ಅಮರ ಎಂಬ ಪದಕ್ಕೆ literally a command of thousand foot ಎಂಬ ಅರ್ಥವನ್ನು ನೀಡಿದ್ದಾರೆ. ನಾಯಕ ಎಂಬ ಪದಕ್ಕೆ ಶಬ್ದಕೋಶಗಳಲ್ಲಿ ಮುಂದಾಳು, ಮುಖಂಡ, ದಳಪತಿ ಎಂಬ ಅರ್ಥವಿದೆ. ತನ ಎಂಬುದಕ್ಕೆ ನಿರ್ದಿಷ್ಟ ಅರ್ಥ

ಕೊಡುವುದು ಸಾಧ್ಯವಿಲ್ಲ. ಇದಕ್ಕೆ ಕಛೇರಿ ಇದ್ದಿರಬಹುದು ಎಂದು ವೆಂಕಟರಮಣಯ್ಯನವರು ಊಹಿಸಿದ್ದಾರೆ. ಒಟ್ಟಾರೆ ಅಮರ ನಾಯಕತನ ಎಂದರೆ ಚಕ್ರವರ್ತಿ ಕೆಲವು ಷರತ್ತುಗಳ ಮೇಲೆ ಒಬ್ಬ ನಂಬಿಕಸ್ತ ವ್ಯಕ್ತಿಗೆ ದತ್ತಿಯಾಗಿ ನೀಡಿದ ಭೂಪ್ರದೇಶ ಎನ್ನಬಹುದು.

ಅಮರನಾಯಕರು ಎಂಬ ಸ್ಥಳೀಯ ಪ್ರಭುಗಳು ವಿಜಯನಗರದ ರಾಜಕೀಯ ಇತಿಹಾಸದಲ್ಲಿ ಕಂಡು ಬರುತ್ತಾರೆ. ಅಮರ ನಾಯಕರೇ ವಿಜಯನಗರೋತ್ತರ ಕಾಲದಲ್ಲಿ ಪಾಳೇಗಾರರೆಂದು ಕರೆಯಲ್ಪಟ್ಟರು. ಅಮರನಾಯಕರು ವಿಜಯನಗರ ಸಾಮ್ರಾಜ್ಯದ ಬುನಾದಿಯಾಗಿದ್ದರು. ಅಮರ ಎಂದರೆ ಸೈನ್ಯ – ಸೈನ್ಯದ ಠಾಣ್ಯ ಎಂಬುದಾಗಿ ಹೆಚ್. ಹೆಚ್. ವಿಲನ್ಸ್ ಅಭಿಪ್ರಾಯ ಪಡುತ್ತಾರೆ. ವಿಜಯನಗರದ ಅರಸರು ಅಮರನಾಯಕರನ್ನು ನೇಮಕ ಮಾಡುತ್ತಿದ್ದರು. ಕೆಲವು ಹಳ್ಳಿಗಳಿಂದ ಆರಂಭವಾಗಿ ದೊಡ್ಡ ದೊಡ್ಡ ಪ್ರದೇಶಗಳಲ್ಲಿ ಅನೇಕ ಹಂತಗಳ ಅಮರನಾಯಕರು ಇದ್ದರು. ವಿದೇಶಿ ಪ್ರವಾಸಿಗ ನ್ಯೂನಿಜ್ ಇಂತಹ ಅಮರನಾಯಕರನ್ನು ಗುರುತಿಸಿದ್ದಾನೆ. ಚಿತ್ರದುರ್ಗ, ಕೆಳದಿ, ಆಗಲವಾಡಿ, ಉಮ್ಮತ್ತೂರು, ತರೀಕೆರೆ, ಯಲಹಂಕ, ಹರಿಕುಟಾರ, ಬೆಳಗುತ್ತಿ, ಮೈಸೂರು, ಹರಪನಳ್ಳಿ, ಚನ್ನಪಟ್ಟಣ ಹೊಳೇನರಸೀಪುರ ಮೊದಲಾದ ಅನೇಕ ಪ್ರಸಿದ್ದ ಪಾಳೇಪಟ್ಟಿನ ನಾಯಕರು ಆರಂಭದಲ್ಲಿ ವಿಜಯನಗರ ಸಾಮ್ರಾಜ್ಯದ ಅಮರನಾಯಕರಾಗಿದ್ದರು. ಈ ವ್ಯವಸ್ಥೆಯನ್ನು ಊಳಿಗಮಾನ್ಯ ವ್ಯವಸ್ಥೆಗೆ ಹೋಲಿಸಲಾಗಿದೆ. ರಾಜನ ಅನುಗ್ರಹ ಇರುವವರೆಗೆ ಅಮರನಾಯಕರು ತಮಗೆ ಕೊಡಲ್ಪಟ್ಟ ಅಮರ ಮಾಗಣಿಯ ಅಥವಾ ಸ್ಥಳದ ಪ್ರಭುಗಳಾಗಿ ಇರುತ್ತಿದ್ದರು.

ಅಮರನಾಯಕ ಪದವಿ ವಂಶಪಾರಂಪರ್ಯವಾಗಿತ್ತು. ಅಮರನಾಯಕರು ಪ್ರಮುಖವಾಗಿ ಎರಡು ಕರ್ತವ್ಯಗಳನ್ನು ನಿರ್ವಹಿಸಬೇಕಾಗಿತ್ತು. ತಮಗೆ ಕೊಡಲ್ಪಟ್ಟ ಅಮರ ನಾಯಕತನದ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುವುದು, ತೆರಿಗೆಗಳನ್ನು ಸಂಗ್ರಹಿಸಿ ಅದರಲ್ಲಿ ಒಂದು ಪಾಲನ್ನು ವಿಜಯನಗರದ ಚಕ್ರವರ್ತಿಗಳಿಗೆ ಸೈನ್ಯದ ತುಕಡಿಯೊಂದನ್ನು ಇಟ್ಟುಕೊಂಡು (ಅಶ್ವಪಡೆ), ವಿಜಯನಗರ ಚಕ್ರವರ್ತಿಗಳಿಗೆ ಅಗತ್ಯ ಬಿದ್ದಾಗ ಸಹಾಯಕ್ಕಾಗಿ ತನ್ನಲ್ಲಿದ್ದ ಸೈನ್ಯವನ್ನು ನೀಡಬೇಕಾಗಿತ್ತು. ಇದಲ್ಲದೆ ನವರಾತ್ರಿ, ಚಕ್ರವರ್ತಿಗಳ ಪುತ್ರೋತ್ಸವ, ಮುಂತಾದ ವಿಶೇಷ ಸಮಾರಂಭದ ಕಾಲದಲ್ಲಿ ಚಕ್ರವರ್ತಿಯ ಆಸ್ಥಾನದಲ್ಲಿ ಹಾಜರಿರಬೇಕಾಗಿತ್ತು. ಒಟ್ಟಿನಲ್ಲಿ ಅಮರನಾಯಕ ವ್ಯವಸ್ಥೆ ವಿಜಯನಗರ ಸಾಮ್ರಾಜ್ಯದ ಅಡಿಪಾಯವಾಗಿತ್ತು ಎಂದರೆ ಉತ್ಪ್ರೇಕ್ಷೆಯಾಗಲಾರದು. ಇಂತಹ ಕೆಲವು ಅಮರನಾಯಕರ ಬಗೆಗೆ ಕೈಫಿಯತ್ತುಗಳು ಪ್ರಸ್ತಾಪಿಸುತ್ತವೆ.

**ತಿರುಮಲನಾಯಕ (ಹತ್ತಿ ಬೆಳಗಲ್ಲು ಕೈಫಿಯತ್ತು)**

“ಬೆಳಕಲ್ಲು ಗುಡ್ಡದ ಮ್ಯಾಲೆ ನಾ[>ಸಾ]ರಮ್ಮ ನಾಯಕಸಾನಿ ಗಂಡ ಬ್ಯಾಡನು ಜೇನುಬ್ಯಾಡರು ಶೇರಿಕೊಂಡು, ಪಾಳೆಗಾರನು ಅನಿಸಿಕೊಂಡು ಯಿದ್ದನು. ಆತನ ಹೆಸರು ತಿಳಿಯಲಿಲ್ಲಾ. ಆತನ ಹೆಂಡತಿ ಸಾರಮ್ಮ ನಾಯಕಸಾನಿಯಂಬವಳು ಕೆಲವು ದಿನ ಆಳಿದಳು.ಯೀ ಬ್ಯಾಡರು ಯೀ ಸ್ಥಳಕ್ಕೆ ಪ್ರಾಬಲ್ಯೆ ಆಗಲಿಕ್ಕೆ ಕಾರಣ, ವಿಜಯನಗರ ಶೀಮೆ ತುರುಕರು ಕಟ್ಟಿದ ಸಮಯದಲ್ಲು ದೇಶ ಅನಾಯಕದ ಆದ್ದರಿಂದ ಯೀ ಬ್ಯಾಡರು ಕಟ್ಟಿಕೊಂಡರು. ಯೀ ನಾ[>ಸಾ]ರಮ್ಮನ ಮಗ ತಿರುಮಲನಾಯಕ ಯಂಬವನು ಬ್ಯಾಡರನು ಶೇರಿಸಿಕೊಂಡು ಬೆಟ್ಟದಲ್ಲು ಸದರಿ ಬರದ ಅಗ್ರಹಾರ ಖಿಲವಾಗಿ ಬ್ಯಾಡರು ಶೇರಿದರು. ಸದರಿ ಬರದ ನಾಯಕನ ಕೆಳಗೆ ಯಿದ್ದ

**ಗ್ರಾಮಗಳು** : ಹತ್ತಿ ಬೆಳಗಲ್ಲು, ಹರ [+ದ]ಗೆರೆ, ಕಾಮಿನಹಾಳ, ತಿಂಮಾಪುರಾ, ಕುಕಿರಬೇಡು, ಮಾಕನೂರು, ರಾಮದುರ್ಗ, ಮೇದಿಹಾಳು, ಬೊಮ್ಮಿನಹಾಳು, ಶಿಂಗರಾಪುರಾ [>ಶಿರಗಾಪುರ], ಶಿದ್ದರಹಾಳು ನಗರಹೊ [ಡೊ]ಣೆ, ಬೆಳ್ಳಡೊಣೆ, ಹಲಹರವಿ, ಜಚಾರಹಳ್ಳಿ, ಅಂತು ೧೫ ಗ್ರಾಮಕ್ಕೆ ಕಾವಲಿ ತಳವಾರಿಕೆ ಮಾಡಿಕೊಂಡು ಅಧಿಕಾರಯಿವರೆ ಮಾಡಿಕೊಂಡು, ದಿವಾಣಕ್ಕೆ ಹಣ ಕೊಡುತ್ತಾ ಯಿದ್ದರು. ಯೀತನೆ ಪ್ರಾಬಲ್ಯನಾಗಿ ಯಿದ್ದನು. ಯೀ ತಿರುಮಲನಾಯಕಗೆ ಯಿಬ್ಬರು ತಮ್ಮಂದರು, ವೊಬ್ಬ ಸೋಮಶೇಕರನಾಯಕ, ಯರಣ್ಣೆ ಅವ ಸೋಮಪ್ಪನಾಯಕ. ಯೀ ಮೂರು ಮಂದಿ ಅಣ್ಣ ತಮ್ಮಂದಿರು ಹಂಚಿಕೊಂಡದ್ದು ಪತಶೀಲು.”[೭೫]

**ರಾಮದೇವರಾಯ (ತಾಲೂಕು ಕಂಪಿಲಿ ಕೈಫಿಯತ್ತು)**

“ಪಶ್ಚಿಮ ತುಂಗಭದ್ರ ಆಚೆ ದಡದಲ್ಲಿ ಸಮೀಪ ದೇವಗಿರಿಯಲ್ಲಿಗೆ ಯಂಡು ಹರದಾರಿ ಯಿರಲಾಗಿ, ಆ ಸ್ಥಳದಲ್ಲಿ ದೇವಗಿರಿಯಂಚೋ ಗ್ರಾಮದಲ್ಲಿ ರಾಮದೇರಾಯ ಅರಸು ರಾಜ್ಯಭಾರ ಮಾಡಿಕೊಂಡು ಯಿರಲಾಗಿ.

ಬ್ಯಾಡರ ಮುಖ್ಯಸ್ಥ ಸಿಂಗನಾಯಕ ರಾಮದೇವರಾಯರ ಹತ್ರ ಸಂಬಳ ನಿಗದಿಮಾಡಿಕೊಂಡು ಚಾಕರಿ ನಿಂತರು.

ರಾಮದೇವರಾಯರು ಬ್ಯಾಟಿ – ಸಿಂಗನಾಯಕನ ಸಮೂಹ ಜತೆಯಲ್ಲಿ ಒಮದು ವುಡವು ಕಂಡು ಬೆನ್ನು ಹತ್ತಿ ಓಡಿ ಹುತ್ತಕ್ಕೆ ಹೊಕ್ಕಿತು. ಶೋಧಿಸಿದಾಗ ಒಂದು ಕೊಪ್ಪರಿಗಿ ದ್ರವ್ಯಯಿತ್ತು. ಗ್ರಾಮ ಕಟ್ಟಲಿಕ್ಕೆ ಅಪ್ಪಣೆ ಪಡೆದರು ಖಾಸಾ ಅರಮನೆ

ಕಟ್ಟಿಕೊಂಡು ಸಿಂಗನಾಯಕಯೆಂದು ಕಿತಾಬು ಕೊಟ್ಟು ಬುಮಾನ ಮಾಡಿದರು ಎಂಬುದಾಗಿ ತಾಲೂಕ ಕಂಪಲಿ ಕೈಫಿಯತ್ತಿನಲ್ಲಿ ವಿವರಣೆ ಇದೆ."[೬೬]

**ಸಿಂಗನಾಯಕ (ತಾಲೂಕು ಕಂಪಿಲಿ ಕೈಫಿಯತ್ತು)**

"ರಾಯದುರ್ಗಕ್ಕೆ ಉತ್ತರ ನಾಲ್ಕು ಹರದಾರಿಯಿರುವ ಮಲ್ಲಪಂಥೀದೇಶ ಅರಣ್ಯಪಂಥಿ ಗ್ರಾಮಗಳಲ್ಲಿ ಬ್ಯಾಡರ ಮುಖ್ಯಸ್ಥ ಸಿಂಗನಾಯಕ: ರಾಮದೇವರಾಯರ ಚಾಕರಿಕೆ ನಿಂತು. ದ್ರವ್ಯ ಸಿಕ್ಕಿದ ಮೇಲೆ ಗ್ರಾಮ ಕಟ್ಟಲು ಅತ್ತಗೆ ಪಡೆದರು. ಮುಂದುಡಿ ಸಿಂಗನಾಯಕ ರಾಯದುರ್ಗದೇಶಕ್ಕೆ ಹೋಗಿ ಮಲ್ಲದೇವರಾಯ ಪ್ರಭುತ್ವ ಮಾಡುತ್ತಾ ಯಿರಲಾಗಿ, ಅಲ್ಲಿ ಭೇಟಿ ತಕೊಂಡನು. ಸಂತೋಷ ಪಟ್ಟ ಕಾಯ ೨೦ ಗ್ರಾಮಗಳು ಮಾಡಿಕೊಟ್ಟರು."[೬೭]

**ವೆಂಕಟಾದ್ರಿಯ ನಾಯಕ (ಚಿಕ್ಕಮಗಳೂರು ಕೈಫಿಯತ್ತು)**

"೮೯ ಕ್ರಿಷ್ಣರಾಯರ ಸಮೀಪದಲಿ ಯಿದ್ದ ಬಾಯಿಣನ ಮಗಾ ಯರಿ ಕ್ರಿಷ್ಣಪ್ಪನಾಯಕನು ರಾಯರಿಗೆ ಅನೇಖ ದಿಗ್ವಿಜಯ ಮಾಡಿಕೊಂಡು. ಕ್ರಿಷ್ಣರಾಯರು ಬೇಲೂರನ್ನು ಜಹಾಗೀರು ಹಾಕಿಕೊಟ್ಟರು. ಕ್ರಿಷ್ಣಪ್ಪನಾಯಕನ ಮಗಾ ವೆಂಕಟಾದ್ರಿನಾಯಕನು ರಾಜ್ಯ ಪ್ರರಿಪಾಲನೆ ಮಡೊವ್ಯಾಗೆ ಕ್ರಿಷ್ಣರಾಯರ ಸಮೀಪದಲಿ ಯಿರುವ ಪಣಿಕೊನಯ್ಯನವರಿಗೆ ಸಣ್ಣತಿ, ಬಾಗೂರು ಮೊದಲು ಮಾಡಿಕೊಂಡು [ತರಿ +] ಕೆರಿ ಪರಿಯಂತ್ರಕು ಜಹಾಗೀರು ಅನುಭವಿಸಿಕೊಂಡು. ತರಿಕೆರೆಯಲ್ಲಿ ಮೃತವಾದನು. ಅವರಿಗೆ ಪುತ್ರಸಂತಾನಯಿಲ್ಲದೆಯಿದ್ದದರಿಂದಾ ಆತನ ಮಗಳು ವೆಂಕಟಾದ್ರಿನಾಯಕರಿಗೆ ಕ್ರಯಕೆ ಕೊಟ್ಟದರಿಂದಾ ತನ ಶೀಮೆ ವಿಚಾರಣೆ ಮಾಡುವ ಬಗ್ಗೆ ಯೀ ಸ್ಥಳಕ್ಕೆ ಸ್ವಾರಿ ಮುಖಾಂತರ ಬಂದು ನೋಡಿದಲಿ, ಯಿಲ್ಲಿ ಮೊದಲು ಬಸ್ತಿಹಾಳಿ ಯೆಂಬದಾಗಿ ವಂದು ಗ್ರಾಮ ಯಿದ್ದದರಿಂದಾ ಯೀ ೧೨ ಸಾವಿರ ಸೀಮೆ ವುತ್ತರ ಮಾಡಿ ಕೊಟ್ಟು, ಕಿಲ್ಲೆ ಆಯಕಟ್ಟು ಮುಂದೆ ಜಮೋಕರು ಮಾಡಿಕೊಟ್ಟು, ಯೀ ಶೀಮೆ ವಿಚಾರಣೆ ಬಾಕಳೆಟ್ಟಕೆ ನಾಯಿಕಾಕೆ ಹಚ್ಚಿ ವಸಾಯಿತಾಯಿರಶಿ. ಚಿಕ್ಕನಹಳ್ಳಿಯಂಬಾ ಹೆಸರು ತೆಗೆದು ಚಿಕ್ಕಮಗಳೂರು ಯಂಬದಾಗಿ ಹೆಸರು ಯಿಟ್ಟು, ಯವತು ಮೊಕರರು ಮಾಡಿದರು."[೬೮]

**ವೆಂಕಟಪತಿರಾಯ (ತಾಲೂಕು ಕಂಪಿಲಿ ಕೈಫಿಯತ್ತು)**

"ಶ್ರೀರಂಗರಾಯರ ಮಗ ವೆಂಕಟಪತಿರಾಯರ ಆಳಿಕೆ ಶಖ ೧೫೯೪-೧೬೧೪ವರಿಗೆ ಮಟ್ಟಂತರಕ್ಕೆ ನಡದ್ದು ಯಿದೆ. ಪುರದ ಕಡೆಯಿಂದಲು ಶಾಮಜಾಬಾನಮ

ಅದಬಾನಿಲಿ ನಿಂತು ಅಲ್ಲಿಂದ ಬಂದು ಕೊಂಡು ಯಿರೋದರ ವಳಗೆ, ಮಸೂರಬಾನನು ದೇಶಾಯಿಕೆ, ದೇಶಕುಲಕರ್ಣಿಕೆ, ಗೌಡಕಿ ಸ್ವಾಸ್ತಿಗಳು ಮಾಡಿಕೊಟ್ಟನು. ಯೀಪ್ರಕಾರಕ್ಕೆ ಅವರು ರಾಜ್ಯ ಆಳಿ ಆಮೇಲೆ ಅರ್ರುಸಗಳಿಗೆ ಠಾಣ್ಯ ಬಿಟ್ಟು ವರುಷ ಖಂಡಿಣಿ ತಕ್ಕೊಂಡು ಇದ್ದರು."[೬೯]

**ತಿಮ್ಮಪ್ಪನಾಯಕ ( ಹಾರನಹಳ್ಳಿ ಕೈಫಿಯತ್ತು)**

"ತರಿಕೆರೆ ಅರಸು ತಿಮ್ಮಪ್ಪನಾಯಕನೆಂಬೀ ಪಾಳೆಗಾರನು ಬಲವಂತವಾಗಿ ಯೀ ಶೀಮೆ ಯಾವತನ್ನು ಕಟ್ಟಿಕೊಂಡು ಅಮರಗಿ ಜನಾರ್ಧನ ಸ್ವಾಮಿಯವರು ತಿಮ್ಮಪ್ಪನಾಯಕರಿಗೆ ಪ್ರತ್ಯಕ್ಷವಾಗಿ 'ದೇವಸ್ಥಾನವನ್ನು ಕಟ್ಟಿಸಿ, ಗಿರಿಗೆ ಪಶ್ಚಿಮ ದಿಕ್ಕಿನಲ್ಲಿ 'ತಿಮ್ಮಪ್ಪನಾಯಕನ ಕೆರೆ' ಯೆಂದು ದೊಡ್ಡಕೆರೆಯನ್ನು ಕಟ್ಟಿಸಿದನು. ದೇವಸ್ಥಾನದ ಸೇವೆಯನ್ನು ಮಾಡಿಕೊಂಡು, ದೇವತಾ ಸೇವೆಯನ್ನು ಮಾಡಿಕೊಂಡು ಯವರ ವಂಶಸ್ಥರು ಹನುಮಪ್ಪನಾಯಕ. ಸರ್ಜಾ ಹಜಮಪ್ಪನಾಯಕ ನೇತಾರಾಮಪ್ಪನಾಯಕ ಮುಂತಾದವರು ಆಳಿದರು."[೭೦]

**ದಳವಾಯಿ ವೀರರಾಜು**

"ಕೈಫಿಯತ್ತು ತಾಲೂಕೆ ಯಗಟಿ, ನಾಡಿಗರ ಖಂಡರಾಯರು ಬರಶಿಕೊಟ್ಟ ಪ್ರಕಾರ ಕ್ರೋಧನ ಸಂವತ್ಸರ, ಅಶ್ವಿಜ ಬ ೭ಲ್ಲು, ಆಜಂಪುರಾ.

ಪೂರ್ವದಲ್ಲಿ ಶಾಲಿವಾಹನ ಶಕ ವರುಷ ೧೪೭೨ನೆ ಸಂದ ವರ್ತಮಾನಕೆ ಸಲ್ಲುವ ಸಾಧಾರಣ ಸಂವತ್ಸರದಲ್ಲಿ ಘನಗಿರಿ ರಾಜ್ಯಕ್ಕೆ ಸಲ್ಲುವ ಹೊಸಪಟ್ಟಣದ ವೇಂಟೆಕೆ ವಳಗಣ ಯೆಗಟಿಸ್ತಳ ಹುಟ್ಟಿದ ವಿವರ.

ಪ್ರಾಕು ನೀಲಾವತಿ ಪಟ್ಟಣವನ್ನು ಆಳಿಕೊಂಡು ಯಿದ್ದಾ ನರಪತಿರಾಯ ಸಂವಸ್ತಾನದ ಬಾಗಿಲ ದಳವಾಯಿ ವೀರರಾಜು ಮಹಾಅರಸುಗಳು ನೀಲಗುಂದದ ಪಟ್ಟಣದಿಂದ ಈ ಮಾರ್ಗವಾಗಿ ಸ್ವಾರಿ ಬಂದು, ಪೂರ್ವದಲ್ಲಿ ಕಿರಾತರು ಕಟ್ಟಿದ ಕೊಕ್ಕಸಮುದ್ರಯಂಬೋ ಕೆರೆಯು ಯಿರುವ ವೃತ್ತಾಂತವನ್ನು ಕೇಳಿ, ಯೀ ಕೆರಿ ಸ್ವಲ್ಪವಾಗಿ ಯಿದ್ದುದರಿಂದಾ ದೊಡ್ಡದಾಗಿ ಕಟ್ಟಶಿ. ಆ ಕರಿಯ ಯೇರಿಯ ಮೇಲೆ ಶಿಲ್ಲಾ ಪ್ರಥಮೆಗಳನ್ನು ಮಾಡಿಸಿ, ಸ್ತಾಪನೆ ಮಾಡ್ಸಿ ಯಿರುವ ವಿವರ, ಕಿರಾತರ ಪ್ರತಿಮೆ, ನಾಯಿ ಪ್ರತಿಮೆ, ಸೆಟ್ಟಿ ಪ್ರತಿಮೆ, ಯಿತನ ಹೆಂಡತಿ ಪ್ರತಿಮೆ

ಯೀ ಮೇರಿಗೆ ಐದು ಪ್ರತಿಮೆಯನ್ನು ಯಿರಿಸಿ ನಿಲಿಸಿ, ಯಿ ಕುಕ್ಕುಗೆ ಆ ಕೆರಿ ಕೆಳಗೆ ಮಾನ್ಯವಾಗಿ, ... ಯನ್ನು ಬಿಟ್ಟು ಯಿರ್‍ರುವದರಿಂದ ಯಿದಕ್ಕೆ ಕುಕ್ಕನಗದ್ದೆ ಯಂಬದಾಗಿ ಹೇಳುತ್ತಾರೆ."[೨೧]

**ತಿಮ್ಮೆಗವುಡ – ನರಸೇಗವುಡ (ಬಾಗಡೆ ಕೈಫಿಯತ್ತು)**

"ಹ[>ಹೊ] ಳೆ ನರಶೀಪುರದಿಂದ ತಿಮ್ಮೆಗವುಡ ಯಂಬವನು ಬಂದು, ಯೀ ಸ್ಥಳವನ್ನು ನೋಡಿ, ಯಾರ್‍ರೂ ಯಿಲ್ಲದೇ ಮೈದಾನವಾಗಿ ಯಿದ್ಧಕಾರಣ, ಯೀ ಸ್ಥಳದಲ್ಲಿ ವಂದು ಗ್ರಾಮವನ್ನು ಕಟ್ಟಿ, ತನ್ನ ಹೆಸರನಿರಿಸಬೇಕೆಂದು ಚಿಕ್ಕದಾಗಿ ಬಂದು ಊರು ಕಟ್ಟಿ, ಬಾಗಡೆಯಂಬ ಹೆಸರು ಯಿಟ್ಟು, ಊರಿಗೆ ಪಶ್ವಿಮದಿಕ್ಕಿನಲ್ಲಿ ತೆಂಗಟಿಯಂಬ ವಂದು ಸಣ್ಣ ಕೆರೆಯನ್ನು ಕಟ್ಟಿಸಿ ಯಿರುತ್ತಾ ಯಿದ್ದನು. ಯೀಗುಡ ವಂಶಸ್ತನಾದ ನರಸೇಗವುಡ ಯಂಬವನು ಯಿದ್ದಾನೆ ಯಂಬುದಾಗಿ ಹೇಳಿದ್ದರಿಂದ ಯೀ ಕೋಟೆಯನ್ನು ದುರಸ್ತಾಗಿ ಕಟ್ಟಿಸಿದರೆ ನಮ್ಮ ಸಂಸ್ತಾನಕ್ಕೆ ಹೆಸರಾಯಿತು ಯಂಬುದಾಹಿ ಆಲೋಚಿಸಿ. ಉಪಾಯವನ್ನು ತೆಗೆದು, ಕಂದಕ ಮುಂತಾಗಿ ಹೇರಳವಾಗಿ ತೋಡಿಶಿ, ಅದರಲ್ಲಿ ಮೀನು ಮೊಸಳೆ ಮುಂತಾಗಿ ನಿಲ್ಲುವಂತೆ ನೀರ್‍ರು ಬಂದ ಕಾರಣ, ಯೀ ಕೋಟೆ ಕಟ್ಟಿ ಊರ್‍ರು ಮುಂದಿನ ಕೆರ್‍ರೆಯನ್ನು ಕಟ್ಟಿಸಿದರು."[೨೨]

**ಉಮ್ಮತೂರು ಸಂಸ್ಥಾನದ ಭುಜಂಗರಾಯ (ತಲಕಾಡು ಕೈಫಿಯತ್ತು)**

"ಯಿವನ ಕಾಲದಲ್ಲಿ ಉಮ್ಮತ್ತೂರಿರ ಸಂಸ್ಥಾನದ ಭುಜ[+ಂ]ಗರಾಯರಯ ಪ್ರಬಲವಾಗಿ ಆಲೋಚನೆ ಮಾಡಿದರಿಂದ ತನ್ನಯ ಸಂಸ್ಥಾನಕ್ಕೆ ಯೀ ನಗರಪುರಿಪಟ್ಟಣ ಸಮೀಪವಾಗಿದೆಯಂಬುದಾಗಿ ಯೋಚಿಸಿಕೊಂಡು, ತನ್ನ ಘುಜುಗಳನ್ನೆಲ್ಲ ತಯ್ಯಾರು ಮಾಡಿಕೊಂಡು, ಯೀ ಪಟ್ಟಣದ ಮೇಲೆ ಜಗಳಕ್ಕೆ ಬಂದು ಯುದ್ಧವನ್ನು ಮಾಡಿದನು. ಯೀ ಯುದ್ಧದಲ್ಲಿ ಸಕಳೆದಣ್ಣಯಕನು ಮೃತವಾದನು. ಯೀ ಮೇಲೆ ಭುಜಂಗರಾಯರು ಪಟ್ಟಣವನ್ನು ಕೈವಶ ಮಾಡಿಕೊಂಡು, ಬಂದೋಸ್ತು ಮಾಡಿಕೊಂಡು ರಾಜ್ಯ ವರುಷ ೪೫"[೨೩]

**ದೇವರಾಯ ಆನೆಗೊಂದಿ ಸಂಸ್ಥಾನ – ಸೋಮರಾಜ ವಡೆಯ (ತಾಲೂಕು ಕಂಪಿಲಿ ಕೈಫಿಯತ್ತು)**

"ಕಲಿಯುಗದಲ್ಲಿ ಶಾಲಿವಾಹನ ಶಕ ವರುಷ ೭೮೪ ... ಸು ತ್ತಳಕಾಡು ಸಣ್ಣ ಗ್ರಾಮಯನಿಸಿಕೊಂಡು ಯಿರಲಾಗಿ. ಆನೆಗೊಂದಿ ಸವಸ್ತಾನದ ದೇವರಾಯರ

ಯಂಬ ರಾಯರ ಕಡೆಯಿಂದಾ ಸೋಮರಾಜ ವಡೆಯಯೆಂಬ ವಡೆರಿಗೆ ಹನ್ನೆರಡು ಸಾವಿರ ಶೀಮೆ ಉಂಬಳಿಗೆ ಅಪ್ಪಣೆ ಆದ್ದರಿಂದ ಯೀ ... ದಕ್ಷಿಣ [ದೇ+] ಶಕೆ ಸ್ಥಳಾ ನಿರೀಕ್ಷಿಸುತ್ತ ಬಂದಲ್ಲಿ ... ಯಿಗಳು ... ಕಾವೇರಿ ಚತುರವಾಹಿನಿ ತೀರ ಕ್ಷೇತ್ರ ಮಹಾತ್ಮೆಯನ್ನು ಕೇಳಿದಂತಾವರಾಗಿ ಯೀ ಸ್ತಳ ಬಹಳ ಪ್ರಶಸ್ತವಾದುದು ಕಂಡು. ತಮ್ಮ ಧಣಿಯಾದ ... ವಂಥಾವರಿಗೆ ಬರದು ಕೊಟ್ಟದಕೆ ಅವರ ಕಡೆಯಿಂದಾ ತಳಕಾಡು, ಸಾವಿರ ಸೀಮೆಯನ್ನು ಸೇರಿಸಿಕೊಳ್ಳುವಂಥಾದು ... ಪನೆಯನ್ನು ತರಿಸಿಕೊಂಡು, ಯೀ ಸ್ಥಳವನ್ನು ಕಟ್ಟಿ...ನ್ನು ಮಾಡಿಕೊಂಡು, ಕೋಟೆಯನ್ನು ಕಟ್ಟಿಶಿ. ದೇವಸ್ಥಾನ ಜೀರ್ನೋದ್ದಾರ ಮಾಡಿದಂಥಾದು ಶಾಲಿವಾಹನ ಶಕವರುಷ...೭೮೫."[೭೪]

**ತಿಮ್ಮಣ್ಣ ಧಣಾಯಕ (ನಾಗಮಂಗಲ ಕೈಫಿಯತ್ತು)**

"ಆ ತರುವಾಯ ಯೀ ಲಕ್ಷ್ಮಮ್ಮನು ಯೀ ರಸಾ ತುಂಬಿದ ತೆಂಬಗೆಯನ್ನು ಅಡಿಗೆಮನೆ ವಳಿಗೆ ವಲೆಯ ಮೇಲುಕಡೆಯಲ್ಲಿ ಶಿಕ್ಕದ ಮೇಲಿರಿಸಿ, ತಾನು ತನ್ನ ಮಕ್ಕಳಿಗೆ ಉಣುವ ಬಗ್ಗೆ ರೊಟ್ಟಿ ಮಾಡುವುದಕ್ಕೆ ಕಬ್ಬಿಣದ ಕಾವಲ್ಲಿಯನ್ನು ವಲೆ ಮೇಲೆ ಮಡಗಿ, ರೊಟ್ಟಿ, ಮಾಡುವುದಕ್ಕೆ ಆರಂಭಿಸಲಾಗಿ, ಯೀ ಬೆಂಕಿ ತಾಪದಿಂದಾ ಆ ರಸದ ಚಟಗೆಯಿಂದಾ ವಂದು ಬಿಂದು ದ್ರುವಿಶಿ ಯೀ ಕಬ್ಬಿಣ ಹಂಚಿನ ಮೇಲೆ ಬೀಳಲಾಗಿ, ಯೀ ರೊಟ್ಟಿ ಕಾವಲಿಯ ಸುವರ್ಣವಾಯಿತು. ಯೀ ಆಶ್ಚರ್ಯ ನೋಡಿ ತನ್ನ ಮಗ ತಿಮ್ಮಣ್ಣ ಕಡೆ ಹೇಳಿದಲ್ಲಿ ಯಿದನ್ನು ನೋಡಿ ಯೀತನು ಆಶ್ಚರ್ಯಂಬಟ್ಟು ಯಿದಕ್ಕೆ ಯೇನು ಕಾರಣ? ಯಂದು ಆಲೋಚಿಸಿ ಯೀ ರಸವನ್ನು ನಮ್ಮಲ್ಲೆ ಯಿರಿಸಿಕೊಳ್ಳಬಾರದು ಯಂದು. ಅಂಗೈ ರಾಜ್ಯಕ್ಕೆ ಪ್ರಭುಗಳಾಗಿರುವ ನರಪತಿ ಸಂಸ್ಥಾನ ವಿಜಯನಗರದ ಅರಸ್ಸುಗಳು ಸಾಳುವ ಕ್ರಿಷ್ಣರಾಯರ ಬಳಿಗೆ ವೈದು ಕೊಡಬೇಕೆಂದು ನಿಶ್ಚೈಸಿ, ಆ ರಸದ ಚರಿಗೆಯನ್ನು ತೆಗೆದುಕೊಂಡು ವಿಜಯನಗರಿಗೆ ಅರಸಾದ ಸಾಳ್ವ ಕೃಷ್ಣರಾಯರ ಬಳಿಗೆ ವೈದು ಕೊಡಲಾಗಿ, ಆ ರಾಯರ್ರು ಯಿದರ ಪರೀಕ್ಷೆ ಮಾಡಿಶಿ, ಯೀತನು ಪ್ರಾಮಾಣಿಕನೆಂದು ಯೀತಗೆ.... ಉಡುಗೋರೆ ಉಚಿತವನ್ನು ಕೊಟ್ಟು, ಧಣಾಯಕನೆಂಬ ಹೆಸರು ಕೊಟ್ಟು ಯೀ ದಕ್ಷಿಣದೇಶದಲ್ಲಿ ನೀನು ಪ್ರಭುನಾಗಿ ಫೌಜು ಬಂದಿಯನ್ನು ಮಾಡಿಕೊಂಡು ಯಿರುವದೆಂದು ಕಿಕ್ಕೇರಿ ಉಭಯ ... ಅಷ್ಟಗ್ರಾಮಕ್ಕೆಲ್ಲಾ ಲಾವಣೀ ನಿರ್ಣಯ ಮಾಡಿಕೊ ಯಂದು ಹೇಳಿ, ಆ ಸಿದ್ಧರಸವನ್ನು ತಿರುಗಿ ಕೊಟ್ಟು, ಕುದುರೆ ಕುರಲೆ ಅಪ್ತಾಗಿರಿ ಮೊದಲಾದ ಬಹುಮಾನವನ್ನು ಕೊಟ್ಟು ಕಳುಹಿಸಲಾಗಿ, ಆ ಮಹಾರಾಯರ ಅಪ್ಪಣೆ ತೆಗೆದುಕೊಂಡು ಬಂದರು."[೭೫]

**ದಣಾಯಕರು (ನಗರಸೀಮೆ ಕೈಫಿಯತ್ತು)**

"ಮಂಚಿ ದದಣಾಕ, ಭೀಮ ದಣಾಯಕ, ಪೆರಮಾಳ ದಣಾಯಕ ಯವನ ತಮ್ಮನಾದಲಂಥಾ ಪೆರಮಾಳಡಣಾಯಕರು ಯಂಬವನು ಆಳಿದ ವರುಷ ೩೫. ಯೀ ಪ್ರಕಾರ ಆಳಿಕೊಂಡು ಯಿದ್ದರು. ಆ ತರುವಾಯ ತಮ್ಮ ಫವುಜಿಗೆ ರಾಜ್ಯ ಸಾಲದು ಯಂದು ತಮ್ಮ ತಮ್ಮ ವಳಗೆ ಆಲೋಚನೆ ಮಾಡಿಕೊಂಡುಮ ಬೆಟ್ಟದಕೋಟೆಗೆ ಲಡಾಯ ಹೋದ ವಿಮಾ.... ೪೦೦ ನೂರು ಕುದುರೆ ೩೦೦ ವಂಟೆ ನಾಲ್ವತ್ತು ಸಾವಿರ ಯತ್ತು ಮುಂತಾದ ಪಾಯದಳಾ ತೆಗೆದುಕೊಂಡು, ಬೆಟ್ಟದ ಕೋಟೆ ಮೇಲೆ ದಳವಾಯಿ ಲಗ್ಗೆ ಹೋಗಿ, ಆ ದುರ್ಗವನ್ನು ಮುತ್ಗೆ ಹಾಕಿ, ಮೂರು ವರುಷ ಪರಿಯಂತ್ರ ಈ ಲಡಾಯ ಮಾಡಿದರು. ಕಡೆಗೆ ಯಿವರಿಗೆ ನಿವಾ [+೯] ಹವಿಲ್ಲದೆ ಯೀ ಫೌಜು ಸಾಲದೆಯಿದ್ದದ್ದರಿಂದ, ಯಿವರು ವಂದು ದಿವಸ ರಾತ್ರಿ ತಮ್ಮ ಯೇಳು ಸಾವಿರ ಯತ್ತುಗಳಕ[>ತ]ರಸಿ ಅದರ ಕೊಂಬಿಗೆ ಪ[>ಕ] ಡೆಯಲಿ ದೀವಟಿಗೆ ಕಟ್ಟಿಶಿ, ಯೀ ಯೆತ್ತುಗಳನ್ನೆಲ್ಲ ಆ ಗಾ[>ಗ]ಡಿವಳಗೆ ಯೀ ಯತ್ತುಗಳ ಹಿಂದುಗಡೆ ತಮ್ಮ ದಂಡುಗಳೆಲ್ಲ ತಮ್ಮವರು ಮಡಿಶಿ. ಯೇಕಾಯೇಕ ದುರ್ಗದ ಮೇಲೆ ಹಲ್ಲೆ ಮಾಡಿದರು. ಆವಾಗೆ ದುರ್ಗದ ಮೇಲೆ ಯಿದ್ದಾಮಂಚಿದಣ್ಣಾಯಕ ಯೀ ದಂಡನು ನೋಡಿ ಬಹಳ ದಿಗಲು ಪಟ್ಟು, ಯಿದೆ ಯಿಷ್ಟು ಯಿದೆಯಲ್ಲಾ, ಯಿನ್ನು ಎಷ್ಟು ದಂಡು ಬರುತ್ತ ಯಿದೆಯೋ ಹ್ಯಾಗೆ ಯೀ ದುರ್ಗ ತೆಗೆದುಲೊಳ್ಳತ್ತಯಿದ್ದರೆ ಯಿವರ ಕೈಶೆರೆ ಸಿಗಬಾರದು ಯಂದು ತನ್ನ ಕುದುರೆ ಮೇಲೆ ಕುಳಿತುಕೊಂಡು ಕಮರಿ ವಳಿಗೆ ಬೀಳಬೇಕು ಯಂಬುದಾಗಿ ಕುದುರೆಯನ್ನು ಹೊಡದಲ್ಲಿ, ಆ ಕುದುರೆ ಕಮರಿಗೆ ಬೀಳದೇ ಹಿಂಕ್ಕೆ ಹೋಯಿತು. ಆದ್ದರಿಂದ ತಮ್ಮ ವ್ರಾಸವನ್ನು ಕಮರಿಗೆ ಹಾಕಿದ, ಆ ಮೇಲೆ ಕುದುರ್ರೆ ತಾನ್ನು ಸಹಾ ಕಮರಿಗೆ ಬಿತ್ತು. ಯೀ ಕುದುರೆ ಹೆಜ್ಜೆ. ಟಗರಿನ ಹೆಜ್ಜೆ, ನಾಯಿಯ ಹೆಜ್ಜೆ ಈಗಲೂ ಸಹ ಕಮರೀ ಕಲ್ಲಿನ ಮೇಲೆ ಯಿದೆ. ಯೀ ಸಮಾಚಾರ ಅವನ ಹೆಂಡತಿಯಾದಂತಹ ಸುಗ್ಗಲೆಯಂಬವಳು ಕೇಳಿ ತಾನು ಹೆಂಗಸು, ತಾನ್ನು ಕೈಸೆರೆ ಸಿಕ್ಕಬಾರದು. ಸಿಕ್ಕಿದರೆ ಅಭಿಮಾನ ಹೋಗಬಾರದುಯಂದು ಅಗ್ನಿಪ್ರವೇಶವಾದಳು.

ಆ ತರುವಾಯ ಯೀ ನಾಲ್ಕು ಡಣಾಯಕರು ದುರ್ಗದ ಖಿಲ್ಲಾ ಬಂದೋಬಸ್ತು ಮಾಡಿಕೊಂಡು, ದುರ್ಗದ ಮೇಲೆ ಠಾಣ್ಯ ಹಾಕಿಕೊಂಡು. ದುರ್ಗದ ಗು[>ಗ]ಡಿಯನ್ನೇ ಗೊತ್ತು ಮಾಡಿ, ಹಿರಿಯನಾದ ಭೀಮಡಣಾಯಕನು ರಾಜಾ [>ಜ್ಯಾ] ಬಂದೋಬಸ್ತು ಮಾಡಿಕೊಂಡು, ನಗರಾಪುರಿಪಟ್ಟಣವನ್ನು ಬೆಟ್ಟದಕೋಟೆ ಸೇರಿದ ಗಡಿ ಹಾಗೆ ಮಾಡಿಸಿ ತನ್ನ ಪುತ್ರನಾದ ಅಚ್ಚಡಣಾಯಕಗೆ ಈ ಗಡಿ ಆಳುವ ಹಾಗೆ ನೇಮಕಮಾಡಿ,

ತಾಯಿಂದರೂ ಸಹ ಯಿಲ್ಲರು ಹಾಗೆ ಮಾಡಿ ಢಣಾಯಕರು ತಮ್ಮ ತಮ್ಮ ವಳಗೆ ತಮ್ಮ ಪಉಜಿಗೆ ರಾಜ್ಯ ಸಾಲದು ಯಂದು ಆಲೋಚನೆ ಮಾಡಿ ತಮ್ಮ ಫವುಜು ತಯ್ಯಾರಿ ಮಾಡಿಕೊಂಡು ಪರರಾಷ್ಟ್ರಕ್ಕೆ ಹೋಗಿ ಯುದ್ಧಾಮಾಡಿ, ರಾಜ್ಯಾ ಸಾಧ್ಯಮಾಡಿ ಕಟ್ಟಿಕೊಂಡ ವಿವರಾ:"[೭೬]

**ಬೆಳಗತ್ತಿ ಅರಸುಗಳ ವಂಶಾವಳಿ (ಬೆಳಗತ್ತಿ ಅರಸುಗಳ ವಂಶಾವಳಿ ಕೈಫಿಯತ್ತು)**

"ಬೆಳಗತ್ತಿ ಚಲುವರಂಗಪ್ಪ, ನಾಯಕ, ಮಾರಭೂಪರಾಯ, ಶೂರಭೂಪರಾಯ, ದೇವರಾಯ, ಅರಿಮಾಧವರಾಯ, ವೆಂಕಟಾದ್ರಿರಾಯ, ರೋಮಕೋಟಿರಾಯ, ಯಲ್ಲಣ್ಣನಾಯ್ಕ, ದಾಸಪ್ಪ, ನಾಯಕ, ತಿಮ್ಮಪ್ಪನಾಯಕ, ದೊಡ್ಡಪ್ಪನಾಯಕ, ಸೋಮಪ್ಪ ನಾಯಕ, ನರಸಪ್ಪ ನಾಯ್ಕ, ವೆಂಕಟಪ್ಪ ನಾಯ್ಕ, ತರಿಕೆರೆ ಹನುಮಪ್ಪ ನಾಯಕ ಬಂಕಾಪುರದ ರಂಗಪ್ಪರಾಜ. ಚಲುವಪ್ಪ ರಂಗಪ್ಪನಾಯಕ.

ಶಾಲಿವಾಹನ ಶಕ ವರುಷ ೧೨೫೮, ಧಾತು ಸಂವತ್ಸರದಾ ವೈಶಾಖ ಶು ೭ ಆದಿತ್ಯವಾರ ವಿಜಯನಗರದಲ್ಲು ರಾಯಸಿಂಹಾಸನಕ್ಕೆ ಹರಿಹರ ಮಹಾರಾಯರವರಿಗೆ ಪಟ್ಟಾಯಿತು. ಯಿವರ ಮಗ ದೇವರಾಯರಯ.

ಯೀ ದೇವರಾಯ ಮಗಳ ಮಗ ಚಲುವರಂಗಪನಾಯ್ಕರು. ಯಿವರು ಆನೆಗೊಂದಿಯಿಂದ ಅಮರಮಾಗಣಿಯಾಗಿ ಅಪ್ಪಣೆ ತೆಗೆದುಕೊಂಡು ಫವುಜು ಮಂದಿ ಮುಂತಾಗಿ ಸಹ ಸಿರಿಗೆರೆ ಬಳಿನಾಡ [ಬೆಳನಾಡು] ವಳಗಣ ತುಂಗಭದ್ರಾತೀರ ದಿಡಗೂರು ಕಿಲ್ಲೆದಲ್ಲು ಶಕ ಶಾಲಿವಾಹನ ೧೨೮೦ ವಿಳಂಬ ಸಂವತ್ಸರದಲ್ಲು ಬಂದು ಠಾಣ್ಯ ಹಾಕಿದರ್‍ರು."[೭೭]

**ದೇವಪ್ಪದಣ್ಣಾಯಕ (ಆನೆಕನ್ನಂಬಾಡಿ ಕೈಫಿಯತ್ತು)**

"ಪೂರ್ವದಲ್ಲಿ ಮಲಪತ್ತುಯಾಗಿ ಯಿದ್ದಲ್ಲಿ, ದೇವಪ್ಪದಣ್ಣಾಯಕರು ಯೀ ಊರಿಂದಾ ಬಾಲ್ಯದಲ್ಲಿ ವಿಜಯನಗರಕ್ಕೆ ಹೋಗಿ, ಅಲ್ಲಿ ಕರಣಿಕರಾ ಮನೆಯಲ್ಲಿ ಶೇರಿದರು. ಅವರ ಮನೆಯಲ್ಲಿ ಕೆಲವು ಕಾಲವು ಯಿದ್ದರು. ವಿಜಯನಗರದ ದೊರೆರಾಯರ್‍ರು ಅರಮನೆಯಲ್ಲಿ ಅರ್ಧರಾತ್ರಿಯಲ್ಲಿ ಬೊಕ್ಕಸದ ಗೊಲ್ಲರು ಕೆಲವು ಜನರು ಬೊಕ್ಕಸದ ಹಣವನ್ನು ಕದ್ದು ತೆಗೆದುಕೊಂಡು ಹೋಗುತ್ತಾಯಿದ್ದರು. ಅರಮನೆ ಬಾಗಿಲಲ್ಲಿ ಯೀ ದೇವಪ್ಪದಣ್ಣಾಯಕರು ಅಲ್ಲಿ ಕರಣಿಕರ ಸಂಗಡ ಅರಮನೆಗೆ ಹೋಗಿ ಹೊರಬಾಗಲಲ್ಲಿ ಯಿದ್ದರು. ಯೀ ಕರಣಿಕರು ಮನೆಗೆ ಬರುವಾಗ ನಿದ್ರೆಗೈಯುತ್ತಾ ಯಿವರ

ಸಂಗಡ ಬರಲಿಲ್ಲ. ಆ ವೇಳೆಯಲ್ಲಿ ಯೀ ಹಣ ತೆಗೆದುಕೊಂಡು ಹೋದ ಕಳ್ಳರು ಮನಗಿದ್ದ ದಣ್ಣಾಯಕರ ಕಂಡು ಭಯದಿಂದಾ ಯೀ ಹಣವನ್ನಿ ಅರಮನೆಯ ಭೂಮಿ [ಭಾವಿ] ಯ ವೊಳಕ್ಕೆ ದಡಮ್ಮನೆ ಯೆತ್ತಿ ಹಾಕಿ ವೋಡಿಹೋದ ಶಬ್ದವನ್ನು ಕೇಳಿ ದಣ್ಣಾಯಕರು ಆ ತಿಥಿ, ವಾರ ಹೊತ್ತಗೆ ಬರದು ಯಿಟ್ಟುಕೊಂಡು ಯಿದ್ದರು.

ಕೆಲವು ದಿವಸದ ಮೇಲೆ ರಾಯರ್‍ರು ಬೊಕ್ಕಸದ ಆದಾಯ ವೆಚ್ಚ ವಿಚಾರಿಸುವಾಗ್ಯೆ. ಬಹಳ ಹಣಾ ಕಡಮೆ ಆಗಿದ್ದರಿಂದ ಆ ಕರಣಿಕರ ಮೇಲೆ ಕೋಪಾಮಾಡಿ [>ಡೆ] . ಅವರ್‍ರು ಮನೆಗೆ ಬಂದು ವೆಸ [+ನ] ಪಟ್ಟುಕೊಂಡು ಯಿದ್ದ ಸಮುದಾಯದಲ್ಲಿ. ಅವರ ಸೇವಕ ದೇವಪ್ಪದಣ್ಣಾಯಕರು. ಸ್ನಾನಾದಿಗಳಿಗೂ ಯೇಳದೇ ಯಿದ್ದಲ್ಲಿ ಅವರಿಗೆ ಮನಸ್ಸು ಸಮಾಧಾನವಾಗುವ ರೀತಿ ಕೇಳಿದಲ್ಲಿ. ಆ ಕರಣಿಕರು ಈ ದ್ರವ್ಯ ಹೋದ ಪೂರ್ವೋತ್ತರಕ್ಕೆ ರಾಯರು ಬಹಳಾ ಸಿಟ್ಟು ಆಗಿಯಿದ್ದಾರೆ ಯೆಂಬುದನ್ನು ದಣ್ಣಯಕರು ಕೇಳಿ. ಯೆನ ಮಾತು, ಯೇನು ಇದ್ದಾಗ್ಯೂ ವಿಚಾರಿಸಿ ಗೊತ್ತು ಮಾಡುತ್ತೇನೆ ಯೆಂಬುದಾಗಿ ಬರವಸೆ ಕೊಟ್ಟು ಯೆಬ್ಬಿಸಿಕೊಂಡು ಭೋಜನಾನಂತರ ಕರಣೀಕರೂ ದಣ್ಣಾಯಕರೂ ಸಹ ಅರಮನಿಗೆ ಹೋಗಿ. ಆ ದಿವಸ ಬರದುಯಿದ್ದ ತಿಥಿ ವಾರದಲ್ಲೂ ದೃಡವಾಗಿಸಿ ಭಾವಿಯಲ್ಲಿ ಆಗಿಯಿದೆ ಯೆಂಬಾ ಗುರುತಂ ಬರದುದನ್ನು ಶೃತ ಮಾಡಲಾಗಿ, ಆ ಭಾವಿಯನ್ನು ಶೋಧಿಸಲಾಗಿ ಆ ದ್ರವ್ಯ ಜಿಕಿಕ್ಕಿ ಪೂರ್ವ ವ್ಯತ್ಯಾಸವಾಗಿಯಿದ್ದ ಹಣದ ಲೆಕ್ಕಕ್ಕೆ ಯಿಲ್ಲಿ ತಗದ ಹಣದ ಲೆಕ್ಕಕ್ಕೆ ಸರಿಯಾಗಿದ್ದದರಿಂದ ಆ ದೊರ್‍ರೆಗಳಿಗೆ ದಯೆ ಬಂದು, ಡಣಾಯಕರನ್ನು ಯೇನು ಬೇಕು? ಯಂದು ಕೇಳಿದಲ್ಲಿ. ಯಿವರು ರಾಯರನ್ನು ಕೇಳಿಕೊಂಡಿದ್ದು ಹೇಮಾವತಿಗೆ ಕಟ್ಟೆ ಕಟ್ಟಿಶಿ. ಆ ಕಾಲುವೆ ಕೆಳಗೆ ಅನೇಕ ಪೈರು ಮಾಡಿಶಿ ಅಲ್ಲಿ ವಂದು ಪ್ರತಿಮೆ ಕಟ್ಟಿಸು ಹಾಗೆ ಅಪ್ಪಣೆ ಕೊಡಬೇಕು ಯೆ ಂಬುದಾಗಿ ಅರಿಕೆ ಮಾಡಿದ್ದರಿಂದ. ರಾಯರು ಅದಕ್ಕೆ ತಕ್ಕ ದ್ರವ್ಯ ಬಹುಮಾನ ಸಹಾ ಕೊಟ್ಟು ಯೀ ದೇಶಕ್ಕೆ ಕಳುಹಿಸಿ ಯಿ ದಣ್ಣಾಯಕರು ಅಲ್ಲಿಂದಾ ಯೀ ದೇಶಕ್ಕೆ ಬಂದು, ಬೀಳುಗುಳಿಗ್ರಾಮ ಸಮೀಪದಲ್ಲಿ ಹೇಮಾವತಿಗೆ ಕಟ್ಟೆ ಕಟ್ಟಿಸಿ ಯೀ ನದಿ ದಕ್ಷಿಣ ತೀರದಲ್ಲಿ ಕಾಲುವೆ ತೆಗೆದುಕೊಂಡು ಬಮದು, ಯಿಲ್ಲಿ ಪೂರ್ವಯಿದ್ದ ಕೆರಿಗೆ ನೀರು ತಮದು. ಪಟ್ಟಣದ ಹೊಸ ಸ್ತಳದಲ್ಲಿ ಕಟ್ಟಬೇಕುಯೆಂಬುದಾಗಿ ಯೋಚಿಸಿ, ರಾಯರು ಕೊಟ್ಟುಯಿದ್ದಾ ಆನೆಗೆ ಶೃಂಗರಿಸಿ ಕೊರಳು ಮಾಲಿಕೆ ಹಾಕಿ. ಮಾವಟಿಗೆ ವಿನಾ ಸಭೆಯಲ್ಲಿ ಬಿಟ್ಟರೆ ಯಾವ ಬಳಿಯಲ್ಲಿ ಮೂರು ಮುಕ್ಕಾಲು ಗಳಿಗೆ ನಿಲ್ಲುತ್ತೋ ಯಾವ ದಿಕ್ಕಿಗೆ ಅಭಿಮುಖವಾಗಿ ನಲ್ಲತ್ತೊ. ಅಮುಖದ ಭಾಗವು ಅದು ನಿಂತ ಜಿಳಿಯ ಅರಮನೆ ಪಟ್ಟಣ ಸಹಾ ಕಟ್ಟಿಸಬೇಕು ಯಂಬುದಾಗಿ ನಿಶ್ಚಯ ಮಾಡಿ. ದೇವತಾ ಪ್ರರ್ಥನಾ

ಪುರಾಃಸರವಾಗಿ ಆನೆಯನ್ನು ಶೃಂಗರಿಸಿ, ಶುಭಮುಹೂರ್ತದಲ್ಲಿ ಅಂಕಾ [>ಕು] ಶ ವಿನಃ ಬಿಟ್ಟಲ್ಲಿ ಆ ಆನೆ ಯೀ ಸ್ಥಳದಲ್ಲಿ ಬಂದು ನಿಂತು ಪೂರ್ವಾಭಿಮುಖವಾಗಿ ಆರ [>ಆ] ರ್ದ ಯಾಮ ತನಕು ಸ್ಥಿರವಾಗಿ ಯಿದ್ದುದರಿಂದ ದೇವಪ್ಪದಣ್ಣಾಯಕರ್ರು ಸಂತೋಷಪಟ್ಟು ಇಲ್ಲಿ ಪಟ್ಟಣ ಕಟ್ಟಿಸಿ, ಆನೆಕನ್ನಂಬಾಡಿಯೆಂಬ ನಾಮಧೇಯವಿಟ್ಟು ಮೂಡುಬಾಗಲು ಮಾಡಿ ಅರಮನೆ ಮುಂತಾದ್ದು ಕಟ್ಟಿಶಿ, ಶಾಲಿವಾಹನ ಶಕ ೧೨೨೮ ನೆ ನಳಸಂವತ್ಸರದಲ್ಲಿ ಸಂನ್ಮಮುಹೂರ್ತದಲ್ಲಿ ಯೀ ಗ್ರಾಮ ಗೃಹಾಪ್ರವೇಶ ಮಾಡಿ. ಬಹು ದಿವಸ ಸುಕಸಂತೋಷದಲ್ಲಿ ಇರುವಾಗ್ಯೆ ಈ ಪಟ್ಟಣದಲ್ಲಿ ಆನೆಕನ್ನಂಬಾಡಿಯಲ್ಲಿ ಜಕ್ಕಣಾಚಾರಿಯನ್ನು ಕರೆ ಕಳುಹಿಸಿಕೊಂಡು ಯೀ ನರಸಿಂಹದೇವಸ್ಥಾನ ಕಟ್ಟಿಸಿದರು.

ಯೀ ಕನ್ನಂಬಾಡಿ ಕ [>ಕೆ] ರೆ ಕೆಳಗೆ ಖ॥ಂ ಕೊಳಗ ಹೊಲಾ, ಕರಿ ಗ೬ ವರಹಾ ಸಹಾ ಪೂರ್ವದಲ್ಲಿ ಬಿಟ್ಟುಕೊಟ್ಟು ಯಿತ್ತು ಸೇವಾರ್ತಗಳು ಬಹುಕಾಯಾದ ಮೇರ್ರಿಗೆ ನಡದು ಬರುತ್ತಾ ಯಿತ್ತು. ಕೆಲವು ಕಾಲದ ಮೇಲೆ ನರಸಿಂಹಪುರದ ನಾಯಕರ ಹವಾಲಗೆ ಯೀ ಆನೆಕನ್ನಂಬಾಡಿ ಸೇರಲಾಗಿ ಅವರು ಯೀ ಪೂರ್ವ ಪ್ರಕಾರವೇ ನಡಿಯುವ ರೀರಿಯು ಆಲಿ [>ಅಲ್ಲಿ] ಭಕ್ತಿಯಿಂದ ವಿಚಾರಿಸಿ ನಡಸುತ್ತಲೇ ಯಿದ್ದರು. ಹೋದ ಶೋಭಕೃತ ಸಂವತ್ಸರದಲ್ಲಿ ಯೀ ಗ್ರಾಮ ಭೂಮಿಗಳು ಜಪ್ತಿಯಾಗಿ ಯಿದ್ದು, ರವೂದ್ರಿ ಸಂಚತ್ಸರದಲ್ಲು ಮಹಾರಾಜಶ್ರೀಯವರ ಅಪ್ಪಣೆಯಿಂದಾ ಕರೀ ಗ ೫೯೨॥ ಭೂಮಿ ಪಡಿತರ ಬಗ್ಯೆ ನಡದು ಬರುತ್ತಯಿದೆ. ಯೀ ದೇವರ ಆಳಿಕೆ ವೈಖಾನಸ ತಿಮ್ಮಪ್ಪಯ್ಯ."[೭೮]

**ಚನ್ನಪಟ್ಣದ ಜಗದೇವರಾಯ (ಕೈಫಿಯತ್ತು ತಾಲುಕು ಅಜಂಪುರ)**

"ಆಮೇಲೆ ರಾಮರಾಯರ ಕಾಲದಲ್ಲಿ ಶಕವರುಷ ೧೪೮೦ ರಕ್ತಾಕ್ಷಿ ಸಂ॥ಲ್ಲು ರಾಣಾ [ಜ+] ಗದೇವಯಿರಗೆ ದಯಪಾಲಿಸಿದ್ದರಿಂದ ಯಿವರು ಮೊದಲು ಚೆನ್ನಪಟ್ಣದಲ್ಲಿದ್ದುಕೊಂಡು ಗಡಿ ೪೬ ಗಡಿ ಶೀಮೆಯನ್ನು ಆಳಿದು. ಶಕವರುಷ ಸಿದ್ದಾರ್ಥಿ ಸಂ। ಆರಭ್ಯಾ ಶಕವರುಷ ೧೫೩೧ ನೇ ಸವುಮ್ಯ ಸಂ। ವರಿಗೆ ಆಳಿದ ವರುಷಾ ೫೧."[೭೯]

**ಜಗದೇವರಾಯ (ನಾಗಮಂಗಲ ಕೈಫಿಯತ್ತು)**

"ಯಿದರ ಶಿವಾಯ ಅಗ್ರಹಾರ ಉತ್ತರಗಳ ಬಿಟ್ಟಿರುವುದಕ್ಕೆ ಸಹಾ ಹಾಜರಿರುವ ಸನ್ನದಿ ನಕಲು ಅಗ್ರಹಾರಗಳು ಉತ್ತಿ ವಿವರಾ. ಗ್ರಾಮಗಳ ವಿವರಾ ಸಹಾ ... ದ ಪಟ್ಟಿ ಬರಶಿಯಿದೆ. ಯೀ ಪ್ರಕಾರ :

ಯೀ ಜಗದೇವರಾಯನ ಸಂತತಿಯವರು ಆಳಿದ್ದು ರಾಣಾ ದೊಡ್ಡ ಜಗದೇವರಾಯ, ಆತನ ಮಗ ಅಂಕುಶದೇವರಾಯ ... ಜಗದೇವರಾಯ, ಯೀತನ ಮಗ ಅಂಕುಶದೇವರಾಯ ಯೀತನ ಮಗ ಜಗದೇವರಾಯ, ಶಾಲಿವಾಹನ ಶಕ ೧೫೪೭ ನೇ ವರ್ಷವಾಂತು ಪರಿಯಂತ್ರ ಅಂತು ಜನ ೫ ರಾಜ್ಯಭಾರ ಮಾಡುತ್ತಾಯಿದ್ದರು. ಆ ತರುವಾಯ ಯೀ ಐದು ಮಂದಿ ಅರಸುತನದ ಆದ ತರುವಾಯ ಯಿವರ ತಾಲೂಕ್ಕಲ್ಲಿ ಯಿದ್ದ ಶೀಮೆಗಳು ಹಟಿಗೋಟವಾದರಿಂದಾ ಆಗ್ಯೆ ಶ್ರೀರಂಗಪಟ್ನ ಆಳುತ್ತಾ ಯಿರ್ರುವ ಶೀಮೆಗಳನ್ನೆಲ್ಲ ಮೈಸೂರವರ ತಾಬೆಗೆ ಕೊಟ್ಟ ಮೇಲೆ, ಅವರು ಮೈಸೂರು ಶ್ರೀರಂಗಪಟ್ಟಣ, ಯೀ ನಗಮಂಗಲ ಮುಂತಾದ ಶೀಮೆಗಳ ಆಲಿಕೊಂಉ ಯಿರುವಾಗ್ಯೆ."[೮೦]

**ಜಗದೇವರಾಯ (ಹಾರನಹಳ್ಳಿ ಕೈಫಿಯತ್ತು)**

"೧ ತದನಂತರ ದಕ್ಷಿಣದೇಶದಲ್ಲು ಪಾಳ್ಯಾಪಟ್ಟಣ ... ಶಿಬಿದೇಶದ ಜನರಿಗೆ ಬಹಳ ನಿರ್ಬಂಧವಾದ ಕಾರಣ ಶ್ರೀಕೃಷ್ಣರಾಯರು ತಮ್ಮ ವಮಶಸ್ಥರಾದ ಜಗದೇವರಾಯರನ್ನು ಕರದು, ದಕ್ಷಿಣ ರಾಜ್ಯವನ್ನು ನಿಮಗೆ ಜಹಗೀರು ಸದನದ ಬರಶಿಕೊಡುತ್ತಯಿದ್ದೇವೆ. ಪಾಳೆ ಪಟ್ಟಗಿನವರನೆಲ್ಲ ಶಿಕ್ಷಿಸಿ ಯಾವತ್ತೂ ರಾಜ್ಯವನ್ನು ನಮಗೆ ಜಹಗೀರು ಸನದ ಬರಶಿಕೊಡುತ್ತ ಯಿದ್ದೇವೆ. ಪಾಳೆ ಪಟ್ಟಗಿನವರನೆಲ್ಲ ಶಿಕ್ಷಿಸಿ ಯಾವತ್ತೂ ರಾಜ್ಯವನ್ನು ಸ್ವಾಧೀನ ಮಾಡಿಕೊಂಡು ರಾಜ್ಯವನ್ನು ಪರಿಪಾಲನೆ ಮಾಡುತ್ತ ಬರುವುದು ಯಂಬುದಾಗಿ ರಣ ಜಗದೇವರಾಯನಿಗೆ ದಕ್ಷಿಣರಾಜ್ಯವನ್ನು ಜಹಗೀರು ಸನ್ನದ್ದು ಬರಶಿಕೊಟ್ಟು ಯೀ ರಣ ಜಗದೇವರಾಯರನ್ನು ಕಳುಹಿಸಿಕೊಟ್ಟಲ್ಲಿ. ಅವರು ಬಂದು ದುಷ್ಟ ಪಾಳೆ ಪಟ್ಟದವರನೆಲ್ಲ ಶಿಕ್ಷಿಸಿ. ರಾಜ್ಯವನ್ನು ತಮ್ಮ ಸ್ವಾಧೀನಮಾಡಿಸಿಕೊಂಡು, ಯಿವರ ವಮಶಸ್ತರು ರಾಜ್ಯಪರಿಪಾಲನೆ ಮಾಡಿದು.

ಯಿಮ್ಮುಡಿ ಜಗದೇವರಾಯ. ಯೀತನ ಮಗ ಜಗದೇವರಾಯ, ಯೀತನ ಮಗ ಅಂಕುಶ ರಾಯ ಸಹ ಆಳಿದರು."[೮೧]

**ಜಗದೇವರಾಯ, ಕುಮಾರ ಜಗದೇವರಾಯ (ಬೆಟ್ಟದ ಕೋಟೆ ಕೈಫಿಯತ್ತು)**

"ಯೀ ಶಖೆ ೧೦೮೧ ರಿಂದ ಮುಂದೆ ವಿಷ್ಣುವರ್ಧನರಾಯರ ಆಳಿಕೆಯಲ್ಲಿ ಪಂಚನಾರಾಯಣ ಪ್ರತಿಷ್ಟೆಗೆ ಮಳಿತವಾದ ವಿಜಯಾಪುರದ ವಿಜೆನಾರಾಯಣಸ್ವಾಮಿ ಪ್ರತಿಷ್ಠೆ. ಯೀ ಆಳಿಕೆ ಶಖೆ ೧೧೧೦ ವರ್‍ರಿಗೂ ಆಳಿದರು. ಯಿಲ್ಲಿಂದ ಮುಂದೆ ಶಖೆ ೧೨೮೦ ವರ್‍ರಿಗು ರಾಜ್ಯ ಅತಂತ್ರವಾಗಿ ಹಟ ಕೊಟ್ಟವಾಗಿ, ಚಂದಪ್ಪಬೇಡನು ಕಟಿಕೊಂಡು ತನ್ನ ಸ್ವಾಧೀನವಾದ ಶೀಮೆ ಅಗ್ರಹಾರ ದೇವಸ್ತಾನವನ್ನು ಕಟ್ಟಿಕೊಂಡನು. ಯಿಲ್ಲಿಂದ ಮುಂದೆ ಉಂಮ್ಮತ್ತೂರರಾಯರ ವಂಶಸ್ತನಾದ ದೇವರಾಯನು ರಾಜ್ಯವಂನ್ನು ಹೊಡದು ಕಟಿಕೊಂಡು ಶಖೆ ೧೩೪೦ ವರ್‍ರಿಗು ಆಳಿದರು. ತೆರಕಣಾಂಬಿ ಮೂಲಸ್ಥಾನದ ದೇವಸ್ಥಾನವನ್ನು ಜೀರ್ನೋದ್ಧಾರವಂ ಯಿಲ್ಲಿಂದ ಮುಂದೆ ಯೀ ವಂಶಸ್ತರಾದ ನಂಜರಾಯರು ಶಖೆ ೧೩೮೪ ರ ವರ್‍ರಿಗು ಆಳಿದರು ಯಲ್ಲಿಂದ ಮುಂದೆ ಯಿವರ ವಂಶಸ್ತ ಗೋವರ್ಧನರಾಯರ ಆಳಿಕೆ ಶಖೆ ೧೪೯೯ ರ ವರ್‍ರಿಗೂ ಆಳಿದರು. ಮುಂದೆ ಆನಂದ ಸಂವತ್ಸರದ ಫಾಲ್ಗುಣ ಶು ೫ ಶುಕ್ರವಾರ ಕೃಷ್ಣರಾಯರು ರಾಜ್ಯವನ್ನು ಕಟ್ಟಿಕೊಂಡು ಯಿವರ ಅಳಿಯ ಜಗದೇವರಾಯನಿಗೆ ಮುಖಾಶಿಯಾಗಿ ಕೊಟ್ಟದ್ದರಿಂದ, ಯೀ ಆರಭ್ಯ ಶಖೆ ೧೪೯೨ ರ ವರ್‍ರಿಗು ರಾಜ್ಯವನಾಳಿ ಯೀ ಮಧ್ಯದಲ್ಲಿ ೧೪೩೨ ವರುಷದಲ್ಲಿ ತ್ರಿಯಂಬಕಪುರದ ತ್ರಿಯಂಬಕೇಶ್ವರ ದೇವರಿಗೆ ಪಡಿತರ ದೇಪಾರಾಧನೆ ಬಗ್ಯೆ ಗ್ರಾಮ ಭೂಮಿಗಳ ಸಹಾ ಬಿಟ್ಟು, ಧರ್ಮದಿಂದ ೧೪೯೨ ವರ್‍ರಿಗೆ ಆಳಿದನು. ಯಿಲ್ಲಿಂದ ಮುಂದೆ ಪ್ರಮೋದೂತ ಸಂವತ್ಸರದ ಆರಭ್ಯ ಶಖೆ ೧೫೧೫ರ ಸಲುಮ್ಯ ಸಂವತ್ಸರದ ವರ್‍ರಿಗೆ ಶ್ರೀರಂಗರಾಯರು ಆಳಿದರು. ಯಲ್ಲಿಂದ ಮುಂದೆ ಅವರ ವಂಶಕ್ಕೆ ಮಕ್ಕಳು ಯಿಲ್ಲದೆಯಿದ್ದು, ಯಿವರ್‍ರಿಗು ಬೆಂನ್ನು ಫಣಿಯಾಗಿ ವೇದನೆಯನನು ಸಹಿಸಲಾರದೆ ಬದುಕೂದು ಯಿಲ್ಲವೆಂದು ತಿಳಿದು ತಾನು ಗಜಾರಂಣ್ಯಕ್ಷೇತ್ರಕೆ ಹೋಗಬೇಕೆಂದು ಯೋಚಿಸಿ, ಉಭಯ ಕಾವೇರಿ ಮಧ್ಯದ ಶ್ರೀರಂಗಪಟ್ಟಣದ ಸಂಸ್ಥಾನದ ಬೀಗಮುದ್ರೆ ಬೊಕ್ಕಸ ಮುಂತಾದ್ದನ್ನು ಮೈಹಿಶೂರ ಸಂಸ್ಥಾನದ ದೊರೆತನ ಮಾಡುವ ರಾಜವಡೆರೈಯನವರ್‍ರಿಗೆ ಯೀ ಸಲುಮ್ಯ ಸಂವತ್ಸರದ ಕಾರ್ತಿಕ ಬಹುಳ ೧೦ ಮಂಗಳವಾರ ದಿವಸ ಕೊಟ್ಟು ಬಿಟ್ಟು ಹೊರಟುಹೋದರು. ಯೀ ಆರಭ್ಯ ವರುಷ ೯ ಧೊರಿತನಾ ಮಾಡಿದರು.

ಯಿಲ್ಲಿಂದಾ ಮುಂದೆ ಯಿವರ ಮಗ ಯಿಮ್ಮಡಿ ರಾಜವಡೆಯರ ಆಳಿಕೆ ಶಖೆ ೧೫೭೫ ಯೀ ವರ್‍ರಿಗ್ಯೆ ಯಿವರ ಧೊರೆತನ ೨೩ ವರುಷ ಆಳಿದರು. ಯಿವರ ಕೊಮಾರ್‍ರು ಯಿಮ್ಮಡಿ ರಾಜವಡ್ರೇರು ೨ ವರುಷಕ್ಕೆ ಶಖೆ ವರುಷ ೧೫೨೨ ರ ಬರೆಗೆ ಆಳಿದರ್‍ರು.

ಯಿಲ್ಲಿಂದಾ ಮುಂದೆ ನಳೂರಲ್ಲಿ ಯಿದ್ದ ಕಂಠೀರವ ನರಸರಾಜ ವಡೆಯರವರ್ರು ಯಿಪ್ಪತ್ತು ಮೂರ್ರು ವರುಷಕ್ಕೆ ಶುದ್ಧ ಶೇಖೆ ೧೬೦೦ ಆಳಿದ್ದರು. ಯಲ್ಲಿಂದ ಮುಂದೆ ದೊಡ್ಡದೇವರಾಜ ವಡೆರ್ರ ಆಳಿಕೆ ೧೪ ವರುಷ. ತದನಂತರದಲ್ಲಿ ಯಿವರ ಕೊಮ್ಮಾರು ಚಿಕ್ಕದೇವರರಾಯರ ಆಳಿಕೆ ೩೩ ರಲ್ಲಿ ಯೀ ತೆರಕಣಾಂಬಿ ಶೀಮೆಯಲ್ಲಿ ಮಾಡಿದ ಅಗ್ರಹಾರ ದೇವಸ್ಥಾನಗಳು ಅಪ್ರತಿಪರವಾಲು ದೇವರ ಪ್ರತಿಷ್ಠೆ ಪರಾಭವ ಸಂವತ್ಸರದಲ್ಲು ಮಾಡಿ. ಯೀ ದೇವಸ್ಥಾನಕ್ಕೆ ಬಿಟ್ಟ ಗ್ರಾಮ ೨೪ ಕ್ಕೆ ಹೆಚ್ಚು ಗ್ರಾಮ ೨ ಮೂರಕ್ಕೆ [< ಎರಡು] ಗ್ರಾಮ ೩೬ ಕ್ಕೆ ರೇಖೆ ಲಾಗ ೪೨೧೩ ॥೨॥ ಕ್ಕೆ ಹುಟ್ಟುವಳಿ ಲಾಗ ಅಗ್ರಹಾರ ಪರಿಧಾವಿ ಸಂವತ್ಸರದಲ್ಲು ಯಾವತ್ತು ದೇವನಗರದ ಅಗ್ರಹಾರ ಯಿದಕ್ಕೆ ಬಿಟ್ಟ ಗ್ರಾಮ ೩೩, ಯಂನ್ನು ಬ್ರಾಹ್ಮಣರಿಗೆ ದೇವರಿಗೆ ಸಹಾ ಗ್ರಾಮ ಭೂಮಿ ಮುಂತಾದ್ದು ಬಿಟ್ಟು ಯೀ ದೇವಸ್ಥಾನ ಅಗ್ರಹಾರ ಮುಂತಾದ ಸಂರಕ್ಷಣಾರ್ಥವಾಗಿ ವಿಜಯಾಪುರದ ಕೋಟೆಯನ್ನು ಹಾರಿಸಿ, ದೇವಬ್ರಾಹ್ಮಣ ಪರಿಪಾಲನವನ್ನು ಮಾಡಿಕ್ಕೊಂಡು ರಾಜ್ಯವನಾಳಿದ ವರುಷ ೩೩. ಯಿಲ್ಲಿಂದಾ ಮುಂದೆ ಯಿವರ ಕೊಮಾರ್ರು ಕಂಠೀರವ ನರಸರಾಜವಡೆರವರು ಆಳಿದ ವರುಷ ೪. ಇವರ ಕೊಮಾರ್ರು ಕೃಷ್ಣರಾಜವಡೆರವರು ಆಳಿದ ವರುಷ ೩೦. ಯೀ ತರುವಾಯ ಚಾಮರಾಜವಡೇರವರು ಆಳಿದ ವರುಷ ೨.

ಯೀ ತರುವಾಯ ಕೃಷ್ಣರಾಜವಡೆರು ಆಳಿದ ವರುಷ ೩೦ ಸಂ।ದ ಶಾಲಿವಾಹನ ಶಕ ವರುಷ ೧೬೮೦ ಸರ್ವಬಹುದಾನ್ಯ ಸಂವತ್ಸರದಲ್ಲಿ ಯೀ ಕೃಷ್ಣರಾಜವಡೆರ್ರ ಆಳ್ವಿಕೆಯಲ್ಲು ಹೈದರು ನಾಯಕರ್ರು ದಳವಾಯಿ ಕರ್ರುಚೂರಿ ನಂಜರಾಜ್ಯೈಯ್ಯನವರು ಹವಾಲಿನಲ್ಲಿ ಶೀಮೆ ಯಾವತ್ತನ್ನು ಕಟ್ಟಿಕೊಂಡು, ನಂಜರಾಜ್ಯೈಯ್ಯನವರಿಂದ ಹೈದರಾಲಿಖಾನಯಂಬ ಹೆಸರ್ರು ಮಾಡಿಕೊಂಡು, ಶ್ರೀರಂಗಪಟ್ಟಣಕ್ಕೆ ಠಾಣ್ಯ ಹಾಕಿಕೊಂಡು, ಸಕಲ ವಿಚಾರಣೆಯನ್ನು ತಾನೆ ಮಾಡುತ್ತ ಯಿರ್ರುವ ಕಾಲದಲ್ಲಿ ಯೀ ದೊರೆತಬಾ ಮಾಡುತ್ತಾ ಯಿದ್ದ ಕೃಷ್ಣರಾಜವಡೆರೈಯ್ಯನವರು ಸರ್ಗಸ್ಥರಾಗಲಾಗಿ, ಯೀ ತದನಂತರದ ಯಿವರ ಮಗ ನಂಜರಾಜ ವಡೆಯರ್ರಿಗೆ ಪಟ್ಟವಂ ಕಟ್ಟಿ, ರಾಜ್ಯದ ಮೇಲು ವಿಚಾರವನ್ನು ವಾಡುತ್ತಾ ಯಿರಲಾಗು.

ವಿಜಯನಗರವನ್ನು ಸ್ಥಾಪಿಸಿದ ಹರಿಹರ, ಬುಕ್ಕರು ಯಾವ ಜಾತಿಗೆ ಸೇರಿದ್ದರು ಎಂಬುದರ ಬಗೆಗೆ ಕೈಫಿಯತ್ತುಗಳು ಕೆಲವು ಮಾಹಿತಿಯನ್ನು ನೀಡುತ್ತವೆ. ಆರಂಭದ ವಿಜಯನಗರ ರಾಜ್ಯವನ್ನು ಕುರುಬ ಸಂಸ್ಥಾನ ಎಂದು ಕೈಫಿಯತ್ತುಗಳು ಕರೆದಿವೆ. ಎರಡನೆಯದಾಗಿ ಕೈಫಿಯತ್ತುಗಳ ಪ್ರಕಾರ ಹದಿಮೂರು ಕುರುಬರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ೩ನೆಯದಾಗಿ ವಿಜಯನಗರ ಸಂಸ್ಥಾಪಕರು ಗೊಲ್ಲರು

ಎಂಬುದಾಗಿಯೂ ಕೆಲವು ಕೈಫಿಯತ್ತುಗಳು ದಾಖಲಿಸಿವೆ. ರಾಬರ್ಟ್ ಸಿವೆಲ್ ಸಹ Forgotten Empire ಪ್ರಸಿದ್ಧ ಗ್ರಂಥದಲ್ಲಿ ವಿಜಯನಗರ ಸ್ಥಾಪಕರು ಮೂಲದಲ್ಲಿ ಕುರುಬರಾಗಿದ್ದರೆಂದು ಅಭಿಪ್ರಾಯ ಪಟ್ಟಿದ್ದಾರೆ. ನಾಲ್ಕನೆಯದಾಗಿ ಕೈಫಿಯತ್ತುಗಳು ವಿಜಯನಗರದ ಅರಸರು ಮತ್ತು ಅವರ ಅಧಿಕಾರವರ್ಗದವರು, ಅಮರನಾಯಕರು ಅಂದಿನ ರಾಜಕೀಯ ವ್ಯವಸ್ಥೆಯಲ್ಲಿ ಸರ್ವಾಧಿಕಾರಿಗಳಾಗಿರಲಿಲ್ಲ ಹಾಗೂ ಪ್ರಜಾಪೀಡಕರಾಗಿರಲಿಲ್ಲ ಎಂಬುದನ್ನು ದಾಖಲಿಸಿವೆ. ಪ್ರಜಾಕ್ಷೇಮ ವಿಜಯನಗರ ಕಾಲದ ರಾಜಕೀಯ ವ್ಯವಸ್ಥೆಯ ಗುರಿಯಾಗಿತ್ತು. ಉದಾಹರಣೆಗೆ ಕೈಫಿಯತ್ತುಗಳು ಪದೇ ಪದೇ ಆಳರಸರ, ಅಧಿಕಾರವರ್ಗ ಮತ್ತು ಅಮರ ನಾಯಕರು ಕಟ್ಟಿಸಿದ ಕೆರೆ, ಕಟ್ಟೆ ಕಾಲುವೆಗಳ ಬಗೆಗೆ ಪ್ರಸ್ತಾಪಿಸುತ್ತವೆ. ಅಂತಹ ಕೆರೆಗಳು ಇಂದಿಗೂ ಮೈಸೂರು ಪ್ರದೇಶದಲ್ಲಿದೆ.

ವಿಜಯನಗರ ಕಾಲದ ರಾಜಕೀಯ ಚರಿತ್ರೆಯ ಮೇಲೆ ಮೈಸೂರು ಪ್ರದೇಶದ ಕೈಫಿಯತ್ತುಗಳು ನೀಡುವ ಮಾಹಿತಿ ಉಪಯುಕ್ತ, ಕುತೂಹಲಕಾರಿ ಮತ್ತು ಅನೇಕ ಸಂದರ್ಭಗಳಲ್ಲಿ ಗೊಂದಲಮಯವಾಗಿರುವುದು ಸ್ಪಷ್ಟವಾಗಿದೆ."[೮೨]

**ಪಾಳಯಗಾರರ ಕಾಲ**

"ವಿಜಯನಗರ ಸಾಮ್ರಾಜ್ಯ ೧೫೬೫ ರಲ್ಲಿ ತಾಳಿಕೋಟೆಯ ಕದನದಲ್ಲಿ ಪರಾಭವವನ್ನು ಅನುಭವಿಸಿದ ಮೇಲೆ ಅವನತಿ ಹಾದಿ ಹಿಡಿಯಿತು. ಮುಂದೆ ಕ್ರಿ. ಶ. ಸುಮಾರು ೧೬೪೦ ರವರೆಗೆ ಈ ಸಾಮ್ರಾಜ್ಯ ಪತನಗೊಳ್ಳುತ್ತಾ ಸಾಗಿತು. ಈ ದೃಷ್ಟಿಯಿಂದ ಕ್ರಿ ಶ. ಸುಮಾರು ೧೬೦೦ ರಿಂದ ಕ್ರಿ. ಶ. ೧೮೦೦ ರವರೆಗಿನ ಇತಿಹಾಸವನ್ನು ವಿಜಯನಗರೋತ್ತರ ಕಾಲವೆಂದು ಪರಿಗಣಿಸಬಹುದು. ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ನೀಡಿದ್ದ ರಾಜಕೀಯ ಐಕ್ಯತೆ ಮಾಯವಾಯಿತು. ವಿಜಯನಗರ ಸಾಮ್ರಾಜ್ಯದ ಆಧಾರಸ್ಥಂಭಗಳಾಗಿದ್ದವರೇ ಈ ಕಾಲದಲ್ಲಿ ಸ್ವತಂತ್ರ ಪ್ರಭುಗಳಂತೆ ರಾಜಕೀಯ ರಂಗದಲ್ಲಿ ಕಾಣಿಸಿಕೊಂಡರು. ಮೈಸೂರು ಪ್ರದೇಶದ ಕೈಫಿಯತ್ತುಗಳು ಇದನ್ನು ಸ್ಪಷ್ಟವಾಗಿ ದಾಖಲಿಸಿವೆ. ಮೈಸೂರು ಒಡೆಯರು, ಕೆಳದಿ ನಾಯಕರು, ಹೈದರಾಲಿ, ಟಿಪ್ಪುಸುಲ್ತಾನರು, ಚಿತ್ರದುರ್ಗ, ತರೀಕೆರೆ ಪಾಳೆಪಟ್ಟುಗಳು ಹಾಗೂ ಮೈಸೂರು ಪ್ರದೇಶದ ಮೇಲೆ ರಾಜಕೀಯ ಅನೈಕ್ಯತೆಯನ್ನು ಬಳಸಿಕೊಂಡು ಆಕ್ರಮಣ ಮಾಡಿದ ಬಿಜಾಪುರ ದಂಡನಾಯಕರು ಹಾಗೂ ಮರಾಠರು ಈ ಕೈಫಿಯತ್ತುಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಹಿಂದಿನ ಕಾಲಮಾನದವರೆಗೆ ಹೋಲಿಸಿದರೆ ಮೈಸುರು ಪ್ರದೇಶದ ಕೈಫಿಯತ್ತುಗಳು ನೀಡುವ ರಾಜಕೀಯ ಆಮಿಷಗಳು ಹೆಚ್ಚು

ವಿವರವಾಗಿಯೂ ಕುತೂಹಲಕಾರಿಯೂ ಇದೆ. ಇದಕ್ಕೆ ಕಾರಣ ಕರ್ನಲ್ ಮೆಕೆಂಝಿ ಕೈಫಿಯತ್ತುಗಳನ್ನು ಸರಿಸುಮಾರು ೧೮೦೦-೧೮೨೦ ರ ಅವಧಿಯಲ್ಲಿ ಸಂಗ್ರಹಿಸಿದರು. ಅವುಗಳನ್ನು ನಿರೂಪಿಸಿದ ಜನರು ವಿಜಯನಗರೋತ್ತರ ಕಾಲದ ವಿದ್ಯಮಾನಗಳಿಗೆ ಸಮೀಪವಾಗಿದ್ದರು. ಈ ದೃಷ್ಟಿಯಿಂದ ಈ ಕಾಲದ ರಾಜಕೀಯ ಚರಿತ್ರೆ ಕೈಫಿಯತ್ತುಗಳಲ್ಲಿ ಹೆಚ್ಚು ಸ್ಪಷ್ಟವಾಗಿ ಮೂಡಿದೆ. ವಿಜಯನಗರೋತ್ತರ ಕಾಲದ ಶಾಸನ ಮತ್ತು ಸಾಹಿತ್ಯ ಕೃತಿಗಳು ನೀಡದೇ ಇರುವ ಅನೇಕ ವಿವರಗಳು ಕೈಫಿಯತ್ತುಗಳಲ್ಲಿ ದೊರಕುತ್ತವೆ. ಇದಕ್ಕೆ ಒಂದೆರಡು ಉದಾಹರಣೆಗಳು ಇಂತಿವೆ. ಕೆಳದಿ ನಾಯಕ ಮನೆತನದ ಮೂಲದ ಬಗ್ಗೆ ಕೈಫಿಯತ್ತುಗಳಲ್ಲಿ ವಿವರವಿದೆ. ಅಂತೆಯೇ ತಲಕಾಡು ಸ್ಥಳದ ಮೂಲದ ಬಗೆಗೆ ಮಾಹಿತಿ ದೊರಕುತ್ತದೆ. ಮೈಸೂರಿನ ಒಡೆಯರಿಗೆ ರಂಗಮ್ಮಳು ನೀಡಿದ ಶಾಪವನ್ನು ಕೈಫಿಯತ್ತುಗಳು ತಿಳಿಸುತ್ತವೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ಈಸ್ಟ್ ಇಂಡಿಯಾ ಕಂಪನಿಯ ದಾಖಲೆಗಳಿಗಿಂತ ಭಿನ್ನವಾದ ವಿಚಾರಗಳನ್ನು ಈ ಕೈಫಿಯತ್ತುಗಳಲ್ಲಿ ಕಾಣಬಹುದು. ಒಟ್ಟಾರೆ ವಿಜಯನಗರೋತ್ತರ ಕಾಲದ ರಾಜಕೀಯ ಚರಿತ್ರೆ ವಿವರಿಸುವಲ್ಲಿ ಕೈಫಿಯತ್ತುಗಳ ಪಾತ್ರ ಗುರುತರವಾದುದು.

ಈ ಅಧ್ಯಾಯದಲ್ಲಿ ನಿರೂಪಿಸುವ ವಿಷಯಗಳು ಇಂತಿವೆ. ಮೈಸೂರು, ಕೆಳದಿ, ಚಿತ್ರದುರ್ಗ, ಹೈದರ್ ಟಿಪ್ಪು, ತರೀಕೆರೆ, ಬಿಜಾಪುರದ ಮಿಲಿಟರಿ ನಾಯಕರು ರಣದುಲ್ಲಾಖಾನ್, ಮರಾಠರು : ಬಾಜಿರಾಯ, ಯಲಹಂಕ ಪ್ರಭುಗಳು, ಹಂಡೆ ಮನೆತನ, ಇತರೆ ಸಣ್ಣಪುಟ್ಟ ಸ್ಥಳಿಯ ಪ್ರಭುಗಳು."[೮೩]

**ಪಾಳೆಯಗಾರರ (ವಿಜಯನಗರರೋತ್ತರ) ಕಾಲದ ರಾಜಕೀಯ ಕಾಲದ ಐತಿಹಾಸಿಕ ಹಿನ್ನಲೆ**

**ಮೈಸೂರು ಒಡೆಯರು (೧೪೦೦ ೧೭೬೩)** : ವಿಜಯನಗರದ ಅರವೀಡು ವಂಶದ ಆಳ್ವಿಕೆಯ ಕಾಲದಲ್ಲಿ (೧೫೭೧ ೧೬೪೬) ಕರ್ನಾಟಕದ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದ್ದ ಎರಡು ರಾಜ ಮನೆತನಗಳೆಂದರೆ ಕೆಳದಿಯ ನಾಯಕರು ಮತ್ತು ಮೈಸೂರಿನ ಒಡೆಯರು, ಒಡೆಯರು ವಿಜಯನಗರೋತ್ತರ ಕಾಲದಲ್ಲಿ ವಿಜಯನಗರ ಚಕ್ರಾಧಿಪತ್ಯದ ಸಂಪ್ರದಾಯವನ್ನು ಮುಂದುವರೆಸಿದರು. ೧೩೯೯ ರಿಂದಲೇ ತಮ್ಮ ಆಳ್ವಿಕೆ ಆರಂಭವಾಯಿತೆಂದು ಒಡೆಯರು ಹೇಳಿಕೊಂಡಿದ್ದರೂ ಅವರು ಸ್ವತಂತ್ರರಾದುದು ೧೬ ನೇ ಶತಮಾನದಲ್ಲಿ. ಒಡೆಯರು ಬ್ರೀಟಿಷರ ಚಕ್ರಾಧಿಪತ್ಯದ ಕಾಲದಲ್ಲಿ ದೊಡ್ಡ ಭೂಪ್ರದೇಶವನ್ನು ಆಳಿದರಲ್ಲದೇ ಕರ್ನಾಟಕ ಸಂಸ್ಕೃತಿಗೆ ಅಪಾರ

ಕೊಡುಗೆ ನೀಡಿದರು. ಈ ವಂಶದ ಕೊನೆಯ ಅರಸರಾದ ಜಯಚಾಮರಾಜ ಒಡೆಯರ್ ಅವರು ೧೯೫೬ ರವರೆಗೆ ರಾಜ್ಯದ ರಾಜ ಪ್ರಮುಖರಾಗಿದ್ದರು.

ಮೈಸೂರಿನ ಒಡೆಯರ ವಂಶದ ಇತಿಹಾಸವನ್ನು ೧೩೯೯ ರಿಂದ ೧೭೬೩ ರ ಕಾಲದ ವರೆಗೆ ಪರಿಶೀಲಿಸಲಾಗುವುದು. ಯದುರಾಯನಿಂದ ೧೩೯೯ ರಲ್ಲಿ ಆರಂಭವಾದ ಒಡೆಯರ ಆಳ್ವಿಕೆ ೧೭೬೧ ರಲ್ಲಿ ತಾತ್ಕಾಲಿಕವಾಗಿ ಅಂತ್ಯಗೊಂಡು ಮೈಸೂರು ರಾಜ್ಯ ಹೈದರಾಲಿಯ ವಶವಾಯಿತು. ವಿಜಯನಗರೋತ್ತರ ಕಾಲದ ರಾಜಕೀಯ ವಿಚಾರ ಹಾಗೂ ವ್ಯಕ್ತಿಗಳು ಹೇಗೆ ಮೈಸೂರು ಪ್ರದೇಶದ ಕೈಫಿಯತ್ತುಗಳಲ್ಲಿ ಕಾಣಿಸಿಕೊಂಡಿದ್ದಾರೆ ಎಂಬುದನ್ನು ತಿಳಿಯಲಾಗಿದೆ. ಮೈಸೂರು ಪ್ರದೇಶದ ರಾಜಕೀಯ ಇತಿಹಾಸ ಅನೈಕ್ಯತೆಯಿಂದ ಕೂಡಿತ್ತು ಎಂಬುದನ್ನು ಅಧ್ಯಯನದಿಂದ ತಿಳಿದುಬಂದಿದೆ. ಕೇಂದ್ರ ಶಕ್ತಿ ನಾಶ ಅಥವಾ ದುರ್ಬಲಗೊಂಡಾಗ ಸ್ಥಳೀಯ ರಾಜಕೀಯ ಶಕ್ತಿಗಳು ಸ್ವತಂತ್ರವಾಗಲು ಯತ್ನಿಸಿದವು ಕೈಫಿಯತ್ತುಗಳಿಂದ ಗೋಚರವಾಗುತ್ತದೆ. ಅನೇಕ ಪಾಳೇಪಟ್ಟುಗಳು ಈ ಕಾಲದಲ್ಲಿ ಕಾಣಿಸಿಕೊಂಡವು. ಮೈಸೂರು, ಕೆಳದಿ, ತರಿಕೆರೆ ಮತ್ತು ಚಿತ್ರದುರ್ಗ ಮನೆತನಗಳು ಇದಕ್ಕೆ ನಿದರ್ಶನ. ಕೈಫಿಯತ್ತುಗಳು ಇಂತಹ ರಾಜಕೀಯ ವಂಶಗಳ ಮೂಲವನ್ನು ಪ್ರಸ್ತಾಪಿಸುತ್ತಿವೆ. ಮೂಲವಲ್ಲಿ ಇವು ವಿಜಯನಗರದೊಡನೆ ಸೇರ್ಪಡೆಗೊಂಡಿದ್ದು ನಂತರ ಸ್ವತಂತ್ರವಾದವು. ಕೈಫಿಯತ್ತುಗಳು ರಾಜಕೀಯ ವಂಶಗಳ ಮೂಲವನ್ನು ಪ್ರಸ್ತಾಪಿಸುವಾಗ ಜಾನಪದ, ಪುರಾಣ ಐತಿಹ್ಯ ಮತ್ತು ಕಟ್ಟುಕತೆಗಳಂತಹ ಮಾದರಿಯನ್ನು ಬಳಸಿಕೊಂಡಿವೆ. ಅನೇಕ ವೇಳೆ ಈ ಮಾದರಿಗಳು ಏಕರೂಪದಲ್ಲಿ ವ್ಯಕ್ತವಾಗಿದೆ ಚರಿತ್ರೆಯ ದೃಷ್ಠಿಯಿಂದ ಕೈಫಿಯತ್ತುಗಳು ನೀಡುವ ಇಂತಹ ಅಂಶಗಳನ್ನು ಸಂಪೂರ್ಣವಾಗಿ ತಿರಸ್ಕರಿಬಹುದು. ಆದರೆ ಇಂತಹ ಮಾದರಿಗಳು ಏಕೆ ಹುಟ್ಟಿಕೊಂಡವು ಎಂಬ ಪ್ರಶೆಗೆ ಉತ್ತರ ಈ ರೀತಿ ದೊರೆಯಬಹುದು. ಮಧ್ಯಕಾಲೀನ ಐತಿಹಾಸಿಕ ದಾಖಲೆಗಳು ಸಂಪೂರ್ಣವಾಗಿ ಆಧುನಿಕ ರೀತಿಯ ಚಾರಿತ್ರಿಕ ದೃಷ್ಟಿಕೋನವನ್ನು ಹೊಂದಿರಲಿಲ್ಲ. ಹಾಗೆ ನಿರೀಕ್ಷಿಸುವುದು ತಪ್ಪಾದೀತು. ಚರಿತ್ರೆಯನ್ನು ದಾಖಲಿಸುವ ಕೈಫಿಯತ್ತುಗಳ ಪದ್ಧತಿ ಅಂದಿನ ಮನೋಧರ್ಮಕ್ಕೆ ಹೊಂದಿದೆ. ಮದ್ಯಕಾಲೀನ ಮನಸ್ಸು ಹೆಚ್ಚಾಗಿ ಪೌರಾಣಿಕ ಪ್ರಭಾವದಿಂದ ಪ್ರೇರೇಪಿತವಾಗಿದ್ದಿತು. ಆದುದರಿಂದ ನೈಜ ರಾಜಕೀಯ ವ್ಯಕ್ತಿಗಳನ್ನು ಪೌರಾಣಿಕ ಅಥವಾ ಕಲ್ಪಿತ ಮಹಾಪುರುಷರೊಡನೆ ಹೋಲಿಸುವುದರ ಜತೆಗೆ ಅವರಿಗೆ ಮಹಾಪುರುಷರ ಲಕ್ಷಣಗಳನ್ನು ಆರೋಪಿಸುವುದು ಮಧ್ಯಕಾಲೀನ ಮನಸ್ಸಿನ ಒಂದು ಸ್ವರೂಪವಾಗಿದ್ದಿತು. ಎಲ್ಲಕ್ಕಿಂತ ಮಿಗಿಲಾಗಿ ಅನೇಕ ಪಾಳೆಪಟ್ಟುಗಳ ಮೂಲ ಸ್ಥಾಪಕರು ಅತ್ಯಂತ ಕೆಳಹಂತದಿಂದ ಬಂದವರಾಗಿದ್ದು,

ರಾಜಕೀಯ ಸನ್ನಿವೇಶಗಳನ್ನು ಬಳಸಿಕೊಂಡು ಬುನಾದಿ ಹಾಕಿದರು. ಅಂತಹವರನ್ನು ಮುಂದಿನ ತಲೆಮಾನವರು ಪುರಾಣ ಐತಿಹ್ಯಗಳ ಮೂಲಕ ವೈಭವೀಕರಿಸಲು ಪ್ರಯತ್ನಿಸಿದರೆ ಆಶ್ಚರ್ಯವಿಲ್ಲ. ಅಂತಹ ವೈಭವೀಕರಣದ ಉದ್ದೇಶ ಮೂಲ ಇದ್ದರೂ ಕೈಫಿಯತ್ತುಗಳು ಮೂಲದ ಬಗೆಗೆ ನೀಡುವ ಮಾಹಿತಿ ಕುತೂಹಲಕಾರಿಯಾಗಿದೆ.

**ಆರಂಭದ ಅರಸರು**

ಯಾದವ ಕುಲದ ಯದುರಾಯನೇ ಒಡೆಯರ ವಂಶದ ಸ್ಥಾಪಕ. ಇವನು ವಿಜಯನಗರ ಅಧೀನದಲ್ಲಿ ಪಾಲೆಯಗಾರನಾಗಿದ್ದನು. ಈ ವಂಶದ ಮೊದಲ ಅರಸನನ್ನು ಕುರಿತಾದ ಹೆಚ್ಚಿನ ವಿವರಗಳು ತಿಳಿಯದು. ಒಟ್ಟಿನಲ್ಲಿ ಈ ಪುಟ್ಟ ಪಾಳೇಪಟ್ಟು ತನ್ನ ಪ್ರಾರಂಭದ ಸುಮಾರು ಒಂದೂವರೆ ಶತಮಾನದ ಕಾಲ ಸದ್ದುಗದ್ದಲವಿಲ್ಲದೆ ಇದ್ದಂತೆಯೇ ಮುಮದುವರೆಯಿತು.

**ರಾಜ ಒಡೆಯರು (೧೫೭೮ ೧೬೧೭)**

ರಾಜ ಒಡೆಯರ ಕಾಲದಲ್ಲಿ ಈ ಪಾಳೆಪಟ್ಟು ಪ್ರವರ್ಧಮಾನಕ್ಕೆ ಬಂತು. ೧೬೦೮ ರಲ್ಲಿ ಈತನು ೨೫,೦೦೦ ವರಹ ವರಮಾನವುಳ್ಳ ೩೩ ಗ್ರಾಮಗಳನ್ನೊಳಗೊಂಡ ಒಂದು ಪಾಳೆಪಟ್ಟಿಗೆ ಪ್ರಭುವಾದ. ೩೦೦ ಸಿಪಾಯಿಗಳ ಸೇನೆಯನ್ನು ಹೊಂದಿದ್ದ. ಈ ಪಾಳೆಪಟ್ಟು ಶ್ರೀರಂಗಪಟ್ಟಣದಲ್ಲಿ ವಿಜಯನಗರದ ಮಹಾಮಂಡಲೇಶ್ವರನ ಮೂಲಕ ರಾಜ್ಯಕ್ಕೆ ಅಧೀನವಾಗಿತ್ತು. ಯುದ್ಧದ ಕಾಲದಲ್ಲಿ ತನ್ನ ಪಾಲಿನ ಸೇನಾ ತುಕಡಿಗಳನ್ನು ಒದಗಿಸಿ, ವಾರ್ಷಿಕ ಪೊಗದಿ ಕಪ್ಪವನ್ನು ಸಲ್ಲಿಸಿ, ಸಾಮ್ರಾಜ್ಯಕ್ಕೆ ನಿಷ್ಠೆ ತೋರಿಸಬೇಕಾಗಿತ್ತು.

೧೭ನೇ ಶತಮಾನದ ಆರಂಭದಲ್ಲಿ ವಿಜಯನಗರದ ಚಕ್ರವರ್ತಿಗೂ ರಾಜ ಒಡೆಯರ ಶ್ರೀರಂಗಪಟ್ಟಣದಲ್ಲಿದ್ದ ರಾಜಪ್ರತಿನಿಧಿಗೂ ವೈಮನಸ್ಸುಂಟಾಯಿತು. ಇದರ ಲಾಭ ಪಡೆದ ರಾಜ ಒಡೆಯರು ೧೬೧೦ ರಲ್ಲಿ ಈ ರಾಜಪ್ರತಿನಿಧಿಯನ್ನು ಶ್ರೀರಂಗಪಟ್ಟಣದಿಂದ ಹೊರಹಾಕಿದ. ಅಲ್ಲದೇ ಶ್ರೀರಂಗಪಟ್ಟಣದ ಮಂಡಲವನ್ನು ಆಳಲು ತನ್ನನ್ನು ನೇಮಿಸಬೇಕೆಂದು ಸಾಮ್ರಾಟನನ್ನು ಪ್ರಾರ್ಥಿಸಿ, ನೇಮಕಾತಿಯನ್ನು ಸನ್ನದು ಮೂಲಕ ಪಡೆದು, ವಿಜಯನಗರದ ಮಹಾಮಂಡಲೇಶ್ವರನಾದ. ಈ ಘಟನೆ ಮೈಸೂರಿನ ಇತಿಹಾಸದಲ್ಲಿ ಹೊಸ ಅಧ್ಯಾಯ ಪ್ರಾರಂಭವಾಗಲು ಕಾರಣವಾಯಿತು.

೧೬೧೦ ರಿಂದ ಶ್ರೀರಂಗಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡು ವಿಜಯನಗರದ ರಾಜಪ್ರತಿನಿಧಿಯ ರತ್ನಖಚಿತ ಸಿಂಹಾಸನವನ್ನು ರಾಜ ಒಡೆಯ ಏರಿದ.

ಆಡಳಿತದ ಮುಖ್ಯಾಧಿಕಾರಿಯಾಗಿ ದಳವಾಯಿ ಮತ್ತು ಸರ್ವಾಧಿಕಾರಿಯನ್ನು ನೇಮಿಸಿದ. ಪ್ರತಿ ಗ್ರಾಮದಲ್ಲಿಯೂ ಮೇಲ್ವಿಚಾರಣೆ, ರಕ್ಷಣೆ ಮತ್ತು ಕಂದಾಯ ವಸೂಲಿಗಾಗಿ ಅಧಿಕಾರಿಗಳನ್ನು ನೇಮಿಸಿದ. ೧೬೧೦ ರಿಂದ ನವರಾತ್ರಿ (ದಸರಾ) ಉತ್ಸವವನ್ನು ವಿಜೃಂಭಣೆಯಿಂದ ಆಚರಿಸಲು ಪ್ರಾರಂಭಿಸಿದನು. ೪೦ ವರ್ಷಕಾಲ ಆಳಿದ ರಾಜ ಒಡೆಯರು ಒಳ್ಳೆಯ ಯೋಧ ಹಾಗೂ ಸಮರ್ಥ ಆಡಳಿತಗಾರನಾಗಿದ್ದ. ಶ್ರೀರಂಗಪಟ್ಟಣ, ಮೈಸೂರು ಮತ್ತು ಮೇಲುಕೋಟೆಯ ದೇವಾಲಯಗಳನ್ನು ಸುಧಾರಿಸಿ ಅವುಗಳಿಗಾಗಿ ದತ್ತಿ ಸ್ಥಾಪಿಸಿದನು.

ರಾಜ ಒಡೆಯರ ಗಂಡು ಮಕ್ಕಳೆಲ್ಲ ಗತಿಸಿ ಹೋಗಿದ್ದುದರಿಂದ, ಅವನ ಹದಿನಾಲ್ಕು ವರ್ಷ ವಯಸ್ಸಿನ ಮೊಮ್ಮಗ ಚಾಮರಾಜ ಒಡೆಯರ್ ಸಿಂಹಾಸನವನ್ನೇರಿದ. ಈತನ ಕಾಲದಲ್ಲಿ ರಾಜ್ಯ ವಿಸ್ತೃತವಾಯಿತು. ಸೈನ್ಯವನ್ನು ಬಲಪಡಿಸಲಾಯಿತು. ಹೊಸ ಆಯುಧಗಳನ್ನು ತಯಾರಿಸಲು ಒಂದು ಆಯುಧಗಾರವನ್ನು ನಿರ್ಮಿಸಲಾಯಿತು. ಈತನು ಧಾರ್ಮಿಕನೂ ಸಾಹಿತ್ಯ ಪ್ರಿಯನೂ ಆಗಿದ್ದನು. ಚಾಮರಾಜೋಕ್ತಿವಿಲಾಸ' ವಾಲ್ಮೀಕಿ ರಾಮಾಯಣದ ಕನ್ನಡ ರೂಪಾಂತರವನ್ನು ಸ್ವತಃ ರಚಿಸಿದ.

**ಕಂಠೀರವ ನರಸರಾಜ (೧೬೩೮ ೧೬೫೯)**

ಈತನ ಕತ್ತಿವರಸೆ ಮತ್ತು ದೈಹಿಕ ಬಲ ಶೌರ್ಯಗಳು ಜನಪ್ರಿಯ ಕಥೆಗಳಾಗಿವೆ. ತಿರಿಚನಾಪಳ್ಳಿಯ ಆಸ್ಥಾನದ ಮಲ್ಲನೊಬ್ಬನು ತನ್ನ ದೊಡ್ಡಸ್ಥಿಕೆಯನ್ನು ಎಲ್ಲರೂ ಒಪ್ಪುವಂತಾಗಲು ಊರ ಮುಂಬಾಗಿಲಿನ ಬಾಗಿಲಲ್ಲಿ ತನ್ನ ಕಾಚವನ್ನು ಕಟ್ಟಿದ್ದನೆಂದೂ ಅದರ ಕೆಳಗಿನಿಂದ ಜನ ನಡೆಯಬೇಕೆಂಬುದನ್ನು ಯಾತ್ರಿಕರಿಂದ ತಿಳಿದ ಕಂಠೀರವ ನರಸರಾಜನು ಮೂರುವೇಷದಲ್ಲಿ ಅಲ್ಲಿಗೆ ಹೋಗಿ ಕಾಚವನ್ನು ಹರಿದು ಬಿಸಾಡಿ, ಮಲ್ಲನನ್ನು ಜಟ್ಟಿ ಕಾಳಗದಲ್ಲಿ ಸೋಲಿಸಿದನು.

ಕಂಠೀರವ ನರಸರಾಜನ ಕಾಲದಲ್ಲಿ ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿ ಗೊಂದಲಮಯವಾಗಿತ್ತು. ವಿಜಯನಗರ ತನ್ನ ಅವನತಿಯ ಕೊನೆ ಘಳಿಗೆಯಲ್ಲಿತ್ತು. ಸಾಯುತ್ತಿರುವ ಸಿಂಹವನ್ನು ಸಮಯ ನೋಡಿ ಸೀಳುವ ಸಲುವಾಗಿ ಎರಡೂ ಕಡೆಯಿಂದ ನುಗ್ಗಿ ಬರುವುದಕ್ಕೆ ಕಾದುನಿಂತ ತೋಳಗಳಂತೆ, ಬಿಜಾಪುರ ಮತ್ತು ಗೋಲ್ಕೊಂಡಗಳ ಸುಲ್ತಾನರು ಉಭಯ ಪಾರ್ಶ್ವಗಳಲ್ಲಿಯೂ ಕಾದಿದ್ದರು. ಮೊಘಲರೂ ಚಿಕ್ಕಪುಟ್ಟ ಪಾಳೆಯಗಾರರೂ ತಮ್ಮ ಪ್ರಭುತ್ವವನ್ನು ಪಸರಿಸಲು ಸಿದ್ಧರಾಗಿದ್ದರು. ಆದರೆ, ಯಾವ ಅದೃಷ್ಟ ಬಲದಿಂದಲೋ ಮೈಸೂರು ಯಾವ ತೊಂದರೆಗೆ ಒಳಪಡದೆ ಸುವ್ಯಸ್ಥಿತ

ಆಡಳಿತ ನಡೆಸಿಕೊಂಡು ಹೋಯಿತು. ವಿಜಯನಗರದ ಸಾಮ್ರಾಟ ಶ್ರೀರಂಗನಿಗೆ ಬೆಂಬಲ ನೀಡುವುದು ನಿಷ್ಪ್ರಯೋಜಕವೆಂದು ಅರಿತ ಕಂಠೀರವನು ತನ್ನ ಸ್ವಾತಂತ್ರ್ಯವನ್ನು ಘೋಷಿಸಿದ. ಈತ ಟಂಕಸಾಲೆಯನ್ನು ಸ್ಥಾಪಿಸಿದನು. ಸಾಹಿತ್ಯ ಕಲೆಗಳಿಗೆ ಉದಾರ ಘೋಷಣೆ ನೀಡಿದನು.

ದೇವರಾಜ ಒಡೆಯ (೧೬೫೯ ೭೩) : ಕಂಠೀರವನ ಉತ್ತಾರಾಧಿಕಾರಿಯಾದ ಈತ ಮೈಸೂರಿನ ಚಾಮುಂಡೇಶ್ವರಿ ಬೆಟ್ಟಕ್ಕೆ ಸಾವಿರ ಮೆಟ್ಟಿಲುಗಳನ್ನು ಮಾಡಿಸಿದುದಲ್ಲದೆ, ಹೆದ್ದಾರಿಯಲ್ಲಿರುವ ನಂದಿಯ ಭವ್ಯ ಏಕಶಿಲಾಮೂರ್ತಿಯನ್ನು ನಿರ್ಮಾಣ ಮಾಡಿದನು. ದೇವರಾಜನ ಕಾಲದಲ್ಲಿ ಮೈಸೂರಿನೊಂದಿಗೆ ಐರೋಪ್ಯ ಸಂಪರ್ಕ ಪ್ರಾರಂಭವಾಯಿತು. ತನ್ನ ಆಳ್ವಿಕೆ ಕಾಲದಲ್ಲಿ ಈತ ವಿಜಯನಗರ ಸಾಮ್ರಾಜ್ಯದ ರಾಜಕೀಯ ಅರಸು ಮೈಸೂರಿಗೇ ಬರಬೇಕೆಂಬ ಹಕ್ಕನ್ನು ಸ್ಥಾಪಿಸಿದ.

ಒಡೆಯರ ವಂಶದಲ್ಲೇ ಅತ್ಯಂತ ವಿಶಿಷ್ಟ ರಾಜನೆಂದು ಖ್ಯಾತಿ ಪಡೆದ ಚಿಕ್ಕದೇವರಾಜನು ದೇವರಾಜನ ನಂತರ ಉತ್ತರಾಧಿಕಾರಿಯಾದ.

**ಚಿಕ್ಕದೇವರಾಜ ಒಡೆಯರು (೧೬೭೨ ೧೭೦೪)**

ಮೈಸೂರಿನ ಆರಂಭದ ಅರಸರಲ್ಲಿ ಚಿಕ್ಕದೇವರಾಜ ಅತ್ಯಂತ ಗಣ್ಯನೂ ಅದ್ವಿತೀಯನೂ ಆಗಿದ್ದ. ಈತ ರಾಜ್ಯ ವಿಸ್ತರಣೆ ಮಾಡಿದನಲ್ಲದೆ ಆಡಳಿತ ಸುಧಾರಣೆಗಳನ್ನೂ ಜಾರಿಗೆ ತಂದು, ರಾಜ್ಯದ ಸಂಪತ್ತನ್ನು ವೃದ್ಧಿಗೊಳಿಸಿದ. ಸ್ವತಃ ಕವಿಯಾಗಿದ್ದ, ಆಸ್ಥಾನದ ಕನ್ನಡ ಕವಿಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ್ದ.

**ಸೈನಿಕ ಸಾಧನೆಗಳಾದ** : ಚಿಕ್ಕದೇವರಾಜನು ಪಟ್ಟವೇರಿದ ಐದು ದಿನದೊಳಗೆ ಮಧುರೈ ನಾಯಕನ ಧಾಳಿ ಎದುರಿಸಿ ಪೂರ್ಣ ವಿಜಯ ಗಳಿಸಿದ. ಆನಂತರ ಇಕ್ಕೇರಿ ಹಾಗೂ ಬಿಜಾಪುರದೊಡನೆ ಯುದ್ಧ ನಡೆಸಿದ. ೧೬೭೭ ರಲ್ಲಿ ಶಿವಾಜಿ ಶ್ರೀರಂಗಪಟ್ಟಣವನ್ನು ಸುಲಿಗೆ ಮಾಡಿದನಾದರೂ ಚಿಕ್ಕದೇವರಾಜನ ಜೊತೆ ಮುಖಮುಖಿಯಾಗಿ ಕಾದಾಡಲಿಲ್ಲ. ಚಿಕ್ಕದೇವರಾಜ ಆತನನ್ನು ಸೋಲಿಸಿ ಅಪ್ರತಿಮವೀರ ಬಿರುದು ತಳೆದುದಾಗಿ ಹೇಳಿಕೊಂಡಿರುವನಾದರೂ ವಿದೇಶಿಯ ಪಾದ್ರಿಗಳ ಪ್ರಕಾರ ಶಿವಾಜಿ ಶ್ರೀರಂಗಪಟ್ಟಣವನ್ನು ಸುಲಿಗೆ ಮಾಡಿದ ವಿಚಾರವಷ್ಟೇ ಇದೆ. ಜಿಂಜಿಯ ಮರಾಠ ಸರದಾರರು ಮೈಸೂರಿನ ಮೇಲೆ ದಂಡೆತ್ತಿ ಬರುವಾಗ ಚಿಕ್ಕದೇವರಾಜ ಅವರನ್ನು ಸೋಲಿಸಿ ಕೊಂದನು. ಅಲ್ಲದೆ ಶಿವಾಜಿಯ ಮಗ ಸಾಂಭಾಜಿ ಕೆಳದಿ ಮತ್ತು

ಗೋಲ್ಕೊಂಡದವರ ಜತೆಗೂಡಿ ಬಾಣಾವರದಲ್ಲಿ ಈತನನ್ನು ಎದುರಿಸಿದನು. ಆದರೆ ತ್ರಿಕೂಟದ ಸೇನೆ ಪರಾಭವಗೊಂಡಿತು (೧೬೮೨). ಬೆಂಗಳೂರು ಷಾಜಿ ಭೋಂಸ್ಲೆಯ ಜಾಗೀರಾಗಿತ್ತು. ಮುಂದೆ ಅವನ ಹಿರಿಯ ಮಗ ಏಕೋಜಿ ಅದರ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ಚಿಕ್ಕದೇವರಾಜ ಈ ಜಾಗಿರಿಗೆ ಸೇರಿದ ಕೆಂಗೇರಿ, ತ್ಯಾಮಗೊಂಡ್ಲು, ಚಿಕ್ಕನಾಯಕನ ಹಳ್ಳಿಗಳನ್ನು ಗೆದ್ದ. ಆ ವೇಳೆಗೆ ಏಕೋಜಿ ತಂಜಾವೂರಿನಲ್ಲಿ ನೆಲೆಸಿದ್ದರಿಂದ ದೂರದ ಬೆಂಗಳೂರನ್ನು ಮೈಸೂರು ಅರಸನಿಂದ ರಕ್ಷಿಸುವುದು ಕಷ್ಟವೆನಿಸಿ, ಅದನ್ನು ಚಿಕ್ಕದೇವರಾಜನಿಗೆ ಮೂರು ಲಕ್ಷ ವರಹಗಳಿಗೆ ಮಾರಲು ನಿಶ್ಚಯಿಸಿದನು. ಆದರೆ ಆ ವ್ಯವಹಾರ ನಡೆಯುವ ಮೊದಲೇ ಮೊಘಲ್ ಸೇನಾನಿ ಖಾಸಿಂ ಖಾನ್ ೧೬೮೭ರಲ್ಲಿ ಬೆಂಗಳೂರನ್ನು ಗೆದ್ದುಕೊಂಡ. ಆದ್ದರಿಂದ ಚಿಕ್ಕದೇವರಾಜರು ಬೆಂಗಳೂರನ್ನು ಮೊಘಲರಿಂದಲೇ ಮೂರು ಲಕ್ಷ ವರಾಹಗಳನ್ನು ತೆತ್ತು ಗುತ್ತಿಗೆಗೆ ಪಡೆದ. ಮರಾಠರನ್ನು ಅನೇಕ ಯುದ್ಧಗಳಲ್ಲಿ ಸೋಲಿಸಿದ ಈತ ಮಹಾರಾಷ್ಟ್ರ ಭೂಪಾಲ ಜಾಲರಿಪು ಎಂದು ತನ್ನನ್ನು ಕರೆದುಕೊಂಡ. ಔರಂಗಜೇಬನು ೧೬೮೬ರಲ್ಲಿ ಬಿಜಾಪುರವನ್ನು ಗೆದ್ದು ದಕ್ಷಿಣದೆಡೆ ಸಾಗುತ್ತಿದ್ದನು. ಅವನು ಮರಾಠರ ಜತೆ ಹೋರಾಟ ನಡೆಸಿ ದಣಿದಿದ್ದ. ಆದ್ದರಿಂದ ತಕ್ಷಣ ಮೈಸೂರನ್ನು ಗೆದ್ದುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಅದಕ್ಕಾಗಿ ಚಿಕ್ಕದೇವರಾಜನೊಡನೆ ಸ್ನೇಹ ಮಾಡಿಕೊಂಡ. ಆದರೆ ಪೊಗದಿಯನ್ನು ಚಿಕ್ಕದೇವರಾಜ ಮುಘಲರಿಗೆ ನೀಡಬೇಕಿತ್ತು. ಈ ರಾಯಭಾರದಿಂದ ಮೈಸೂರಿನ ಘನತೆ ಸ್ಥಳೀಯವಾಗಿ ಹೆಚ್ಚಾಯಿತಲ್ಲದೆ ಮೈಸೂರಿನ ರಾಜರು ಮೊಘಲ ಸಾಮ್ರಾಟರ ಮೈತ್ರಿ ಗಳಿಸಿದವರೆಂದು ಮಾನ್ಯತೆ ಪಡೆದರು. ಚಿಕ್ಕದೇವರಾಜನಿಗೆ 'ರಾಜಾ ಜಗದೇವ' (ಜಗ್ದೇವರಾಜ್) ಬಿರುದನ್ನು ಸಾಮ್ರಾಟ ನೀಡಿದ.

ಚಿಕ್ಕದೇವರಾಜ ೧೭೦೪ರಲ್ಲಿ ತೀರಿಕೊಂಡ. ಈತನ ಮರಣಾನಂತರ ೬ ದಶಕಗಳ ಕಾಲ ದುರ್ಬಲ ರಾಜರುಗಳೇ ಅಧಿಕಾರದಲ್ಲಿದ್ದರು. ೧೭೦೪ರಿಂದ ೧೭೬೧ ರವರೆಗಿನ ಚಿಕ್ಕದೇವರಾಜನ ಉತ್ತರಾಧಿಕಾರಿಗಳ ಕಾಲಾವಧಿಯನ್ನು ದಳವಾಯಿಗಳ ಆಡಳಿತವೆನ್ನುವರು. ದಳವಾಯಿಗಳೆಂದರೆ ಸೇನಾಪತಿಗಳು. ಮುಂದೆ ೧೭೬೧ರಲ್ಲಿ, ರಾಜಧಾನಿಯಲ್ಲಿ ಸೈನಿಕ ಭಂಡಾಯ ಕಾಣಿಸಿಕೊಂಡಾಗ ಹೈದರ್ ಆಲಿ ದಳವಾಯಿಯಾದ ನಂಜರಾಜನನ್ನು ನಿವೃತ್ತಿಗೊಳಿಸಿ ತಾನೇ ದಳವಾಯಿ ಅಧಿಕಾರ ವಹಿಸಿಕೊಂಡ. ೧೭೬೩ರಿಂದ ೧೭೯೯ರವರೆಗೆ ಮೈಸೂರು ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರ ಮಧ್ಯಂತರ ಆಳ್ವಿಕೆಯಲ್ಲಿತ್ತು.

**ಕೈಫಿಯತ್ತುಗಳಲ್ಲಿ ಮೈಸೂರು ಒಡೆಯರು**

"ಮೈಸೂರು ಒಡೆಯರ ಬಗ್ಗೆ ಕೈಫಿಯತ್ತುಗಳಲ್ಲಿ ಇರುವಂತೆ ವಡೇರ್‍ರು ಹೆಸರು ಬಂದ ರೀತಿ, ರಾಜವಡೆರ್‍ರು ಬಗ್ಗೆ ಕೈಫಿಯತ್ತು ದ್ವಾರಕಿಯನ್ನು ಪರಸಂಸ್ಥಾನದ ದೊರೆಗಳು ... ಮಾಡಿ ದಾರಕಿ ತೆಗೆದುಕೊಂಡದ್ದರಿಂದ. ಆ ದ್ವಾರಕಿ ಅರಸುಗಳು ಹೈರಾಣು ಬಿದ್ದು ಯಿಲ್ಲಿಗೆ ಬಂದವರು. ಪಾಚಿ [>ರಾಜೆ] ಅರಸಿನವರು ತಮ್ಮ ವೈರಿಕೈಗೆ ಸೆರೆ ಸಿಕ್ಕಬಾರದು ಯಂದು, ತಾನು ತನ್ನ ಪ್ರಧಾನಿ ಮುಂತಾದವರು ೩೨ ಜನರನ್ನು ಕರೆದುಕೊಂಡು ದಕ್ಷಿಣಾ ಪ್ರಾಂತಕ್ಕೆ ಓಡಿಬಂದರು. ಆವಾಗ್ಗೆ ದಕ್ಷಿಣ ಪ್ರಾಂತ್ಯದಲ್ಲಿ ವಂದು ಗಡಿಗೆ ೩೩ ಹಳ್ಳಿಯಾಗಿ ಯಿತ್ತು. ಯೀ ಅರಸುಗಳು ದಕ್ಷಿಣ ಪ್ರಾಂತ್ಯಕ್ಕೆ ಬಂದ ಮೇಲೆ ಸಿಂಧುವಳಿಯೆಂಬ ಗ್ರಾಮಕ್ಕೆ ಬಂದು ಸೇರಿದರ್‍ರು. ಅವರು ಬಹಳ ಶ್ರಮದಿಂದ ಬಂದರು. ಯೀ ಹೊತ್ತು ವಂದು ರಾತ್ರಿ ಯಿದ್ದು. ಯಿವರ ಮೇಲೆ ಯಿಲ್ಲಿಯೂ ತಮ್ಮ ಕಾಲಕ್ಷೇಪದ ನಡಯುವದಿಲ್ಲಾಯಂದು ಅಲ್ಲಿಂದಾ ಹೊರಟು ಮುಂದಕೆ ಉಪ್ಪನಹಳ್ಳಿಗೆ ಹೋದರು. ಯಿಲ್ಲಿ ಒಂದು ರಾತ್ರಿ ಯಿದ್ದು ಯಿವರ ಮೇಲೆ ಯಿಲ್ಲಿಯೂ ತಮ್ಮ ಕಾಲಕ್ಷೇಪವಾಗುವುದಿಲ್ಲಯೆಂಬುದಾಗಿ ಅಲ್ಲಿಗೆ ಹೋದರು. ಅಲ್ಲಿ ಯಿರುವ ವೇಳೆಯಲ್ಲಿ ವಂದು ದಿವಸ ಬೇಟೆ ಸಲುವಾಗಿ ಮಹಿಸೂರು ಸಮೀಪದಲ್ಲಿ ಚಾಮುಂಡೇಶ್ವರಿ ಬೆಟ್ಟದ ಬಳಿಯಲ್ಲಿ ಹಾಲುಕೊಳ ಯಂಬುದರಲ್ಲಿ ವೃಕ್ಷದ ಕೆಳಗೆ ಬಳಲಿಕೆಯಿಂದಾ ಮಲಗಿಕೊಂಡು ಯಿರುವ ವೇಳೆಯಲ್ಲಿ, ಮೈಸೂರು ೩೩ ಹಳ್ಳಿ ಗಡಿಯನ್ನು ಆಳುತ್ತಿದ್ದ ಲಿಂಗವಂತ. ವಡೇರ್‍ರು ಹೆಂಡತಿ ಮಕ್ಕಳು ಯೀ ಕೊಳಕ್ಕೆ ನೀರಿಗೆ ಬಂದಲ್ಲಿ ವೀರನಗೆರ್‍ರನಾಯಕಾಯಂಬುವನು ಯೀ ವಡೆರ ಹೆಣ್ಣು ಬಹುರಮಣೀಯವಾಗಿ ಯಿದ್ದ ಕಾರಣ. ತನ್ನ ವಶ ತಕ್ಕೋ....ಯಂಬುದಾಗಿ ಯತ್ನ ಮಾಡಿಕೊಂಡು ಯಿದ್ದಲ್ಲಿ.ಯಿ ವಡೇರ ಮನೆ ಸಮೀಪದಲ್ಲಿ ಬಹಖವಾಗಿ ದುಖಃ ಪಡುತ್ತಿದ್ದಲ್ಲಿ ಭೇಟೆಯಾಗಿದ್ದಲ್ಲಿ ಅರಸುಗಳ ಕಂಡು ಯಿದು ಯಾಕೆ ಹೀಗೆ ದುಖಃ ಪಡುತ್ತಿಯಂಬುದಾಗಿ ಹೇಳಿದರು. ನೀಉ ಅರ್ಧೈರ್ಯ ಪಡುವ ಕೆಲಸವಿಲ್ಲ.ನಾವು ' ಬಂದು ಯೀ ಕಾರ್ಯವನ್ನು ಯಿದ್ದೇವೆ"ಯಂಬುದಾಗಿ ಹೆಂಗಸರ ಸಂಗಡ ಹೇಳಿದರು

ಆ ಮೇಲೆ ಅತಃಪುರಕ್ಕೆ ಕರೆದುಕೊಂಡು ಹೋಗಿ ರಹಸ್ಯವಾಗಿ ಅಲೋಚನೆಮಾಡಿ, ಅತಃಪುರದಲ್ಲಿ ಬಂದೋಬಸ್ತು ಮಾಡಿಕೊಂಡು ವೀರನೆರ್‍ರನಾಯಕನಿಗೆ ಹೆಣ್ಣು ಕೊಡುತ್ತೇವೆ ಯಂದು ಅದೇ ಲಗ್ನದಲ್ಲಿ ನಿಶ್ಚಯಮಾಡಿ ವೀರನೆರ್‍ರನಾಯಕನಿಗೆ ನಿನ್ನ ಬಂಧುಬಳಗಸಹಾ ಕರೆದುಕೊಂಡು ಬನ್ನಿಯಂಬುದಾಗಿ ಹೇಳಿ ಕರತರಿಸಿ, ಅತಃಪುರದಲ್ಲಿ ಎರಡನೇ ಕೋಟೆ ಕಂದಕವನ್ನು ಮಾಡಿ ಸರ್ವವ[>ರನ್ನು]ಬನ್ನಿ;;ಯಂಬುದಾಗಿ ಹೇಳಿ

ಕರತರಿಸಿ, ಮುಖ್ಯವಾದದನ್ನು ಛೇದನವನ್ನು ಮಾಡಿ,ನಾಯಕರ ವಂಶವನ್ನು ಪರಿಚ್ಛೇದನವನ್ನು ಮಾಡಿ ,ಅದೇ ಹೆಣ್ಣನ್ನು ರಾಜ ಅರಸನಿಗೆ ಅದೆ ಮಹೂರ್ತದಲ್ಲಿ ಧಾರಾಪ್ರಸ್ತವನ್ನು ಆಗುಮಾಡಿಸ್ತರು ಆ ವೇಳೆಯಲ್ಲಿ ಆ ವಡೇರು ಅರಸಿನವರ ಕೇಳಿಕೊಂಡರು. ನಮ್ಮ ಹೆಸರು ವಡೇರು ನಶಿಸಿಕೊಡಬೇಕೆಂಬುದಾಗಿ ಕೇಳಿಕೊಂದ್ದರಿಂದ.ಅರಸುಗಳು ಹೇಳಿದ್ದು ಸಂಸ್ಥಾನಗಳೂ ನಿಮ್ನದು.ನೀಉ ಹೇಳಿದ ಹಾಗೆ ಕೇಳುತ್ತೇವೆ ಯಂಬುದಾಗಿ ಅರಸುಗಳುಹೇಳಿದರು.ಆವಡೇರು ಹೇಳಿದ್ದು ನಿಮ್ಮ ವಂಶದ ಗಂಡು ಹುಟ್ಟಿದರೆ ಅದಕ್ಕೆ ಹೆಸರು ವಡೇರ್ರು ಯಂಬುದಾಗಿ ವಡೇರ್ರ ಹೆಸರು ನಡಸಿ ಕೊಡಬೇಕುಯಂಬುದಾಗಿ ಅರಸುಗಳು ಹೇಳಿದರು.ಅ ವಡೇರ್ರುಹೆಸರು ಯಂಬ ಹೆಸರು ಉಂಟಾಯಿತು ಯಿದೆ ರಾಜವಡೆಯರಿಗೆ ಅಲ್ಲಿ ಮಹಿಸೂರ್ರು ರಾಜ್ಯಭಾರಕ್ಕೆ ಪಟ್ಟಾಭಿಷೇಕ ಮಡಿ, ಸಲಿವಾಹನ ಶಕ ೧೫೩೧ಸೌಮ್ಯ ಸಂವತ್ಸರ ಕಾರ್ತಿಕ ಶು ೫ಮಂಗಳವಾರ ರಾಜವಡೆರು ಅತಿ ಪ್ರಾಲ್ಯಕ್ಕೆ ಬಂದು .ಫವುಜಗಳು ತಯ್ಯಾರು ಮಾಡಿಕೊಂಡು ದಕ್ಷಿಣಭಾಗ ಶೀಮೆ ಯೊಹೊತ್ತು ಸಾಧ್ಯ ಮಾಡುಕೊಂಡು, ಯೀನಗಾರಿಪುರ ಪಟ್ಟಣಕ್ಕೆ ಬಂದು ಮುತ್ತಿಗೆ ಹಾಕಿಕೊಂಡು, ಭುಜಂಗರಾಯರು ಯಂಬುವನ್ನು ಸಂಹಾರ ಮಾಡಿಬಿಟ್ಟು, ಯೀ ಪಟ್ಟಣವನ್ನು ಠಾಣ್ಯಹಾಕಿಕೊಂಡು, ಯೀ ನಗರೀಪುರುಪಟ್ಟಣವನ್ನು ಪ್ರಾಕು ಯದ್ದ ೩೩ ಹಳ್ಳಿಗೆ ಸೇರಿಸಿಕೊಂಡು ವಂದು ತಾಲೂಕಿನ ಹಾಗೆ ಮಾಡಿ ಮಹಿಸೂರಿಗೆ ಶೇರಿಸಿಕೊಂಡು ಆಳಿದ ವರುಷ ೭ ತಿಂಗಳು ೧ ದಿನ ೫.

ರಾಜವಡೆಯರು –ನಂಜರಾಜ ಶ್ರೀರಂಗಮ್ಮಳ ಶಾಪ ಹಾಗೂ ವಂಶಾವಳಿ ಕೈಫಿಯತ್ತಿನಲ್ಲಿ ೬೫ ಯಿವರ ಮಕ್ಕಳು ನಂಜರಾಜವಡೆರ್ರು ಶಕ ೯೧೬ನೇ ಜಯ ಸಂಲ್ಲು ಸಕ ೯೮೦ನೇ ಹೇವಿಳಂಬ ಸಂವತ್ಸರವರಿಗೆ...ವೈದ್ಯೇಶ್ವರ ಸ್ವಾಮಿಯವರ ಗುಡಿ ಮುಂದೆ ತಮ್ಮ ಪ್ರತಿಷ್ಠೇಯನ್ನು ....ಆಳಿದ ವರುಷಾ ೬೫ .....ಜಿವ...ನಂದ ಸಂವತ್ಸರದಾರಭ್ಯ ಶಕ ೧೫೫೫ನೆ ಅಂಗೀರಸ ಸಂವತ್ಸರವರಿಗೆ ಆಳಿದ ವರುಷಾ.

ಅವರ ದಿವಸದಲ್ಲಿ ಶ್ರೀರಂಗಪಟ್ಟಣವನ್ನು ಶ್ರೀರಂಗನಾಯಕರನ್ನಯ ಆಳುತ್ತಾ ಯಿರುವಲ್ಲಿ ಅವರಿಗೆ...ನಾಲ್ಕು ೪ ಯಂಬ ರೋಗವಾಗಲಾಗಿ ಯೀನು ಉಪಚಾರ ಮಾಡಿದರೂ ವಾಸಿಯಾಗಲಿಲ್ಲವಾದ ಕಾರಣ ಗಜಾರಣ್ಯಕ್ಷೇತ್ರ ಮಹಾತ್ಮೆ. ವೈದ್ದೇಶ್ವರ ಮಹಾತ್ಮೆಯನ್ನು ಕೇಳಿ, ಆಲ್ಲಿಗೂಯೀ ಅರಸುಗಳಿಗೆ ಮಾತ್ರ ಭಾವವಾಗಿದ್ದ ಕಾರಣ ಆ ಶ್ರೀ ರಂಗರಾಯರು ಯೀ ಕ್ಷೇತ್ರವನ್ನಯ ಕುರುತು ಬಂದಂಥವನಾಗಿ.ಯೀ ಕ್ಷೇತ್ರದಲಿ ವೈದ್ದೇಶ್ವರಾಯಸ್ವಾಮಿಯವರ ಸ್ವಾಮಿಯವರ ಸೇವೆಯನ್ನು ಮಾಡಿಕೊಂಡು ಯಿರಲಾಗಿ.ಕೆಲಉ ದಿವಸ ವಾಸವನ್ನು ಮಾಡಿಕೊಂಡು ತರುವಾಯು ಆ ರೋಗ

ವಾಸಿಯಾದಂತಾಯಿತು ಆಯಿತು.ಆ ತರುವಾಯ ಅವರಿಗೆ ಪುತ್ರಸಂತಾನ ಯಿಲ್ಲದಿದ್ದರಿಂದ ವೈರಾಗ್ಯಭಾವವಾಗಿ ಯೀ ಕ್ಷೇತ್ರವನ್ನು ಬಿಟ್ಟು ಹೋಗಲಾರದೆ ಯಿರುತ್ತಾ ಅವಸಾನಕಾಲ ಪ್ರಾಪ್ತವಾಗಲಾಗಿ ಅಲ್ಲಿ ಮೈಸೂರು ಅರಸುಗಳಿಗೂ ಯೀ ರಾಯರಿಗೂ ಮಿತ್ರಭಾವವಾಗಿದ್ದ ಕಾರಣ ಪತ್ನಿಯರಾದಂಥಾ ಶ್ರೀರಂಗಮ್ಮನವರ ಬಳಿಗೆ ಬಿದ್ದು ...ನಿರೂಪದ ಬರಶಿ ಕಳುಹಿಸಿದುದು.ಮೈಸೂರು ಚಾಮರಾಜ ವಡೆಯರಿಗೆ ಕಳುಹಿಸಿ, ಆ ಸಂಸ್ಥಾನವನ್ನು ಅವರ ವಶಕ್ಕೆ ಕೊಟ್ಟು ನೀನು ಶೀರ್ಘ.... ಬರುವನು ಯಂಬುದಾಗಿ ಬರಶಿಕಳುಹಿಸಿಸಂಸ್ಥಾನವನ್ನು ಚಾಮರಾಜ ವಡೆಯರಿಗೆ ಕಳುಹಿಸಿ ಸಂಸ್ಥಾನವನ್ನು ಕೊಟ್ಟಂಥಾ...ದಾನ ದತ್ತಿಯನ್ನು ಕುರಿತು ಹೊರತು ಹೋರಕು ....ಲ್ಲಿ ಆ ರಂಗಮ್ಮನವರು [>ರು] ಅಮೋಘಲವಾದಂಥಾ ಮೂಗುತಿಯನನು ಯೊಟ್ಟುಕೊಂಡು ಯಿದ್ದಲ್ಲಿ, ಯೀ ಮೈಸೂರು ಅರಸು ಆದಂಥಾವನು ಮೂಗುತಿಯನ್ನು ನಮಗೆ ಕೊಡು ಯಂಬುದಾಗಿ ಪೀಡಿಸಿದ ಕಾರಣ. ಯಿಲ್ಲಿ ಶ್ರೀರಂಗರಾಯರ್ರು ಸ್ವರ್ಗಸ್ಥರಾದರು. ಪತ್ನಿಯಾದ ರಂಗಮ್ಮನವರು ಕೆಲು ದಿವಸ ಯೀ ಕ್ಷೇತ್ರದಲ್ಲಿ ವಾಸಮಾಡಿಕೊಂಡು ಯಿದ್ದಲ್ಲಿ ಯೀ ಮೂಗುತ್ತಿ ನಿಮಿತ್ಯವಾಗಿ ತಳಕಾಡು ಅರಸುಗಳ ಬಳಿಕ ಮೈಸೂರು ಅರಸು ಚಾಮರಾಜವಡೇರ್ರು ಶ್ರೀರಂಗಮ್ಮನವರು ತಮ್ಮ ಸಂಸ್ಥಾನಕ್ಕೆ ಕಳಿಹಿಸಿಕೊಡಿ ಎಂಬುದಾಗಿ ಬರೆದು ಕಳುಹಿಸಿದ್ದಲ್ಲಿ ಯಿವರು ಕಳುಹಿಸದೆ ಧಿಕ್ಕಾರವನ್ನು ಮಾಡಿದಂತರಾದವರು. ಆದುದರಿಂದ ಆ ಸಂಸ್ಥಾನದ...ತ್ತಿ ಬಂದು ಯೀ ಸಂಸ್ಥಾನವನ್ನು ಸಾಧಿಸಿದರು ತಳಕಾಡು ಅರಸುಗಳ [>ಳ]ಪರಿಚಿತರ[>ಪರಾಚಿತರ] ಮಾಡಿದರು ಯಿಷ್ಟರಲ್ಲಿ ಶ್ರೀರಂಗಮ್ಮನವರು ನಮ್ಮ ಮೂಗುತ್ತಿ ನಿಮಿಷ್ಯ ಮಾನಭಂಗ ಮಾಡುತ್ತಾರೆ ರೆಂಬುದಾಗಿ ತಿಳಿದು ಬಹುಕೋಪ ಬಂದಂಥವಳಾಗಿ ನಮ್ಮ ನಿಮಿತ್ಯ ತಳಕಾಡು ಅರಸುಗಳು ಸಂಸ್ಥಾನ ಬಿಟ್ಟು ಪರಾಜಿತರ ಕಲ್ಲಾಯಿ ಸಂಸ್ಥಾನ ಅವರ ವತ[>ವಶ]ಕೆ ಆಯಿತುಯಂಬುಧಾಗಿ ಕೋಪಯುಕ್ತಳಾಗಿ ರತ್ರೆಕಾಲದಲ್ಲು ಸದೀ ತೀರಕ್ಕೆ ಹೋಗಿ ನಾನು ಮಹಾಪತಿವೃತೆಯಾಗಿದ್ದರೆ ತಳಕಾಡು ಸಂಸ್ಥಾನ ಮರಳು ಬೆಳೆದು ಹೋಗಲಿ ಮೈಸೂರು ಸಂಸ್ಥಾನದವರಿಗೆ ಮಕ್ಕಳು ಆಗಬೇಡಾ ನಾನು ಯಲ್ಲಿ ಪ್ರವೇಶವ ಮಾಡುತ್ತಾ ಯಿದ್ದೇನೋ ಆ ಸ್ಥಳವು ಮಡವು ಆಗಿ ಈ ಮೂಗುತಿಯನ್ನು ಸಿಕ್ಕಬೇಡ ಯಂಬುದಾಗಿ ಶಾಪವನ್ನು ಕೊಟ್ಟಂಥವಳಾಗಿ ಕಾವೇರಿ ಪ್ರವೇಶವನ್ನು ಮಾಡಿದಂತವಳಾದಳು.ತರುವಾಯ ಮೈಸೂರು ಅರಸರು ಈ ಸವಸ್ಥಾನ ಸೇರಿಸಿಕೊಂಡು ಶಾಲಿವಾಹನ ಶಕವರ್ಷಂಗಳು ೧೫೫೬ನೇ ಸಂದ ವರ್ತಮಾನವಾದ ಶ್ರೀಮುಖ ಸಂವತ್ಸರದಾರಭ್ಯ ಶಕ ೧೩೬ನೇ ರುಧಿರೋದ್ಗಾರು ಸಂವತ್ಸರ ವರಿಗೆ ಆಳಿದಂತಾ ವರುಷಂಗಳು ೧೭೦ಕ್ಕೆ ವಿವರವಿರುವುದು."[೮೮]

**ವರುಷ ತಿಂಗಳು :** ೦-೬ ಚಾಮರಾಜ ವಡೆಯರು ಆಳಿಕೆ, ೨೨-೦ ಕಂಠೀರವ ನರಸರಾಜ ವಡೆಯರು ಆಳಿಕೆ ವರುಷಾ, ೫-೦ ದೊಡ್ಡ ದೇವರಜ ವಡೆಯರ್ರು ವರುಷ, ೩೨-೦ ಚಿಕ್ಕ ದೇವರಾಜ ವಡೆಯರು ವರುಷ, ೩-೦ ಮುಹು ಅರಸು ವರುಷಾ-೩, ೧೦-೦ ಚಾಮರಾಜ ವಡೆಯರ್ರು, ೩೫-೦ ಕೃಷ್ಣರಾಜ ವಡೆಯರು, ೧೧-೦ ಚಿಕ್ಕ ಕೃಷ್ಣರಾಜ ವಡೆಯರು, ೨೬-೦ ದೊಡ್ಡ ನವಾಬ ಹೈದರಾಲಿಖಾನ ಬಾಹದರವರು, ೧೬-೦ ಟೀಪುಸುಲತಾನ ಪಾದಷಾಹಾ, ೬-೦ ಯಂಗೇಜಿ ಬಾಹದರ ಕಡೆ ಚಿಕ್ಕ ಸ್ರೀ ಕೃಷ್ಣರಾಜ ವಡೆಯರು

**ಬೆಟ್ಟದ ಚಾಮರಾಜವಡೆಯ**

"ಬೆಟ್ಟದ ಚಾಮರಾಜವಡೀರ್ರು ಶ್ರೀರಂಗಪಟ್ನಾ ಆಳುತ್ತಾ ಯಿರುವಾಗ್ಯೆ, ಅವರ ಕಡೆ ದಳವಾಯಿ ದೊಡ್ಡೈಯ್ಯನವರ ಕಡೆ ಸುಬೇದಾರ ಶಿವಣ್ಣ ಯಂಬುವನು ಯೀ ನಾಗಮಂಗಲ ಪಟ್ಟಣದ ಕೋಟೆಯಲ್ಲಿ ಕೋಪಬ್ರದೇವರು ದೇವಾಲಯವುಲ್ಲದೆ ಗರ್ಭಗೃಹಾ ಮಾತ್ರ ಇದ್ದದ್ದರಿಂದ ಆ ದೇವರಿಗೆ ದೊಡ್ಡಯ್ಯನವರು ಮನೆ ದೇವರು ಎಂದು ವಿಶೇಷವಾಗಿ ನಡೆದುಕೊಂಡು ಬರುತ್ತಿರಲಾಗಿ,ತಮಗೆ ವಿಶೇಷ ಅಧಿಕಾರವು ಆದರಿಂದಾ ಈ ದೇವರಿಗೆ ದೇವಾಲಯ ಉತ್ಸವ ಸಹಾ ಮಾಡಬೇಕೆಂದು ಮನಸ್ಸಿರಿಸಿ ಸುಭೇದಾರ ವೀರಣ್ಣನಿಗೆ ಅಪ್ಪಣೆ ಕೊಟ್ಟು ಪ್ರಕಾರ ಯೀ ವೀರಣ್ಣ ದೇವಾಲಯ ಸಂಪೂರ್ಣವಾಗಿ ರಥವನ್ನು ಸಹಾ ಕಟ್ಟಿ ಕಂದಾಚಾರದ ಬಗ್ಗೆ ವಿನಿಯೋಗಾದಿಗಳಿಗೆ ಮಾಡಿದ ಶೀಮೆಗಳ ವಿವರಾ : ಲಲಾಹಿಪಟ್ಟ ಪ್ರಕಾರ ದಾಖಲೆ ಳ ತಕ್ಕದ್ದು ಯೀ ವಿವರ ಸುಬೇದಲ್ಲಾ ಮತ್ತು ಯೀನು ಕೆಲ್ಸ ಕಾಣದ್ದರಿಂದ ಈ ಮೈಸೂರವರ ದಿವ್ಸದಲ್ಲು ಮಾಡಿದ ಅಗ್ರಹಾರಗಳು ದೇವತಾ ಸೇವೆ ಬಗ್ಗೆ ಸಹಾ ಬಿಟ್ಟ ಸೀಮೆಗಳು ವಿವರು ಸಹಾ. ಲಲಾಹಿ ದರಾಖ (>ದಾಖಲು]ಬರಶಿದೆಯಿದೆ ಪ್ರಕಾರ ಮೈಸೂರವರು ಆಳಿದರು."[೮೫]

**ಕಂಠೀರವ ನರಸರಾಜ ವಡೇರು**

"ಮೈಸೂರು ಸಂಸ್ಥಾನಕ್ಕೆ ಸಲ್ಲುವ ಕಂಠೀರವ ನರಸರಾಜವಡೇರು ಯೀಕ್ಕೇರಿ...ಕ್ಕೆ ಯಿಂದ ಸೀಮೆಯನ್ನು ಸ್ವಾಧೀನ ಸ್ವಾಧೀನಮಾಡಿಕೊಂಡು ಯಿರುತ್ತಾ ಯಿದ್ದಲ್ಲಿ. ಹಾರನಹಳ್ಳಿಗೆ ದಕ್ಷಿಣ ದಿಕ್ಕಿಗೆ ವಂದೂವರೆಗೆ ಹರದಾರಿಯಲ್ಲಿ ಯಿರುವ ಬಾಗಡೆ ಬಳಿಗೆ ಬಂದು ಯೀ ಕೋಟೆಯನ್ನು ನೋಡಿ ಕೋಟೆ ಬಹಳ ಪ್ರಶಸ್ತವಾಗಿ ಜಗಳದ ಕೋಟೆ ಸ್ಥಳ ಕಂಡದ್ದರಿಂದ, ಯೀ ಕೋಟೆ ವುತ್ತಾಂಶವನ್ನು ಕೇಳಿದ್ದಲ್ಲಿ ಆ ಸ್ಥಳದವರು ಹೇಳಿದ ವಿವರಾ:

ಹೊಳೆ ನರಸಿಪುರದಿಂದ ತಿಮ್ಮನಗವುಡನು ಬಂದು ಯೀ ಸ್ಥಳವನ್ನು ನೋಡಿದ್ದಲಿ... ಮೈದಾನವಾಗಿ ಯಿದ್ದ ಕಾರಣ, ಯೀ ಸ್ಥಳದಲ್ಲಿ ವಂದು ಗ್ರಾಮದ ಹೆರಸಲಲ್ಲಿ ಕಟ್ಟಬೇಕೆಂದು ದಾಸ್ತ ಚಿಕ್ಕದಗಿ ಒಂದು ಊರ ಕಟ್ಟಿ ಮಗಳೆಂಬ ಹೆಸರು ಯಿಟ್ಟು ಊರ್ರಿಗೆ ಪಶ್ಚಿಮ ದಿಕ್ಕಿನಲ್ಲೂ ಕೆರೆಯನ್ನು ಕಟ್ಟಿಸಿ ಯಿರುತ್ರಾ ಯಿದ್ದಲ್ಲಿ.... ನ ಮಗನಾದ ನರಸೆಗವುಡನು ಯಿದ್ದಾನೆ" ಯಂಬದಾಗಿ ಹೇಳಿದರಿಂದ, ಯೀ ಕೋಟೆಯನ್ನು ದುರಸ್ತಾಗಿ ಕಟ್ಟಿಶಿದರೆ ನಮ್ಮ ಸಂಸ್ಥಾನಕ್ಕೆ ಹೆಸರು ಬಂದಿತ್ತು ಯಂಬದಾಗಿ ಅಲೋಚನೆ.... ಪಾಯವನ್ನು ತೆಗೆದು, ಕಂದಕ ಮುಂತಾದನ್ನು ಆಳವಾಗಿ ತೊಡಿಸಿ, ಅಗಳಲ್ಲಿಮೀನು ಮೋಸಳೆ ಮುಂತಾದ್ದು ನಿಲ್ಲುವಂತೆ ನೀರ್ರು ಮುಂದನ ಕೆರೆ ಸಹಾ ಕಟ್ಟಿಶಿದರ್ರು. ಕಂಠೀರವ ನರಸರಾಜವಡೇರು ಮುಂತಾಗಿ ಯೀ ವಂಶಸ್ತರು ಆಳಿದರು.

ತದನಂತರದಲ್ಲಿ ಮಹಾರಾಜ ಗೋಪಾಲರಾಯನು ದಕ್ಷಿಣರಾಜ್ಯವನ್ನು ತಕ್ಕೊಂಡು ಠಾಣ್ಯ ಹಾಕಿ ಆಳಿದರು. ತದನಂತರ ನವಾಬ ಹೈದರಲಿಖಾನರವರು. ಯಿವರ ಮಗಾ ಟೀಪು ಸುಲತಾನ ನವಾಬರು ಮುಂತಾಗಿ ಸಹಾ ಆಳಿದರು.

ತದನಂತರದಲ್ಲಿ ಶಿದ್ದಾರ್ಥಿ ಸಂವತ್ಸರದ ಜ್ಯೇಷ್ಠ ಶು ೩ ಯಲ್ಲು ಯಿಂಗರ್ರೇಜು ಬಾದವರು ಶ್ರೀರಂಗಪಟ್ಟಣವನ್ನು ತೆಗೆದುಕೊಂಡು, ಮೈಸೂರು ಸಿಂಹಾಸನಾರೂಢರಾದ ಕೃಷ್ಣರಾಜ ವಡೆಯರನವರ ಹವಾಲಗಿ ನಡದು ಬರುತ್ತಾಯಿದೆ."[೮೬] ಮೈಸೂರು ಒಡೆಯರು ಆಳ್ವಿಕೆ ನಡೆಸಿದ ವಿವರ ಕೈಫಿಯತ್ತಿನಲ್ಲ ಲಕ್ಕಣ್ಣವೊಡೆಯ, ಕೃಷ್ಣವೊಡಯರಿಂದ ಚಿಕ್ಕದೇವರಾಜ ಒಡೆಯರವರೆಗೆ

"ಪೂರ್ವೋತ್ತರಗಳನ್ನೂ ಅಷ್ಟಗ್ರಾಮದ ಪೂರ್ವತ್ತರಗಳನ್ನು ಸಂಗತಿಯಿಂದಲೂ ಕೆಲವು ಲಿಖಿತ [ಬರಹ]ದಲ್ಲಿ ಇದ್ದದ್ದು ನಾನಿ ಕಂಡಷ್ಟೆ ಬಿನ್ನಹ ಮಾಡೇನು ಇದೂ ಅಲ್ಲದೆ ಅಷ್ಟಗ್ರಾಮದಲ್ಲಿ ಈ ಪ್ರಭುತನ ಮಾಡುತ್ತಿದ್ದವರು ತೆಗೆಸಿದ ಕಾಲುವೆಗಳಲ್ಲಿ ಅದ(ರ) ಅಚ್ಚುಕಟ್ಟು, ಗದ್ದೆ ವಿವರಗಳು ಮುಂತಾದ ಮಾನ್ಯ ವಿವರಗಳು ಮುಂತಾದವು ಸಹ, ದೇವಾದಾಯ ಬ್ರಹ್ಮದಾಯ ಅಗ್ರಹಾರ ಪುರವರ್ಗ ವೂಳಿಗಮನ್ಯ ಇವು ಮುಂತಾಗಿ ನಡೆದು ಬರುವ ವಿವರ. ಹಿಂದಕ್ಕೆ ಪ್ರಭುಗಳು ಕೊಟ್ಟ ಮಾನ್ಯ ರಾಯರು ಕೊಟ್ಟ ಮಾನ್ಯ. ತಿರುಮಲರಾಜಯ್ಯನವರು ಕೊಟ್ಟ ಮಾನ್ಯ. ರಂಗಮ್ಮನವರು ಕೊಟ್ಟ ಮಾನ್ಯ ದೊಡ್ಡದೇವರಾಜ ಒಡೆಯರು ಕೊಟ್ಟ ಮಾನ್ಯ ಚಿಕ್ಕದೇವರಾಜ ಒಡೆಯರು ಕೊಟ್ಟಮಾನ್ಯ ಸಹ ದೇವದಾಯ ಬ್ರಹ್ಮಾದಯ ಪುರವರ್ಗ ಅಗ್ರಹಾರ ವೂಳಿಗಮಾನ್ಯ ತ್ಯಾಜಿಮಾನ್ಯ ಮುಂತಾದ ಲೆಕ್ಕಗಳನ್ನು ನಾನು ಕಂಡಷ್ಟು ಬಿನ್ನಹ ಮಾಡೇ(ಡುವೆ)ನು.

ಸ್ವಾಮೀ ಆ ಮೇಲೆ ಚಿಕ್ಕದೇವರಾಜ ಒಡೆಯರು ಭಗೀರಥೀ [>ಭಗೀರಥ]ಗಂಗೆ ತಂದಹಾಗೆ ಬಹುಮುಖವಗಿ ಕಾವೇರಿ ಕಾಲುವೆಗಳನ್ನು ಭಾವಸಂವತ್ಸರಗಳಾರಭ್ಯ ಕಾಲುವೆ ವೀರರಾಘವಯ್ಯನವರ ಮುಖಾಂತರ ಪ್ರತಿಷ್ಠೆಮಾಡಿ ಉದ್ದಾರಮಾಡಿ[ಸಿ]ದ ಕಾಲುವೆಗಳ ವಿವರ

ಉಭಯಂ ಕಾವೇರಿಯಭಯ ಪಾರ್ಶ್ವದಲಲಿ ಇರುವ ಚಿಕ್ಕದೇವಸಾಗರ ಕಾಲುವೆ, ವಿರಜಾನದಿ ಕಾಲುವೆ, ಉಭಯಂ ಕಾಲುವೆ ೨ಕ್ಕೆ ಹೋಬಳಿ ೧೩ಕ್ಕೆ ಅಚ್ಚುಕಟ್ಟು ಮಾಡಪ್ಪರು ಯೇರಿ ಬಗ್ಯೆ (?) ಹೋಬಳಿಗಳಿಗೆ ಹೊಂದಿಸಿ ತೋಟ, ಗ್ರಾಮ ದೇವಾದಾಯ ಬ್ರಹ್ಮಾದಾಯ. ಅಗ್ರಹಾರ ಪುರವರ್ಗ ತ್ಯಾಜಿಲುಂಬಿಳಿ ಊಳಿಗಮಾನ್ಯ ಅರಮನೆ ಗ್ರಾಮಗಳು ಸಹ ಆ ಗ್ರಾಮಗಳು ಸಹ ಅಗ್ರಹಾರಗಳ ಸಹ."[೮೭]

**ಚಿಕ್ಕದೇವರಾಜ ಒಡೆಯರ್**

"ಅರಹೆನೆ ಸ್ಥಳದಲ್ಲೂ ಹೊಳೆಕಾಲ್ವೆ ೧ಕ್ಕೆ ಚಿಕ್ಕದೇವರಾಯಸಾಗರದ ಕಾಲ್ವೆ ೧ ಕೆರೆ ೧ ಸಹ ಅಚುಕಟ್ಟು ಗದ್ದೆ ಖ೧೧೬೪ಕ್ಕೆ ಮಾನ್ಯ ಉತ್ತಾರದ ದೇದಾಯ ಖ೩೭೮೦೦ ವಿವರ. ಚಂಜೀರ ಗದ್ದೆ ಖ ೩೦ ಬಲ್ಲಿನಹಳ್ಳಿ ಗದ್ದೆ ಖ೩ ಅರಮನೆ ಆರಾಲು ರಾಚಿನಹಲ್ಲಿ ಗದ್ದೆ ಹೊನ್ನೆಹಳ್ಳ ಖ೧. ಅಲ್ಲಿನಹಳ್ಳಿ ಖ ಕೂಡನಹಳ್ಳಿ ಖ ಯೀ ಗದ್ದೆ ಯೀ ಗ್ರಾಮಗಳು ಸಹಾ ಸೂದ್ರುಮಂಗಳಿಗೆ ೫೦೦೬೦ ಅಕ್ಷರದಲ್ಲಿ ಆಯಿದು ನೂರು ವರಹಾ ಸ್ತಳಗಳನ್ನು ನಾಲ್ವತ್ತು ಮುಪಾನ [>ಗ] ವೃತ್ತಿಗಳ ಪರಿಭೇದ.... ಮಡಿ ದೇವರಾಜಾಪುರವೆಂಬಾ ಅಭಿದಾನವಂ ಮಾಡಿ, ನಾನಾ ಗೋತ್ರದಲ್ಲಿ ನಾನಾ ಸೂತ್ರದ ನಾನಾ ಶಾಖೆಗಳಾದ ಬ್ರಾಹ್ಮರಿಗೆ ಯೀ ದಿನದಲ್ಲಿ ಸಹಿರಣ್ಯದಕಧಾರ ಧಾರಾಪೂರ್ವಕವಾಗಿ ಕುಷನರ್ಪದಾ ನಿದಿಯಿಂದಾ ಸರ್ವ ಮಾನ್ಯವಾಗಿ, ಯಿಲ್ಲಿಂದಾ ಮುಮದೆ ಯೀ ಗ್ರಾಮಗಳು ಯೀ ಕಾಲುವೆ ಕೆಳಗಣ ಹಳ್ಳಿ ಕೂಡಿದ ಗದ್ದೆ ಯಿನ್ನು ನೀ ಪುತ್ರ ಪೌತ್ರ ಪಾರಂಪರ್ಯವಾಗಿ ಆ ಚಂದ್ರಾರ್ಕಸ್ತಾಯಗಳಾಗಿ ಸರ್ವಮಾನ್ಯವಗಿ ಸುಕದಿಂದ ಅನುಭವಿಸಿಕೊಂಡು ಬಂದಿರಿ. ಯೀ ಗ್ರಾಮಗಳು ಗದ್ದೆವಳಗೆವೊಗುಳ್ಳಾ ನಿಧಿ ನಿಕ್ಷೇಪ ಅಷ್ಟಭೋಗ ಸ್ವಾಮ್ಯಗಳೂ ನಿಮಗೆ ಸಲ್ಲುವದು. ಯೀ ಗ್ರಾಮಗಳು ಯೀ ಗದ್ದೆ ನೀವು ಮಾಡುವ ವ್ಯವಹಾರ ಚತುಷ್ಟಯಕ್ಕು ಸಲ್ಲುವುದು ಯೀ ಗ್ರಾಮಗಳು ಯೀ ಗದ್ದೆ ನೀವು ಮಾಡುವ ವ್ಯವಹಾರ ಚತುಷ್ಟಯಕ್ಕು ಸಲ್ಲುವುದುಯೆಂದು ಕೋಟಿ ಚೆನ್ನಗುವುಡನಹಳ್ಳಿಗೆ ಪ್ರತಿನಾಮಧೇವರಾಜಪವುರವೆಂಬ ಅಗ್ರಹಾರದ ಶಿಲಾಶಾಸನವು.........

ದಾನಪಾಲಯೋವ್ ಮಧ್ದಯೆ ಧಾನ..... ಶ್ವೆಯನು ಪಾಲನಂ ಧಾನಂ ಶೃಂಗ್ಗ್ರ್ಮಾವಾಪ್ನೊತಿ ಪಾಲನಾದಚ್ಯುತಂ ಪದಂ ಯಿಂದ್ರಹಾಃ ಪ್ರರುಕ್ಷತಿ ಚಂಡಾಲಿ ತಮದಂ ಪಶ್ಚತೆ ತದಯಾಶ್ವವ ಮಾಂಶ್ಚಂ ಸುರಯಶಿಕ್ತಂಕಪಾವೆನಚಿತವಾಗ್ನಿನಾ ದೇವ ಬ್ರಾಹ್ಮಣ ವಿತ್ತಣಿ ಬಲಾದ ಪಹರಂತ್ತಿಯೊ ತೆಣಾಂ ಪಾದರಜೋಚಿತ್ಯಾ ಚರರ್ಮಾಯಿಚಿ ಯಿತಂ ಮಾಯಾಃ ಸಾಮಾನ್ಯೋಯಂ ಧರಣ ಶೆತುಮಾಃ ನೃಪಾಣಾಂ ಕಾಲಕಾಲೆ ಪಾಲನೆ ನಿಯೋಭವದದ್ಬಿಸಹಿ. ಸರ್ವನೇತಾಂ ಭಾಡಿನ ಹಃಪಾರ್ತಿವೇಂದ್ರಾನ್ನು ಭೂಯೋ ಯಚತೆ ರಾಮಚಂದಾ: ಯಿದು ನರಸೀಪುರಕೆ ಮಂದಗಿರೆ ಹೋಬಳಿ ಹೊನ್ನೆನ ಹಳ್ಳಿ ಆಗ್ರಹಾರ ೬ ಆರ್ರು ಗ್ರಾಮಗದ್ದೆಗಳಾ ಶಿಲಾಶಾಸನದ ಯಥಾ ಪ್ರತೀ."[೮೮]

**ದೇವರಾಜ ಮಹಿಪಾಲಕ**

"ಕಾವೇರಿ ಮಧ್ಯ ಶ್ರೀರಂಗಪಟ್ಟಣವೆಂಬ ಗೌತಮಿ ಕ್ಷೇತ್ರದಲಲಿ ಶ್ರೀಮದ್ರಾಜೇರಾಜ–ರಾಜಪರಮೇಶ್ವರ–ವೀರಪ್ರತಾಪ ಧರಣೀವರಹಾ, ನಾನಾವರ್ನಕುಟ ಮಣಿ ಮಂಡಲೀಕ ಗಂಡ ಮಹಿಸುರ ದೇವರಾಜದೇವಯ್ಯ ನೈಯ್ಯಯವರು ಕುಮಾರ ದೇವರಾಜ ಮಹಿಪಾಲಕರು ಶ್ರೀರಂಗ ಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಾ ಚಂಡಗವುಡನಹಳ್ಳ ಗ್ರಾಮಕ್ಕೆ ಪ್ರತಿನಾಮದೇಯವಾಗಿ ದೇವರಾಜಪುರವೆಂಬ ಅಗ್ರಾಹಾರದ ಶಿಲಾಶಾಸನ ಇವರ ಕಾಲದು."[೮೯]

**ಕೃಷ್ಣರಾಜ ಒಡೆಯರ್**

"ರಾಮಚಂದ್ರವುರ ಅಗ್ರಹಾರ ೧ಕೆ ಶಾಲಿವಾಹನ ಸಕ ೧೬೭೧ ಶುಕ್ಲನಾಮ ಸಂ ವೈಶಾಖ ಶು. ೧೨ ಅಂಗಾರಿಕರವಾರದಲ್ಲಿ ಕೃಷರಾಜವಡೆಯರವರು ಅಪ್ಪಣೆ ಮೇರ್ರಿಗೆ ದಳವಾಯಿ ವೀರರಾಜೈಯ್ಯನವರು ಮಕ್ಕಳೂ ದಳವಾಯಿ ದೇವರಾಜೈಯ್ಯನವರು.

ಚಂದಾಸಾಹೇಬರು ಕೆಲವು ಸೀಮೆ ಬಲಕಾಯಿಸಿಕೊಂಡು ಕೆಲವು ಫೌವುಜನ್ನ ಜಮಾಯಿಸಿಕೊಂಡು ಫರಾಷೀಷರನು ಕುಮಕಿಗೆ ಕರಿಸಿಕೊಂಡು, ತಿರಚನಾಪಲ್ಲಿ ಕೋಟೆಗೆ ಮುತ್ತಿಗೆ ಹಾಕಿದ್ದರಿಂದ ಕೋಟಡಯೊಳಗೆ ರುಸ್ತುಮುಸ್ತೈದು ಇಲ್ಲದೆ ರಂಜನಗಡದ ನವಾಬ ಮಾತಬರ್ ಖಾನರು ಮುಂತಾದ ಕೆಲವು ಜನ ದೊಡ್ಡ ಮನುಷ್ಯರ ಸಂಗಡ ಮಸಲತ್ತು ಮಾಡಿ, ತಂಜಾವೂರು ಸಂಸ್ಥಾನದಿಂದ ಕೆಲವು ಫವುಜು ಮಾನಾಜಿಫಾಕೆಯೆಂಬ ಸರದಾರನ್ನ ಕುಮಕಿ ಕರಿಸಿಕೊಂಡು, ತಿರುಚನಾಪಲ್ಲಿ ಕೋಟೆ ಹೊರಗೆ ವಂದು ರೋಖಿನಲ್ಲಿ ಯಿಳಿಸಿ, ಶ್ರೀ ರಂಗಪಟ್ಟಣಕ್ಕೆ ಆಳಿದ ಮಹಾಸ್ವಾಮಿ

ಕೃಷ್ಣರಾಜವಡರಯರವರ ಸನ್ನಿಧಾನಕ್ಕೆ ಕಾಗದ ಬರೆದು, ವಕೀಲ ಶೇಷಗಿರಿಪಂತರನ ಕಳುಹಿಸಿ. ನೀವು ಭಾರೀ ಫವುಜು ಕುಮಕಿ ಕಳಹಿಸಿ ಚಂದಾಸಾಹೇಬರನ ಹೊಡೆದು ಹಾಕಿಸಿದಲ್ಲಿ ತಿರುಚಾನಾಪಲ್ಲಿ ಕೋಟೆ ಆ ಸೀಮೆ ಸಹ ನಿಮ್ಮ ಸಂಸ್ಥಾನಕ್ಕೆ ಕೊಟುತ್ತೀನೆಂಬದಾಗಿ ಹೇಳಿ ಕಳುಹಿಸಿದ್ದರಿಂದ ಅಳಿದ ಮಹಾಸ್ವಾಮಿಯವರ ಅಪ್ಪಣೆ ಮೇರೆಗೆ ಸಂಗಡ ಹನ್ನೆರಡು ಸಾವಿರ ಕುದುರೆ ಅಹಷಾಂ ಕರ್ಣಾಟಕ ವಗೈರೆ ವಂದು ಲಕ್ಷ ಪಾಯಿದಳ ಬರಕಿ ವೆಂಕಟರಾಯರು ಕತ್ತಿ ಗೋಪಾಲರಾಜಯ್ಯರಸಿನವರು ಹೈದರಲ್ಲಿಖಾನರು ಹರಿಸಿಂಗು ಮುಂತಾದ ಜಮಾದಾರರು ಮುಂತಾಗಿ ಫೌಜು ತೆಗೆದುಕೊಂಡು ಹೊರಟುಹೋಗುವಲ್ಲೂ ಮಧ್ಯೇ ಮಾರ್ಗಕ್ಕೆ ಕೃಷ್ಣರಾಜಪುರದ ಬಳಿಗೆ.... ಚಂದಾಸಾಹೇಬರ ಫವುಜು ಸೈದಯಾಕೂಫ ವಗೈರೇರು ಕೈಸೆರೆ ಸಿಕ್ಕಿದರಿಂದ ಮಮ್ಮದಲ್ಲಖಾನರು ತಮ್ಮ ಅಬ್ದುಲ್ವಹಾಬಖಾನರ ಸಂಗಡ ಕೆಲವು ಫವುಜು ಕೊಟ್ಟು, ಎದಿರಾಗಿ ಕಳುಹಿಸಿದ್ದರಿಂದ ಅಬ್ದುಲ್ ಖಾನರು ಬಂದು ಕರಾಚೂರು ಅರನಿನವರ ಭೇಟಿ ತೆಗೆದುಕೊಂಡು, ಬದಲು ಮಾರ್ಗದಲ್ಲಿ ಯಿವರನ ತಿರುಚಿನಾಪಲ್ಲಿಗೆ ಕರೆದುಕೊಂಡು. ಕೆಲವು ಫವುಜು ಹೈದರಲ್ಲಿಖಾನರ ಸಹ ಜಂಬುಕೇಶ್ವರ ದೇವಸ್ಥಾನದ ಬಳಿ ಯಿಳಿಸಿದ್ದರು. ಆವಾಗ ಗುತ್ತಿ ಮುರಾರಿಯವರು ಕೆಲವು ಫವುಜಿನ ಸಂಗಡ ಕುಮಕಿ ಬಂದಿದ್ದರು. ಚಂದಾಸಾಹೇಬನು ಈ ಫವುಜನ್ನು ನೋಡಿ ಭಯಪಟ್ಟು ಒಂದು ಕಡೆ ಕಿನರೇಲಿ ಇಳಿದುಕೊಂಡನು. ಆತನ ಕಡೆ ಕೆಲವು ಫವುಜು ಅಡವಾಡ ಬಂದಿದ್ದನ್ನು ವಾಪಸು ಬಂದು ಸೇರುದರು. ಸದರಿ ಫವುಜಿಗೆ ಫರಾಷೀಷರವರಿಗೆ ಸಹ ಖರ್ಚಿಗೆ ಕೊಡವುದಕ್ಕಿಲ್ಲದ ಕಾರಣ ಚಂದಾಸಾಹೇಬರ ಸಂಗಡ ಜಗಳವಾಡಿಕೊಂಡು ಫರಾಷೀಷರು ಪುಲಿಚೇರಿಗೆ ಹೊರಟು ಹೋದರು. ಕರಾಚೂರು ಅರಸಿನವರ ಕಡೆ ಫವುಜಿನವರು ತಂಜಾವೂರು ಮಾನಾಜಿ ಸಹ ಏಕವಾಗಿ ಮೋಸದಿಂದ ಚಂದಾಸಾಹೇಬರ ತಲೆ ಕುಯಿದುಕೊಂಡು ಅವರ ದಿವಾನ ಶೇಷ[+ಗಿರಿ] ರಯನ್ನ ಸಹ ಬಂದರು. [ಕೊಂದರು]. ಚಂದಾಸಾಹೇಬನ ಫವುನ ಯಾತ್ತು ತೀನತೇರೆಯಗಿ ಮಮ್ಮದಲ್ಲಿ ಖಾನರ ಸ್ವಾಧೀನವಾಯಿತು. ಆ ತರುವಾಯ ಕರಾಚೂರು ಅರಸಿನವರಿಗೆ ಕೋಟೆ ಕೊಡುತ್ತೇವೆ ಯೆಂಬದಾಗಿ ಜೇಬಿವಳಕ್ಕೆ ಕರಿಸಿ ವಳಬಾಗಿಲು ಎರಡು ಹಾಕಿಕೊಂಡು ಕೋಟೆ ಮೇಲಿನಿಂದ ಗುಂಡುಗಳ ಹೊಡೆದ್ದರಿಂದ ಈ ವರ್ತಮಾನ ಮಮ್ಮದಲ್ಲಿಖಾನರ ತಾಯಿ ಕೇಳಿ. ನಮಗೆ ಕುಮ್ಮಕ್ಕು ಬಂದು ವುಪಕಾರ ಮಾಡಿದವರ ಮೆಲೆ ನಾವೇ ಗುಂಡು ಹೊಡೆದಲ್ಲಿ ಜಯವಾಗತಕ್ಕದ್ದಿಲ್ಲವೆಮಬದಾಗಿಯು. ಪೂರ್ವದಲ್ಲಿ ಚಂದಾಸಾಹೇಬರು ಮಧರೆ ಮಂಗಮ್ಮಗೆ ಮಾತು ಕೊಟ್ಟು ತಪ್ಪಿದ್ದರಿಂದ ಚಂದಾಸಾಹೇಬರ ದವಲತ್ತು ಅಸತ್ಯದಿಂದ ಹೋಯಿತು ಎಂಬದಾಗಿ ತನ್ನ ಮಗನಿಗೆ

ಬುದ್ದ ಹೇಳಿ, ಜೇಬಿಕಡೆ ಊರುಬಾಗಿಲು ತೆಗಿಸಿದ್ದರಿಂದ ಕರಾಚೂರು ಅರಸಿನವರು ಹಿಂದಕ್ಕೆ ಬಂದು ತಾವು ಇಳಿದಿದ್ದ ಕಡೆಗೆ ಸೇರಿದರು.

ಯದಷ್ಟ ರಂಜನಗಡ ನವಬ ತಯರ್ ಹುಶೇನುಖಾನರು ನವಬ ಸಬ್ದರಲ್ಲಿಖಾರನ ಸಂಗಡ ಅದವಾನಿ ನವಬ ಹಿತಾಯತ್‌ಮೊಹದೀನ್ ಖಾನರು ಸಹ ಸತ್ತು ಹೋದರು. ಅವನರ್ದೀನ್ ಖಾನರ ಮಗ ಮಮ್ಮದಲ್ಲ ಖಾನರು ಹೈದರಾಬಾದ್ ಅಸಫಜಹಾ ನಾಜರಜಂಗರವರ ತಲೆ ಕಂದನೂ ನವಾಬ ಹಿಮ್ಮತ್ ಬಹದರ ವಗೈರೆಯವರು ಕೊಯಿದಾದ, ಸದರಿ ಮಮ್ಮದಲ್ಲಿಖಾನರು ತಿರುಚನಾಪಲ್ಲಗೆ ವೋಡಿಬರುತ್ತಾ ಮಧ್ಯೆ ಮಾರ್ಗದಲ್ಲಿ ರಂಜನಗಡದ ಹುಶೇನ್‌ತಾಯರ್ ಖಾನ ನವಾಬರ ಮಗ ಮಾತಬರ್‌ಖಾನರು ಮಮ್ಮದಲ್ಲಿಖಾನರಿಗೆ ಅನ್ನಾಯಿಕ್ಕಿ. ಆಳು ಕಾಳು ಕುಮುಕು ಮಾಡಿಕೊಟ್ಟು ತಿರುಚನಾಪಲ್ಲಿಗೆ ರವಾನೆ ಮಾಡಿದರು. ಚಂದಾಸಾಹೇಬರಿಗೆ ಹಿಡಿಕೊಡಲಿಲ್ಲ, ಆ ತರ್ವಾಯ ಆರ್ಕಾಡ ದವಲತ್ತು ಮಹಮ್ಮದಲಿಖಾನರು ಬಂದೋಬಸ್ತ ಮಾಡಿಕೊಂಡ ಮೇಲೆ ರಂಜನಗಡ ನವಾಬರಿಗೆ ಮೊದಲು ಐವತ್ತು ಸಾವಿರ ರೂಪಾಯಿ ಶೀಮೆಯಿದ್ದದ್ದರಿಂದ ಹಾಲಿ ಮತ್ತು ಐವತ್ತು ಸಾವಿರ ರೂಪಾಯಿ ಹೆಚ್ಚಾಗಿ ಕೊಟ್ಟು ಬಹಳ ಪ್ರೀತಿಯಿಚಿದ ಯಿಟ್ಟುಕೊಂಡು ಇದ್ದರು."[೯೦]

ನಂಜರಾಜ ವಡೆಯನ ಬಗ್ಗೆ ಕೈಫಿಯತ್ತಿನಲ್ಲಿ ಅಸ್ಪಷ್ಟ ವಿವರ ಇದೆ.

"ಯಿವರ ವಂಶಸ್ತ ಮರಿಲಿಂಗ ......ಶಕ ೧೧೫೫ ..ಅನಚಿದ ಸಂವತ್ಸರದರಭ್ಯ ಶ್ಯಾಲಿವಾಹನ ಶಕ.. ಕಾಳಾಯುಕ್ತಿ ಸಂವತ್ಸರದ ವರಿಗೆ ಆಳಿದ ವರುಷ.

೭೬ ಮೈಸೂರು ರಾಜವಡೆಯರು ಶಕ ೧೨೪೨ ನೇ ಸಿದ್ದಾರ್ತಿ ಸಂವತ್ಸರಭ್ಯ ಶಕ.. ೧೩೧೭ ..ಭಾವ ಸಂವತ್ಸರದವರಿಗೆ.

೬೭ ನಚಿಜರಾಜವಡೆಯರೆಂಬವರು ಶಕ..ಯೀಶ್ವರ ಸಂವತ್ಸರ ಆರಭ್ಯ ಶಖ ೧೩೮.. ಆಳಿದ ವರುಷಾ.. ದೇವರ ಗ್ಹಡಿ ಮುಂತಾದ್ದ ಸಹವರ್ಣಿಕಾಮನ್ನೂ ಪುಣ್ಯಕಾಲ ವೈದೇಶ್ವರಸ್ವಾಮಿ ಸನ್ನಿಧಿಯಲ್ಲಿ ಪ್ರದವಹು ನಂದಸ್ವಾಮಿಗಳವರಿಗೆ ಮಾಡುವ ಮನ ಧಾರೆಯನೆರೆದು ಕೊಟ್ಟ ನಗರವನ್ನೂ ಕುರಿತು ವಡೆರ್ರು ಯಂಬವನು ಶಾಲಿವಾಹನ ಶಕ ವರಷಾ ೮೩೮೩ನೇ (>೮೩೭ನೇ) ಸಂವತ್ಸರಲಾಗಾಯಿತು ಶಖ ೯೧೫ನೆ ನಚಿದನ ಸಂವತ್ಸರಿಗೆ ವರುಷಾ ೩೮.

೬೮ಯಿವರ ಮಕ್ಕಳು ನಚಿಜರಾಜವಡೆರ್ರು ಶಕ ೯೧೬ನೇ ಜಯ ಸಂ//ಲ್ಲು ಶಕ ೯೮೦ನೇ ಹೇವಿಳಂಬ ಸಂವತ್ಸರದ ವರೆಗೆ. ವೈದೇಶ್ವರ ಸ್ವಾಮಿಯವರ ಗುಡಿ ಮುಂದೆ ತಮ್ಮ ಪ್ತಿಷ್ಟೆಯನ್ನು ಆಳಿದ ವರುಷಾ ೬೫ ಜಿ ವ ನಚಿದ ಸಂವತ್ಸರದಾರಭ್ಯ ಶಕ ೧೫೫೫ನೆ ಅಂಗೀರಸ ಸಂವತ್ಸರದ ವರಿಗೆ ಆಳಿದ ವರುಷಾ. -೧೪೨-”[೯೧]

**ಕೆಳದಿ ನಾಯಕರು (೧೪೯೯-೧೭೬೮)**

ವಿಜಯನಗರ ಸಾಮ್ರಾಟರು ವೈಭವದಿಂದ ಆಳುತ್ತಿದ್ದ ಕಾಲದಲ್ಲಿ ಸಾಮಂತರು ಹಲವು ಸಣ್ಣಪುಟ್ಟ ಪಾಳೆಪಟ್ಟುಗಳು, ಸ್ಥಳೀಯರು ನಾಯಕರ ನೇತೃತ್ವದಲ್ಲಿ ಅಸ್ತಿತ್ವದಲ್ಲಿದ್ದವು. ಕರ್ನಾಟಕದಲ್ಲಿ ಇವರು ನಾಯಕರು ಅಥವಾ ಪಾಳೆಯಗಾರರೆಂದು ಪ್ರಸಿದ್ಧಿಯಾಗಿದ್ದಾರೆ. ಇವರಲ್ಲಿ ಕೆಳದಿಯ ಮತ್ತು ಚಿತ್ರದುರ್ಗದ ನಾಯಕರು ಪ್ರಮುಖರು. ವಿಜಯನಗರದ ಪರಂಪರೆಯನ್ನು ಮುಂದುವರೆಸಿದ್ದ ಇವರು ಕರ್ನಾಟಕದ ಇತಿಹಾಸದಲ್ಲಿ ತಮ್ಮದೇ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಶಿವಮೊಗ್ಗಯ ಸಮೀಪದ ಕೆಳದಿ ವಿಜಯನಗರ ಸಾಮ್ರಾಜ್ಯದ ಒಂದು ಸಂಸ್ಥಾನವಾಗಿತ್ತು. ಇದು ವಿಜಯನಗರದ ಪತನದ ನಂತರ ಸ್ವತಂತ್ರ ರಾಜ್ಯವಾಗಿ ತಲೆ ಎತ್ತಿತು. ಸುಮಾರು ೨೫೦ ವರ್ಷಗಳ ಕಾಲ ಅಸ್ಥಿತ್ವದಲ್ಲಿದ್ದು (೧೪೯೯-೧೭೬೩) ಹಿಂದೂ ಧರ್ಮ ಮತ್ತು ಸಂಸ್ಕೃತಿಗಳನ್ನು ರಕ್ಷಿಸಿ, ಪೋಷಿಸಿ ವಿಜಯನಗರದ ಆದರ್ಶಗಳನ್ನು ಮುಂದುವರೆಸಿತು. ಕೆಳದಿಯ ಅರಸರು ಬಿಜಾಪುರದ ಸುಲ್ತಾರನ್ನೂ ಗೋವಾದ ಪೋರ್ಚುಗೀಸರನ್ನು ಸಮರ್ಥವಾಗಿ ಎದುರಿಸಿದರು. ಕೆಳದಿ ರಾಜ್ಯ ಶಿವಮೊಗ್ಗ, ಚಿಕ್ಕಮಗಳೂರು, ದಕ್ಷಿಣಕನ್ನಡ, ಕಣ್ಣಾನೂರು, ಕೊಡಗು, ಹಾಸನ, ತುಮಕೂರು, ಚಿತ್ರದುರ್ಗ, ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ವ್ಯಾಪಿಸಿತ್ತು.

**ರಾಜಕೀಯ ಇತಿಹಾಸ**

ಕೆಳದಿ ಸಂಸ್ಥಾನದ ಸ್ಥಾಪಕನು ಚೌಡಪ್ಪನಾಯಕ. ಈತ ವಿಜಯನಗರ ಸಾಮ್ರಾಜ್ಯದ ಪೂರ್ವಗಡಿಯ ಮೇಲೆ ದಾಳಿಗೈದು ಬೇಡರನ್ನು ಮುಸ್ಲೀಮರನ್ನು ಹಿಮ್ಮೆಟ್ಟಿಸಿ ಕೃಷ್ಣದೇವರಾಯನ ಮನ್ನಣೆಗೆ ಪಾತ್ರನಾದ. ಕೃಷ್ಣದೇವರಾಯ ಈತನಿಗೆ ಚಂದ್ರಗುತ್ತಿ, ಕೆಳದಿ, ಇಕ್ಕೇರಿ ರಾಜ್ಯಗಳಲ್ಲಿ ಜಹಗೀರು ಕೊಟ್ಟನು. ಚೌಡಪ್ಪನಾಯಕನ ಮಗ ಸದಾಶಿವನಾಯಕನು ೧೫೧೪ರಲ್ಲಿ ಪಟ್ಟವೇರಿದ. ವಿಜಯನಗರದ ದಂಡಯಾತ್ರೆಗಳಲ್ಲಿ ಭಾಗವಹಿಸಿ, ಚಂದ್ರಗುತ್ತಿ, ಮಂಗಳೂರು ಬಾರಕೂರುಗಳ ಪ್ರಾಂತ್ಯಾಧಿಕಾರಿಯಾಗಿ ನೇಮಕಗೊಂಡನು. ರಾಮರಾಯ ಈತನ ಪರಾಕ್ರಮವನ್ನು ಮೆಚ್ಚಿ ಕೋಟೆ ಕೋಲಾಹಲ

ಬಿರುದು ನೀಡಿದ. ಸದಾಶಿವನಾಯಕ ಕೆಳದಿಯ ಶ್ರೀರಾಮೇಶ್ವರ ದೇವಾಲಯವನ್ನು ಕಟ್ಟಿಸಿದ. ಈತನ ಕಾಲದಲ್ಲಿ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ಬದಲಿಸಲಾಯಿತು. ಸದಾಶಿವ ನಾಯಕನ ಮಗ ದೊಡ್ಡಸಂಕಣ್ಣನಾಯಕ ೧೫೪೬ ರಲ್ಲಿ ಪಟ್ಟವನ್ನೇರಿದ. ಈತ ಉಡುಗಣೆಯ ಪಾಳೇಗಾರ ವಿರುಪಣ್ಣನನ್ನು ಸೋಲಿಸಿ ಉಡುಗಣೆ ಕೋಟೆ ಮತ್ತು ಉಂಬೂರುಗಳನ್ನು ವಶಪಡಿಸಿಕೊಂಡಿದ್ದ. ಆದರೆ ರಾಮರಾಯನ ಆದೇಶದಂತೆ ಅವುಗಳನ್ನು ವಿರುಪಣ್ಣನಿಗೆ ಹಿಂತಿರುಗಿಸಿದ. ರಾಮರಾಯ ಈತನಿಗೆ ಭುಜಕೀರ್ತಿ ಎಂಬ ಬಿರುದನ್ನಿಟ್ಟನು. ದೊಡ್ಡ ಸಂಕಣ್ಣ ನಾಯಕನು ಕಾಶಿಯಾತ್ರೆಗೆ ಹೋಗಿದ್ದಾಗ ದೆಹಲಿಯನ್ನು ಸಂದರ್ಶಿಸಿ ಅಲ್ಲಿಯ ಹೆಸರಾಂತ ಅಂಕುಷಖಾನ್ ನನ್ನು ಮಲ್ಲ ಯುದ್ದದಲ್ಲಿ ಸೋಲಿಸಿ ಮೊಗಲ ಬಾದಶಹನಿಂದ ವಿಶೇಷ ಬಹುಮಾನವನ್ನು ಪಡೆದನು. ಈತ ಕೆಳದಿಯಲ್ಲಿ ವೀರಭದ್ರೇಶ್ವರ ದೇವಾಲಯವನ್ನು, ಇಕ್ಕೇರಿಯಲ್ಲಿ ಅಘೋರೇಶ್ವರ ದೇವಾಲಯವನ್ನು ಕಟ್ಟಿಸಿದ.

ದೊಡ್ಡ ಸಂಕಣ್ಣನ ತಮ್ಮ ಚಿಕ್ಕಸಂಕಣ್ಣ ನಾಯಕ ಪಟ್ಟವೇರಿದ್ದು ೧೫೫೯ರಲ್ಲಿ. ಈತ ತಾಳಿಕೋಟೆ ಕದನದಲ್ಲಿ ರಾಮರಾಯನ ಪರವಾಗಿ ಹೋರಾಡಿದ. ವಿಜಯನಗರದ ಅವಸಾನವನ್ನು ಕಂಡು ಮಮ್ಮಲ ಮರುಗಿದ. ಈತ ಮತ್ತೊಮ್ಮೆ ಕರ್ನಾಟಕದಲ್ಲಿ ಅಂತಹ ಸಾಮ್ರಾಜ್ಯವನ್ನು ಕಟ್ಟುವ ಕನಸನ್ನು ಕಂಡ. ಆದರೆ ಅಷ್ಟರಲ್ಲಿ ತನ್ನ ಅಣ್ಣನ ಮಗ ರಾಮರಾಯನಿಂದ ಹತನಾದ. ರಾಮರಾಯನ ೧೧ ವರ್ಷಗಳ ಆಳ್ವಿಕೆ ಸುಖಪ್ರದವಾಗಿರಲಿಲ್ಲ.

**ವೆಂಕಟಪ್ಪನಾಯಕ (೧೫೮೨-೧೬೨೯)**

ಕೆಳದಿಯ ಅರಸರಲ್ಲಿ ಈತ ಅತ್ಯಂತ ಸಮರ್ಥ ಅರಸ. ಈತನ ಕಾಲದಲ್ಲಿ ಕೆಳದಿ ರಾಜ್ಯ ಪ್ರಭಲವಾಗಿತ್ತಲ್ಲದೇ ಸ್ವತಂತ್ರ ಅಸ್ಥಿತ್ವ ಪಡೆಯಿತು ಅರವೀಡು ಸಂತತಿಯವರು ದುರ್ಬಲರಾದ್ದರಿಂದ ಈತ ಸ್ವತಂತ್ರ ಅರಸನಾಗಿ ರಾಜ್ಯಭಾರ ನಡೆಸಿದ. ಈತ ಬಿಜಾಪುರ ಸುಲ್ತಾನನ ಸೇನೆಯನ್ನು ಬಗ್ಗುಬಡಿದ. ಗೇರುಸೊಪ್ಪೆಯ ಬೈರಾದೇವಿಯನ್ನು ಸೋಲಿಸಿದ. ತರಿಕೆರೆಯ ಪಾಳೇಗಾರನ ಸದ್ಧಡಗಿಸಿದ. ಬ್ರಿಟಿಷರು ಹಾಗೂ ಪೋರ್ಚುಗೀಸರೊಡನೆ ವ್ಯಾಪಾರ ಸಂಪರ್ಕವನ್ನು ಹೊಂದಿ ರಾಜ್ಯದ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿದ.

ಈತ ವೀರಶೈವ ಮತೀಯನಾಗಿದ್ದರು ಅನ್ಯಮತಗಳನ್ನು ಪ್ರೋತ್ಸಾಹಿಸಿದ ರಾಜ್ಯದಲ್ಲಿ ವಿಶ್ವೇಶ್ವರ, ಶಿಖರೇಶ್ವರ, ಲಕ್ಷ್ಮೀನಾರಾಯಣ, ರಂಗನಾಥ ಮೊದಲಾದ ದೇವಾಲಯಗಳನ್ನು ಕಟ್ಟಿಸಿದ. ಶೃಂಗೇರಿಯಲ್ಲಿ ಅಭಿನವ ನರಸಿಂಹ ಭಾರತಿ ಸ್ವಾಮಿಗಳಿಗೆ

ಮಠವನ್ನು ಕಟ್ಟಿಸಿಕೊಟ್ಟು ಶೃಂಗೇರಿಯ ಪುನರ್‌ನಿರ್ಮಾಣ ಬಿರುದು ಪಡೆದ ವಿದ್ಯಾಭಿಮಾನಿಯಾಗಿದ್ದ ಈತ ಅನೇಕ ಅಗ್ರಹಾರಗಳನ್ನು ಸ್ಥಾಪಿಸಿದ. ಇವನ ಆಸ್ಥಾನದಲ್ಲಿದ್ದ ತಿರುಮಲಭಟನು ಶಿವಗೀತ ಮತ್ತು ಶಿವ ಅಷ್ಟಪದಿಗಳನ್ನು ರಚಿಸಿದ ರಂಗನಾಥ ದೀಕ್ಷಿತನ ತಂತ್ರಸಾರ, ಅಶ್ವಪಚಿಡಿತನ ಮಾನಪ್ರಿಯ, ಭಟ್ಟೋಜಿ ದೀಕ್ಷಿತನ ತತ್ವ ಕೌಸ್ತುಭ ಈ ಕಾಲದ ಕೃತಿಗಳು. ೧೬೨೩ರಲ್ಲಿ ಇಕ್ಕೆರಿಗೆ ಭೇಟಿನೀಡಿದ ಇಟಲಿಯ ಪ್ರವಾಸಿ ಪೀಟ್ರೋಟೆಲ್ಲಾವೆಲ್ಲಿ ವೆಂಕಟಪ್ಪ ನಾಯಕನ ಗುಣಸಾಮರ್ಥ್ಯಗಳನ್ನು ಹೊಗಳಿದ್ದಾನೆ.

ವೆಂಕಟಪ್ಪನ ಮಗ ಭದ್ರಪ್ಪ ತಂದೆಗಿಂತಲೂ ಮೊದಲೇ ಕಾಲವಾದ್ದರಿಂದ ಭದ್ರಪ್ಪನ ೨ನೇ ಮಗ ವೀರಭದ್ರನಾಯಕ ಪಟ್ಟವೇರಿದ. ಬಾಣಾವಾರ ಮತ್ತು ತರಿಕೆರೆಯವರು ಬಿಜಾಪುರ ಸುಲ್ತಾನನೊಡನೆ ಸೇರಿ ಈತನಿಗೆ ಉಪಟಳ ಕೊಡಲಾರಂಭಿಸಿದರು. ಆದ್ದರಿಂದ ವೀರಭದ್ರ ೧೬೩೯ರಲ್ಲಿ ರಾಜಧಾನಿಯನ್ನು ಇಕ್ಕೇರಿಯಿಂದ ಬಿದನೂರಿಗೆ ವರ್ಗಾಹಿಸಿದ ಈತ ಬ್ರಿಟಿಷರಿಗೆ ಭಟ್ಕಳದಲ್ಲಿ ವ್ಯಾಪಾರಕೇಂದ್ರವನ್ನು ತೆರೆಯಲು ಅನುಮತಿ ನೀಡಿದ. ತನ್ನ ರಾಣಿಯನ್ನು ಕಳೆದುಕೊಂಡ ಈತ ತೀರ್ಥಯಾತ್ರೆಯಲ್ಲೇ ಉಳಿದ ಜೀವನ ಕಳೆದ.

**ಶಿವಪ್ಪನಾಯಕ (೧೬೪೫-೧೬೬೦)**

ಕೆಳದಿಯ ಅರಸರಲ್ಲಿ ಅತ್ಯಂತ ಪ್ರಸಿದ್ಧನಾದವನು ಶಿವಪ್ಪನಾಯಕ. ದಕ್ಷನು ಪರಾಕ್ರಮಶಾಲಿಯೂ ಆದ ಈತನ ಆಳ್ವಿಕೆಯಲ್ಲಿ ಕೆಳದಿಯ ಕೀರ್ತಿ ನಾಲ್ಕು ದಿಕ್ಕಿಗೂ ಹರಡಿತು. ಪಟ್ಟವೇರುವ ಮೊದಲೇ ರಾಜ್ಯದ ವ್ಯವಹಾರಗಳಲ್ಲಿ ಅಪಾರ ಅನುಭವವನ್ನು ಸಂಪಾಧಿಸಿಕೊಂಡಿದ್ದನು. ರಾಜ್ಯಕ್ಕೆ ಕಂಟಕಪ್ರಾಯರಾಗಿದ್ದ ಪಾಳೇಗಾರರನ್ನು ಸದೆಬಡಿಸು ರಾಜ್ಯವನ್ನು ವಿಸ್ತರಿಸಿದ. ತುರುವೇಕೆರೆ, ಚನ್ನರಾಯಪಟ್ಟಣ, ಹೊಳೆನರಸೀಪುರ, ಹಾಸನ, ಕಡೂರು, ಸಕ್ಕರೆಪಟ್ಟಣ, ಬೆಳಗುತ್ತಿ, ಬನವಾಸಿ, ಸೊರಬ, ಉಡುಗಡೆ, ಮಲಬಾರು ಪ್ರದೇಶಗಳನ್ನು ವಶಪಡಿಸಿಕೊಂಡನು. ಪಶ್ಚಿಮ ತೀರದಲ್ಲಿದ್ದ ಪೋರ್ಚುಗೀಸರು, ಡಚ್ಚರು ಮತ್ತು ಇಂಗ್ಲೀಷರನ್ನು ಸೋಲಿಸಿ ಮಂಗಳೂರು, ಕುಂದಾಪುರ, ಗಂಗೊಳ್ಳಿ, ಹೊನ್ನಾವರಗಳನ್ನು ಗೆದ್ದುಕೊಂಡ. ಗೊಲ್ಕಂಡದ ಸುಲ್ತಾನರಿಂದ ಪರಾಜಿತನಾದ ವಿಜಯನಗರದ ಅರವೀಡು ವಂಶದ ಶ್ರೀರಂಗರಾಯ, ಶಿವಪ್ಪನಾಯಕ ಆಶ್ರಯ ಬಯಸಿ ಬಂದದ್ದು ಈತನ ಖ್ಯಾತಿಗೆ ಸಾಕ್ಷೀ, ಶಿಪ್ಪನಾಯಕ ಶ್ರೀರಂಗರಾಯರಿಗೆ ಸಕ್ಕರೆಪಟ್ಟಣದ

ಅಧಿಪತ್ಯವನ್ನು ಇತ್ತು ತನ್ನ ಹಿರಿಮೆಯನ್ನು ವಿಜಯನಗರದ ಮೇಲಿನ ಅಭಿಮಾನವನ್ನು ಪ್ರದರ್ಶಿಸಿದ.

ಮೈಸೂರಿನ ಒಡೆಯರು ತನ್ನ ವಿರೋಧಿಗಳಿಗೆ ಸಹಾಯಮಾಡಿದ್ದರಿಂದ ಶಿವಪ್ಪನಾಯಕ ಸಿಟ್ಟುಗೊಂಡು ಅವನ ಸೈನ್ಯ ಶ್ರೀರಂಗಪಟ್ಟಣವನ್ನು ಮುತ್ತಿತು, ಆದರೆ ಅನಾರೋಗ್ಯದಿಂದಾಗಿ ನಾಯಕ ರಾಜಧಾನಿಗೆ ಹಿಂತಿರುಗಿ ಕೆಲವೇ ದಿನಗಳಲ್ಲಿ ಕಾಲವಾದ (೧೬೬೦).

ಶೂರನು ಚಾಣಾಕ್ಷ ರಾಜಕಾರಣಿಯೂ ಆಗಿದ್ದ ಶಿವಪ್ಪನಾಯಕ ದಕ್ಷ ಅಡಳಿತಗಾರ ಇವನ ಭೂಸುಧಾರಣೆ ಕರ್ನಾಟಕದ ಇತಿಹಾಸದಲ್ಲಿ ಪ್ರಸಿದ್ದವಾಗಿದೆ. ಈತ ಸರಕಾರಿ ವೆಚ್ಚದಿಂದ ಭೂಮಿಯನ್ನು ಪಡೆದು, ಕೃಷಿಮಡಿಸಿ ರಾಜ್ಯದ ಆದಾಯವನ್ನು ಹೆಚ್ಚಿಸಿದೆ. ಭೂಮಿಯನ್ನು ಗುಣಮಟ್ಟಕ್ಕನುಸಾರವಾಗಿ ಐದು ಭಾಗಗಳಾಗಿ ವಿಂಗಡಿಸಿ ಕಂದಾಯವನ್ನು ನಿಗದಿಪಡಿಸಲಾಗುತ್ತಿತ್ತು. ನಿಗದಿಪಡಿಸುವಾಗ ಸಾಗುವಳಿಯ ವೆಚ್ಚ ಮತ್ತು ಉತ್ಪತ್ತಿಯನ್ನು ಪರಿಗಣಿಸಲಾಗುತ್ತಿತ್ತು. ಈ ಪದ್ಧತಿಯನ್ನು ರಾಜ ತೋದರಮಲ್ಲನ ಭೂಸುಧಾರಣೆಗೆ ಹೋಲಿಸಲಾಗಿದೆ. ಶಿವಪ್ಪ ನಾಯಕ ಅಗ್ರಹಾರಗಳಿಗೂ ಧಾರ್ಮಿಕ ಸಂಸ್ಥೆಗಳಿಗೂ ಧನ ಸಹಾಯ ಮಾಡಿದ. ಶೃಂಗೇರಿ ಮಠಕ್ಕೆ ವಿಶೇಷ ದತ್ತಿ ದಾನಗಳನ್ನು ನೀಡಿದ. ಈತನ ಕಾಲದಲ್ಲಿ ಕೆಳದಿ ರಾಜ್ಯದ ಸರ್ವತೋಮುಖ ಅಭಿವೃದ್ಧಿಯಾಯಿತು.

ಶಿವಪ್ಪನಾಯಕ ನಂತರ ಕ್ರಮವಾಗಿ ಎರಡನೇ ವೆಂಕಟಪ್ಪ, ಭದ್ರಪ್ಪ ಹಾಗೂ ಒಂದನೇ ಸೋಮಶೇಖರ ರಾಜ್ಯವಾಳಿದರು. ಸೋಮಶೇಖರ ದುಷ್ಟರ ಸಹವಾಸದಿಂದ ಅಪ್ರಿಯನಾಗಿ ಕೊನೆಗೆ ಕೊಲೆಯಾದ.

**ಚೆನ್ನಮ್ಮಾಜಿ (೧೬೭೧–೧೬೯೧)**

ಸೋಮಶೇಖರನ ಮರಣದ ನಂತರ ಅವನ ಪತ್ನಿ ಚೆನ್ನಮ್ಮಾಜಿ ಪಟ್ಟವೇರಿದಳು. ಪತಿಯ ಸಾವಿನ ಅಘಾತದಿಂದ ಚೇತರಿಸಿಕೊಂಡು ರಾಜ್ಯಸೂತ್ರಗಳನ್ನು ವಹಿಸಿಕೊಂಡಳು. ದುಷ್ಟಶಕ್ತಿಗಳನ್ನು ನಿಗ್ರಹಿಸಿ ಬಂಡುಕೋರರನ್ನು ಸದೆಬಡಿದು ರಾಜ್ಯವನ್ನು ಸುಭದ್ರಗೊಳಿಸಿದಳು. ಬಿಜಾಪುರ ಸುಲ್ತಾನನೊಡನೆ ಯುಕ್ತಿಯಿಂದ ವ್ಯವಹರಿಸಿ ಸುತ್ತಮುತ್ತಲಿನ ಪಾಳೇಯಗಾರರನ್ನು ಸೋಲಿಸಿದಳು. ರಾಜ್ಯದ ಗಡಿಗಳನ್ನು ಬಲಪಡಿಸಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಿದಳು. ಈಕೆ ಔರಂಗಜೇಬನ ಧಾಳಿಯಿಂದ ತತ್ತರಿಸಿ ಓಡಿ ಬಂದ ಮರಾಠ ನಾಯಕ ರಾಜಾರಾಮನಿಗೆ ಆಶ್ರಯ ಕೊಟ್ಟ ವೀರಮಹಿಳೆ. ಈ

ಮೂಲಕ ಮೊಗಲ ಚಕ್ರವರ್ತಿಯ ವಿರೋಧವನ್ನು ಕಟ್ಟಿಕೊಳ್ಳಲು ಹೆದರದ ಈಕೆಯ ಕೀರ್ತಿ ಉತ್ತರ ಭಾರತದಲ್ಲಿ ಹರಡಿತು. ಕನ್ನಡ ನಾಡಿನ ಶೌರ್ಯ, ತ್ಯಾಗ, ಔದಾರ್ಯಗಳ ಸಂಕೇತವಾಗಿದ್ದ ಚೆನ್ನಮ್ಮಾಜಿ ಮೈಸೂರಿನ ಸೈನ್ಯದೊಡನೆಯೂ ಸೆಣಸಿದ್ದಳು. ಚೆನ್ನಮ್ಮಾಜಿ ನಂತರ ಆಕೆಯ ದತ್ತುಪುತ್ರ ಬಸವಪ್ಪ ನಾಯಕ ಕೇಳದಿಯ ರಾಜನಾದ. ಆತ ಸಾಹಿತ್ಯಾಭಿಮಾನಿಯೂ ಸ್ವತಃ ವಿದ್ವಾಂಸನೂ ಆಗಿದ್ದ. ಶಿವತತ್ವ ರತ್ನಾಕರ ಈತನ ಪ್ರಸಿದ್ಧ ಕೃತಿ. ಈತನ ನಂತರ ಈತನ ಜ್ಯೇಷ್ಠಪುತ್ರ ಏರಡನೇ ಸೋಮಶೇಕರ ಅಧಿಕಾರಕ್ಕೆ ಬಂದ. ಈತ ಮೈಸೂರಿನ ಅರಸರು, ಮರಾಠರು ಹಾಗೂ ಇಂಗ್ಲಿಷರೊಡನೆ ಹೋರಾಡಬೇಕಾಯಿತು.

ಸೋಮಶೇಖರ ನಂತರ ಆಳಿದ ಎರಡನೇ ಬಸವಪ್ಪ ನಾಯಕ ಚಿತ್ರದುರ್ಗದ ಮದಕರಿನಾಯಕನನ್ನು ಮಾಯೆಕೊಂಡದ ಯದ್ಧದಲ್ಲಿ ಕೊಂದ. ಈತನ ದತ್ತುಪುತ್ರ ಚೆನ್ನಬಸಪ್ಪ ೧೭೫೪ ರಲ್ಲಿ ಪಟ್ಟವೇರಿದ. ಆದರೆ ರಾಜ್ಯವನ್ನು ಆಶತನ ಪತ್ನಿ ವೀರಮ್ಮಾಜಿ ನೋಡಿಕೊಳ್ಳುತ್ತಿದ್ದಳು. ಆಕೆ ಪತಿಯ ಕಾಲಾನಂತರ ಸೋದರ ಮಾವ ಬಂಕಾಪುರದ ಚಿನ್ನವೀರಪ್ಪನ ಮಗ ಸೋಮಶೇಖರನನ್ನು ಪಟ್ಟಕೆ ತಂದಳು ಮೂರನೇ ಸೋಮಶೇಖರ ಕೆಳದಿಯ ಕೊನೆಯ ರಾಜನಾಗಿದ್ದ. ೧೭೬೩ ರಲ್ಲಿ ಮೈಸೂರಿನ ಹೈದರ್ ಆಲಿ ಬಿದನೊರನ್ನು ಮುತ್ತಿ ಸೋಮಶೇಖರನನ್ನು ಸೆರೆಹಿಡಿದ. ಇದರೊಂದಿಗೆ ಕೆಳ ರಾಜ್ಯ ಮೈಸೊರು ರಾಜ್ಯದೊಡನೆ ವಿಲೀನವಾಯಿತು.

**ಕೆಳದಿ ನಾಯಕರು ರಾಜ್ಯಾಧಿಕಾರ ಬಂದ ಮೂಲ (ಐತಿಹ್ಯ)**

"ಚವುಡಗೊಂಡ –ಭದ್ರಗೊಂಡ, ಕೈಫಿಯತ್ತುಗಳಲ್ಲಿ ವಿವರಣೆ: ನಗರದ ದೊರೆತನ ಆಳಿದ(ವ)ರು, ಕೆಳದಿಹಳ್ಳೀ ಬೈಲಗ್ರಾಮದಲ್ಲಿದ್ದ ಬಸಪ್ಪನ ಮಗ ಚೌಡ, ಭದ್ರಪ್ಪನೆಂಬ ಇಬ್ಬರು ಮಕ್ಕಳು. ಇರುವಲ್ಲಿ ಈಶ್ವರನನುಜ್ಞೆಯಾಗಿ ನಿಕ್ಷೇಪ. ನಾಗರಮುರಿಯೆಂಬ ಕತ್ತಿ ಸಹಾ ಸಿಕ್ಕಿದುದರಿಂದ, ಈತನು ಹೀಗೆ ಇರಲಾಗಿ, ರಾಯರ ಸಂಸ್ಥಾನಕ್ಕೆ ಅರುಕೆಯಾಗಿ. ಆಗ್ಗೆ ಇವರನ್ನು ಕರೆಯಿಸಿ ಅಲ್ಲಿ ಇವರಿಗೆ ಬಹುಮಾನವಂ ಮಾಡಿ. ಈ ರಾಜ್ಯಕ್ಕೆ ದೊರೆರನ್ನಾಗಿ(ಗಿ)ಸಿಕೊಂಡು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ ೧೪೨೨ನೇ ವರ್ತಮಾನಕ್ಕೆ ಸಲ್ಲುವ ಸಿದ್ದಾರ್ಥಿ ಸಂವತ್ಸರ ಮಾಘ ಶುದ್ಧ ೩ರಲ್ಲಿ ಚೌಡಪ್ಪನಿಗೆ ಪಟ್ಟಾಭಿಷೇಕವಾಗಿ, ಇಕ್ಕೇರಿಮೊದಲಾದ ಎಂಟು ಮಾಗಣಿಯನ್ನು ಆಳಿಕೊಂಡು, ಇಕ್ಕೇರಿಯಲ್ಲಿ ಕೋಟಿ ಅರಮನೆ ಸಹ ಕಟ್ಟಿಕೊಮಡು,

ಈ ಮಾಘ ಶುಇಧ ೩ ಆರಭ್ಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ॥ ೨ರ ವರೆಗೆ ಚರ್ಷ ೧೩, ತಿಂಗಳು ೭ ಪರಿಯಂತರ ರಾಜ್ಯವನನ್ನಾಳಿದನು.

ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ಆರಭ್ಯ ವಿಶ್ವಾವಸು ಸಂವತ್ಸರ ವೈಶಾಖ ಶು॥ ೪ರ ವರೆಗೆ ವರ್ಷ ೩೧. ತಿಂಗಳು ೯ ಪರಿಯಂತರಕ್ಕು ದೊರೆತನ ಮಾಡಿ, ಸ್ವಾಮಿ. ಕಾರ್‍ಯದ ಮೇಲೆ ಜಗುಪಾಳ್ಯ ಎಂಬ ಸ್ಥಳದಲ್ಲಿ ಈಶ್ವರಾಧೀನವಾದನು.

೩ನೆಯ ದೊರೆ ಈ ಸದಾಶಿವರಾಯನಾಯಕ ಮಗ ದೊಡ್ಡ ಸಂಕಣ್ಣನಾಯಕನಿಗೆ ಪಟ್ಟವಾಗಿದ್ದು ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ ಆರಭ್ಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೪ರವರೆಗೆ ವರುಷ ೧೩, ತಿಂಗಳೂ ೫ ಪರಿಯಂತರ ತಮ್ಮ ತಮದೆ ಆಳಿದ ರಾಜ್ಯ ಯಾವತನ್ನೂ ಪರಿಪಾಲನೆ ಮಾಡಿಕೊಂಡು ಸುಖದಿಂದಿದ್ದನು.

೪ನೆಯ ದೊರೆತನ ಸ[+ಂಕ]ಣ್ಣನಾಯಕರ ತಮ್ಮ ಚಿಕ್ಕಸಂಕಣ್ಣನಾಯಕರೆಗೆ ಪಟ್ಟವಾದುದು ಕಾಳಯಿಕ್ರಿ ಸಂವತ್ಸರದ ಆಶ್ವಯುಜ ಶು॥ ೫ ಆರಭ್ಯ ಪ್ರಮಾದಿ ಸಂಚತ್ಸರದ ಕರ್ತಿಕ ಶ॥ ೪ರ ವರೆಗೆ ವರುಷ ೧೨. ತಿಂಗಳು ೧ ಪರಿಯಂತರ ತಮ್ಮ ಅಣ್ಣನಾಳಿದ ರಾಜ್ಯದ ದೊರತನವನ್ನು ಸುಖದಿಂದ ಮಾಡಿದನು.

ಚಿಕ್ಕ ಸಂಕಣ್ಣನಾಯಕರ ಅಣ್ಣ ದೊಡ್ಡ ಸಂಕಣ್ಣನಾಯಕರ ಮಗ ರಾಜರಾಜನಾಯಕ ಎಂಬುವನಿಗೆ ಪಟ್ಟವಾಗಿದ್ದು ಪ್ರಮಾದಿ ಸಂವತ್ಸರದ ವರೆಗೆ ವರ್ಷ ೧೨, ತಿಂಗಳು ೧ ಪರಿಯಂತರ ತಮ್ಮ ಚಿಕ್ಕಯ್ಯನಾಳಿದಂತಹ ಸೀಮೆಯ ದೊರೆತನವನ್ನು (ಪ್ರಜಾ ಪರಿಪಾಲನೆ) ಮಾಡಿಕೊಂಡು ಇದ್ದು ಗೇರುಸೊಪ್ಪೆ ಎಂಬ ಬಳಿಯಲ್ಲಿ ದೇವಾಧಿನರಾದರು.

ಈ ರಮರಾಜನಾಯಕನ ತಮ್ಮನದ ಹಿರೇವೆಂಕಟಪ್ಪನಾಯಕರಿಗೆ ಪಟ್ಟವಾದುದು. ಚಿತ್ರಭಾನು ಸಂವತ್ಸರದ ಮಾರ್ಗಶಿರ ಶು.॥ ೫ ಆರಭ್ಯ ಶುಕ್ಲ ಸಂವತ್ಸರದ ಕಾರ್ತಿಕ ಬಹುಳ ೩ರ ವರೆಗೆ ವರ್ಷ ೪೬ ತಿಮಗಳು ೧೧ ದಿನ ೨೫ ಪರಿಯಂತ್ರಕ್ಕೂ ರಾಜ್ಯವನವನಾಳಿಕೊಂಡು ದೈವಾಧೀನವಾಗಿ.

ಈ ವೆಂಕಟಪ್ಪನಾಯಕನಮುಮ್ಮಗ (ಭದ್ರಪ್ಪನಾಯಕರ ಮಗ) ವೀರಭದ್ರಪ್ಪನಾಯಕನಿಗೆ ಯಡೇರಿಯ ಅರಮನೆಯಲ್ಲಿಪಟ್ಟವಾದುದ್ದು ಶುಕ್ಲ ಸಂವತ್ಸರದ ಮಾರ್ಗಶಿರ ಶದ್ಧ ೧ ಆರಭ್ಯ ಪಾರ್ಥಿವ ಸಂವತ್ಸರ ಮಾರ್ಗಶಿರ ಶು॥ ೧೧

ಪರಿಯಂತರ ವರ್ಷ ೧೬ ತಿಂಗಳು ೧೧ರ ವರೆಗೆ ರಾಜ್ಯ ಪರಿಪಾಲನೆ ಮಾಡಿ ತನ್ನೂರಿನಲ್ಲಿ ನಿಂತನು."[೨]

"ಅನಂತರದಲಿ ಸದಾಶಿವರಾಯ ನಾಯಕರು ಯಂಬ ಹೆಸರು ಪಡದು ತಮ್ಮ ಸ್ಥಳಕ್ಕೆ ಬಂದು, ಯಿಲ್ಲಿ ಸುತ್ತು ಮುತ್ತ ಗಉಡ ಪಾಳ್ಯಾಗಾರರು ಯಿದ್ದದವರನ ಮುರಿಯುವ ಬಗ್ಗೆ ತಾವು ಕುದುರಿ ಮಂದಿ ಕಟ್ಟಿಕೊಂಡು. ಪ್ರಬಲವಾಗಿ ಚತುರಂಗ ಬಲ ಸಮೇತನಾಗಿ ಮಲ್ಲನಗೌಡ, ಕಾನಲೆ ಪುಟ್ಟೆ ಗೌಡ, ನಲ್ಲೂರ ಪುಟ್ಟೆಗೌಡ, ಸುರಗುಪ್ಪಿ ಪುಟ್ಟೆಗೌಡ, ಮಾಲವಿ ಪುಟ್ಟೆಗೌಡ, ಅಂಡಿಗೆ ಪಾಳ್ಯಾಗಾರ ವೀರಣ್ಣ ವಡೆರು ॥ ೫ ॥ ಭೃದ್ರಿ ಮುಪ್ಪಿನ ಗಉಡರು, ಮಂಚಾಲೆ ಪುಟೆಗ ಉಡನ ॥ ೭ ॥ ಯಿಕ್ಕೇರಿ ಮಲ್ಲನ ಗಉಡ, ಶಿರ್ರವಂತಿ ಪಾಳ್ಯಾಗಾರ ನಾರು, ಯಲಗಳಲ್ಲಿ ಪುಟ್ಟೆಗಉಡ, ವುಲ್ಲೂರು ಪುಟ್ಟೆಗಉಡ, ಯೀ ಮೊದಲಾದ ಗಉಡ ಪಾಳ್ಯಗಾರನಹೊಡದು ಶೀಮೆ ಯಾವತ್ತು ಸ್ವಾಧೀನ ಮಾಡಿಕೊಂಡು ಕೆಳದಿ ವಳಗೆ ಯಿದ್ದುಕೊಂಡು ಶಾಲಿವಾಹನ ಶಖ ೧೪೭೭ ವಿಶೌವಸು ಸಂ||ಲ್ಲು ಸೆಕ ೧೪೮೩ ದುರ್ಮುಖಿ ಸಂವಸ್ಸರ ವರೆಗೆ ವರುಷ ೧೬ ಸುಖದಲ್ಲಿಯಿರುವ ಕಾಲದಲ್ಲಿ ವೊಂದಾನೊಂದು ದಿವಸದಲಲಿ ಸವಾರಿಗೆ ಹೋದ ಕಾರಣ ಯಿವರ ಸಂಗಡಾ ಗುರಿಕಾರರು ಮುಂತಾದವರು ಯಿದ್ದಲ್ಲಿ. ಯಿಕ್ಕೇರಿ ಯಿರುವ ಸ್ಥಳದಲ್ಲಿ ಅಡವಿಯಾಗಿ ಮಹಾರಮಣೀಯವಾಗಿ ಆದೆ. ಯಿಲ್ಲಿ ಕೋಟೆಯನ್ನು ಕಟ್ಟಿಕೋಯಂಬುದಾಗಿ ಹೆಳುವಲ್ಲಿ ಸಂಗಡ ಯಿದ್ದವರು. ಹೇಳಿದ್ದು: ಯಿದ್ದು ಗಂಡು ಭೂಮಿ ಯಿಲ್ಲಿ ಮೊಲವು ನಾಯಿಯ ಮೇಲೆ ಬಿತ್ತ ಯಂಬುದಾಗಿ ಕೇಳಿದಲ್ಲಿ. ಮೊಲದ ಮೇಲೆ ನಾಯಿ ಬಿದ್ದ ಕಾರಣ ನಾಯಿನ ಮೊಲ ಬಂದು ಕಚ್ಚಿತು ಯೀ ವರ್ತಮಾನವನ್ನು ಕೇಳಿ. ಯಿದು ಗಂಡು ಭೂಮಿಯೇ ಸರಿಯಂದು ತಿಳದು. ಯಿಲ್ಲಿ ಕೋಟೆ ಕಟ್ಟಿಸಬೇಕು ಯಂಬದಾಗಿ ಯೋಚನೆ ಮಾಡಿ, ಅಲ್ಲಿ ಜೋಯಿಸರನಾ ಕರಶಿ, ಮುಹೂರ್ತದಲ್ಲಿ ಹಳೆ ಯಿಕ್ಕೇರಿ ಭೂಮಿವಳಗೆ ಯಕ್ಕೇರಿ ಕೋಟೆಯನ್ನು ಕಟ್ಟಿಶಿ, ಯಿಲ್ಲೆ ಮೊಲದ ಕೋಟೆಯಂಬುದಾಗಿ ವಂದು ಕೋಟೆಯನ್ನು ಮಾಡ್ಸಿ ಆ ಬಳಿಯಲ್ಲಿ ಪಟ್ಟದಕಲ್ಲು ಗದ್ದಿಗೆ ಹಾಕಿಶಿ ಯಿದೆ. ದಾರ್ರೆಮಂಟಪ ಮಾಡಿದರು. ಯಿದು ಗಂಡು ಭುಮಿಯಂದು ಯೀ ಪ್ರಕಾರ ಮಾಡಿದರು."[೩]

**ಚಿಕ್ಕ ಸಂಕಣ್ಣ ನಾಯಕ ........... ಕೈಫಿಯತ್ತುಗಳಲ್ಲಿ**

"ಯೀ ಸದಾಶಿವರಾಯನಾಯಕರ ಮಗ ಹಿರ್‍ರೆ ಸಂಕಣ್ಣನಾಯಕರ್‍ರು, ಚಿಕ್ಕಸಂಕಣ್ಣನಾಯಕರು ಯಂಬುದಾಗಿ ಯಿಬ್ಬರು ಮಕ್ಕಳು ಯಿದ್ದರು. ವಳಗೆ ಹಿರೆ ಸಂಕಣ್ಣನಾಯಕರು ರಾಜ್ಯಭಾರ ಮಡುವ ಕಾಲದಲ್ಲಿ ಯಡವ ಮುರಾರಿಯಂಬ ಹೊಲೇರು (ಯೀ ಅರಶಿನ ಆಚಿಗೆ ಬಂದಂತಾ ಐಶ್ವರ್ಯಕೆ ಪ್ರಾಣಕೊಟ್ಟವರು)ಮ ಮನೆ ವಳಗೆ ನಾಗರಮರಿಯಂಬ ಕತ್ತಿಯಿತ್ತು. ಯಿವರ ಮಕ್ಕಳು ಯೀಕತ್ತಿ ಯಿಟ್ಟುಕೊಂಡು. ಮಾಂಸ ಹೊ [>ಒ]ಣಗಿ ಹಾಕಿದ್ದಾರೆ [>ದ್ದ] ರೆ ಅದಕ್ಕೆ ಯೀ ಕತ್ತಿಯನ್ನು ಕತ್ತಿಯನ್ನು ಕಾವಲುಯಿಟ್ಟು ಯಿದ್ದರೆ,ಮಾಂಸ ತೆಗೆದುಕೊಂಡು ಹೋಗುವ ಬಗ್ಯೆ ಕಾಗಿ ಬಂದರೆ, ಯಿ ಕತ್ತಿಯು ತನ್ನಹ .....ಕೊತಾನೆ ಯದ್ದು ಕೊತು ಕಾಗಿ ಹೊಡಿಯುವದು. ಯಿದನ್ನು ಒಂದು ದಿವಾ ನೋಡಿ ಯೀ ಸಂಕಣ್ಣನಾಯಕರ್‍ರು, ಯೀ ಕತ್ತಿಯನ್ನು ಯಡುವ ಮುರಾರ್‍ರಿ ಮಗನಿಗೆ ಯಿನಾಮ ಕೊಟ್ಟು ತೆಗೆದುಕೊಂಡನು. ಅನಂತರ. ಯಡವ ಮೊರಾರಿಯ ಕತ್ತಿಯನ್ನು ಕೊಡ ತೆಗೆದುಕೊಂಡು ಭೂ ಪ್ರದಕ್ಷಿಣೆ ಮಾಡುವುದಕ್ಕೆ ಹೊರಟು ಹೋಗಿ ಹಿರ್‍ರಲಿಕ್ಕೆ, ಕಶಿರಾಮೇಶ್ವರ ಮಧ್ಯ ಭೂಮಿ ಯಾವತ್ತು ಸಂಚಾರ ಮಾಡುವುದಕ್ಕೆ ಹೊರಟು ಹೋಗಿ ಅಲ್ಲಿ ಅಘೋರವೀರಭದ್ರದೇವರಿಗೆ ನೋಡಿ ೩೨ ಆಯುಧಾ ಧರಿಸಿದಂತಾ ವೀರಭದ್ರನಾ ಪಟಾ ಬರಶೀಕೊಂಡು ಅಲ್ಲಿಂದಾ ಪೂನಹಾ ಯಿಕ್ಕೇರಿಗೆ ಬಂದು. ಯಿಲ್ಲಿ ಅಘೋರ ವೀರಭದ್ರದೇವರ ಮೂರ್ತಿಯನ್ನು ಮುವತ್ತು ಯರಡು ಹಸ್ತಕ್ಕೆ ಮುವತ್ತು ಯರಡು ಆಯುಧ ವಿಶಿಷ್ಷವಾಗಿ ಶಿಲಪಿಶ್ಯಾಗ(>ಶಿಲ್ಪಶಾಸ್ತ್ರ] ಮೇರಿಗೆ ಮೂರ್ತಿ

ಶಾಡಿಶಿ. ದೇವಸ್ಥಾನವನ್ನು ಕಟ್ಟಶಿ. ಯಿಕ್ಕೇರಿ ಪುರ್ವಮಧ್ಯದಲ್ಲಿ ಪ್ರತಷ್ಷೆಯನ್ನು ಮಾಡಿ. ನಿತ್ಯೋತ್ಸವ ಮೊದಲಾದವುಗಳ ಜರಗುವ ಬಗ್ಯೆ ಅನೇಕ ದ್ರವ್ಯಗಳು ವೆಚ್ಚಮಾಡಿ. ಪ್ರತಿ ಸಂ॥ ಲ್ಲು ಶ್ರಾವಣ ಶು೧೦ ದಿವಸ ವರುಷೋತ್ಸವ ಆಗುವ ಹಾಗೆ ನೇಮಕಾಮಾಡಿ. ಆ ದೇವಸ್ಥಾನಕ್ಕೆ ತೆರಾ ಆಗುವದಕ್ಕೆ ೧೦೦೦೧.......ಕೊಡುತ ಯಿದ್ದರು. ಯಿದ್ದರು. ಯೀ ನೇರಿಗೆ ಕೆಲವು ದಿವಸ ರಾಜ್ಯಭಾರವನ್ನು ಮಾಡಿ ಯಿದ್ದರು. ಶಕ ೧೪೮೩ನೇ ದುರ್ಮುಖಿ ಸಂವತ್ಸರ ಲಾಗಾಯಿತು ಶಕ ೧೪೯೪ನೇ ಆಂಗೀರಸ ಸಂ. ವರೆಗೆ ವರುಷ ೧೧ ಆಳಿದರು.

ಅನಂತರ ಹಿರ್‍ರೆ ಸಂಕಣ್ಣನಾಯಕರ್‍ರು ಮಗ ರಾಮರಾಜುನಾಯಕರ್‍ರ ಆಳಿದ್ದು ವರುಷ ೧೦, ಶಕ ೧೪೮೬ನೇ ಅಂಗೀರಸ ಸಂ. ಲಗಾಯಿತು ಶಕ ೧೫೦೪ನೆ ಚಿತ್ರಭಾನು ಸಂ. ವರಿಗೆ.

ಅನಂತರ ಯೀ ರಾಮಜಾಕನಾಯಕರ್‍ರ ಮಗ ವೀರವಡೇರ್‍ರು ಆಳಿದ್ದು ಶಕ ೧೫೦೪ನೇ ಚಿತ್ರಭಾನು ಸಂ. ವೈಶಾಖ ಲಾಗಾಯಿತು ಕಾರ್ತಿಕ ಮಾಸದ ವರೆಗೆ ಆಳಿದ್ದು ತಿಂಗಳು೭.

ಅನಂತರದಲ್ಲಿ ಯೀ ರಾಮರಾಜನಾಯಕರ ತಮ್ಮ ಹಿರೆವೆಂಕಟಪ್ಪ ವೀರವಡೇರ ಚಿಕ್ಕಪ್ಪ ರಾಜ್ಯಭಾರ ಮಾಡುವ ಕಾಲದಲ್ಲಿ ವರುಷ ೪೭ ಯಿಕೇರಿಚಳಗೆ ಅಘೋರ ವೀರಭದ್ರದೇವರುವಿಗ್ರಹಾ ಮಾಳಿಗೆ ಮೇಲೆ ಹಲಗೆ ತೆಗೆದುಕೊಂಡು ಹೋಗಿ ಗಂಗೆಕೆರೆಯಲ್ಲು ಬಿದ್ದದೆ ಯಂಬುಧಾಗಿ ಹೇಳುತ್ತಾರೆ. ಅನಂತರದಲ್ಲಿ ಯೀ ಗುಡಿಯನ್ನು ಹಾಳುಬಿದ್ದು ಯಿರಬಾರದು ಯಂದು ಯಿಕ್ಕೇರಿ ಪಡಟ್ಟಣದ ನೀಲಮ್ಮಂಗು ತರ್ರವೆಂದು ವಿದ್ವಾಂಸರುನವಾನಸಿದರಿಂದಾ ಅನೇಕ ಶಾಂತಿಗಳು ಕೊಡಿಸಿ ಮತ್ತು ವೆಂಕಟಪ್ಪನಾಯಕರು ಅಘೋರೇಶ್ವರಯಂಬುದಾಗಿ ಲಿಂಗಪ್ರತಿಷ್ಠೆ ಮಾಡಿದರು. ಯೀ ಲಿಂಗದ ಯೆದುರಿಗೆ ಬಿಳೆಕಲ್ಲಯಿಂದಾ ಬಸವೇಶ್ವರನ ಮಾಡಿಯಿಟ್ಟು ಯಿದ್ದಾನೆ. ಯೀಧ್ವರನ ಯಡ್ಡದ ಭಾಗಕ್ಕೆ ಪಾರ್ವತಿ ಅಮ್ಮನವರ ಡಿಯನ್ನು ಕಟ್ಟಿಸಿ ಪ್ರತಿಷ್ಠೆಮಾಡಿ ಯಿದ್ದಾರೆ."[೪]

**ಸಂಕಣ್ಣನಾಯಕ**

"ಆಮೇಲೆ ಬಿದನೂರು ಶೀಮೆಯಲ್ಲಿ ವಬ್ಬ ಪಾಳೆಗಾರನು ಹೊನ್ನೆಕಂಬಳೀಯಂಬವನು ಯಿಲ್ಲಗೆ ಬಂದು. ಶೀಮೆ ತನ್ನ ಸ್ವಾಧೀನವಮಾಡಿಕೊಂಡ್ಡು, ಸ್ವಲ್ಪ ದಿವಸ ಆಳಿದನು. ಯಿವನಿಗೆ ಸಂತಾನವಿಲ್ಲದ್ದರಿಂದಾ ತನ್ನ ಪುರೋಹಿತನಾದ ಶಮಕರನಾರಾಯಣಭಟ್ಟಗೆ ವಸ್ತಾರೆ ಬೆಲ್ಲೂರು ಸಹಾ ಕೊಡಿಯಿರುವ ನಗರದ ಶೀಮೆಯನ್ನು ಕೊಟ್ಟನು. ಆ ಶಂಕರನಾರಾಯಣಭಟ್ಟನು ೪೦ ವರುಷ ಪರಿಯಂತ್ರಾ ಆಳಿದನು. ಯೀತಗೆ ಯೀಬರು ಮಕಳು. ಅವರಿಗೆ ಯೀ ಶೀಮೆ ಪೂರ್ವೋತ್ತರಾಯೇನು ತಿಳಿಯದ್ದಿರಿಂದ್ದಾ ಯೀ ಮಕ್ಕಳು ಅದೃಷ್ಟವನ್ನು ಶೋಧಿಸಿ ನೆಡಬೇಕೆಂದ್ದು ಪರಮಾನ್ನವನ್ನೂ ಮಾಡಿಶಿ. ಅದರಲ್ಲಿ ತನ್ನ ಮುದ್ರೆವುಂಗರವನ್ನು ಹಾಕಿ. ತನ್ನ ಬಂಧುಗಳ ಮಕಳಿಗೆ ಸಹಾ ಹಂಚಿಕೊಡಬೇಕುಯಂದು ತನ್ನ ಮಕ್ಕಳು ರಾಜ್ಯಕೆ ಅರಹತರು. ಅದರಿದರಿಂದ್ದಾಯೀ ಮೆರೆ ಮಾಡಿದಲ್ಲಿ ಯೀವುಂಗರ ಶಂಕರನಾರಾಯಣಭಟ್ಟಗೆ ಬಂತ್ತೊ. ಅವಾಗ ಯೀ ರಾಜ್ಯವಂನ್ನೊ ಅಳುವದಕೆ ತನ್ನ

ಮಕ್ಕಳಿಗೆ ಅದೃಷ್ಟವಿಲ್ಲಾ ಯಂದ್ದು ತಿಳಿದುಕೊಂಡದಡು ಯೀ ಶೀಮೆಯನ್ನುಯಿಕ್ಕೆರಿಯವರಿಗೆ ಕೊಟ್ಟರೆ ತನ್ನ ಮಕ್ಕಳಿಗೆ ಯಿವರು ಜೀವಂತ್ತರಾಗಿ ಯಿರುವ ಪರಿಯಂತ್ರಾ ಸಂರಕ್ಷಣೆ ಮಾಡುತ್ತಾರೆ ಯಂದ್ದು ತಿಳಿಕೊಂಡ್ಡು, ಸಂಕಂಣನಾಯಕನು ಯೀತನ ಮಕಳಿಗೆ ನಗರದ ಶೀಮಮೆ ಪವುರೊಹಿತನವಂನ್ನು ಮಕ್ಕಳಿಗೆ ವಹಿಶಿಕೊಟ್ಟು ಮೃತನಾದನು. ಸಂಕಂಣನಾಯಕನು ಬಿದನೂರು ಸಂಸ್ಥಾನ ಸಹಿತವಾಗಿ ಕೆಲವು ದಿವಸ ಪ್ರಭುತ್ವ ಮಾಡುವ ಕಾಲದಲ್ಲಿ ವೈಗುರು[>ಐಗೂರು] ವೆಂಕಟಾದ್ರಿಯ ನಾಯಕನು ಯೀ ಶೀಮೆಯನ್ನು ತನ್ನ ಸ್ವಾಧೀನ ಮಾಡಿಕೊಂಡು, ಬೇಲೂರು ಶೀಮೆಯ ಹೊಳ್ಳ ಪ್ರಭುತ್ವಾ ಮಾಡಿದೂ : ಬೇಲೂರು, ಸೆಕ್ಕರೆಪಟಣ, ಕೊಂಡೂರು, ಚನ್ನರಾಯಪಟ್ಟಣ, ಹಾಸನಾ, ಮಹಾರಾಜಿದುರ್ಗ, ಅರಕಲಗೂಡು, ಕಿಕ್ಕೆರಿ, ಗ್ರಾಮ.”[೯೫]

**ವೆಂಕಟಪ್ಪ ನಾಯಕ**

“ಯೀ ವೆಂಕಟಪ್ಪ ನಾಯಕರ ಗೆರುಸೊಪ್ಪೆ ಪಟ್ಟಣದ ಅರಸು ಬೈರರಸವಡೇರ್ರು ಯಂಬುದಾಗಿ ಯಿದ್ದರು. ಯೀತನ ಹೆಂಡತಿ ಚನ್ನಮ್ಮಾಯಿ ಯಿವರು ಜಯಿನರ್ರು ರಾಜ್ಯವಾಳಿ ಭೈರಾರಸ ವೊಡೇಯರು ಹೆಸರುನನಿಂದಾ ರಾಜ್ಯ ಮಾಡುತ್ತಾ ಯಿರ್‍ರಲಿಕ್ಕೆ ಯಿವರನ ಹೊಡದು ವೆಂಕಟ್ಟಪನಯಕರು ಗೆದುಕೊಂಡರು. ಅನಂತರ ಯೀ ರಾಜ್ಯಸಹಿತವಾಗಿ ಆಳಿದರು ಯಿದಕ್ಕೆ ಶಕವರುಷಗಳು ೧೫೦೪ನೇ ಚಿತ್ರಭಾನು ಸಂವತ್ಸರ ಲಾಗಾಯಿತು ಶಕ ೧೫೫೧ನೆ ಶುಕ್ಲ ಸಂ ವರಿಗೆ ವರುಷ ೪೭.”[೯೬]

**ಶಿವಪ್ಪನಾಯಕ**

“ಗಂಡು ಸಂತಾನ ಇಲ್ಲದೆ ಹೋದ ಕಾರಣ ಸದಾಶಿವರಾಯರು ತನ್ನ ಮೊಮ್ಮಗನಾದ ಭದ್ರಪ್ಪನಾಯಕನ ಮ[+ಗ]ನಾದ ಶಿವಪ್ಪನಾಯಕನು ಹೊಳೆಹೊನ್ನೂರು ಶೀಮೆಗೆ ಪ್ರಭುತ್ವವನ್ನು ಮಾಡಿದ್ದನು. ತಾರಕಣಸಂವ್ಸರದ ಮಾರ್ಗಶಿರ ಶುದ್ಧ ೧೪ ಆರಭ್ಯ ಸರ್ವಜಿತು ಸಂವತ್ಸರ ಮಾರ್ಗಶಿರ ಶುದ್ಧ ಪ್ರತಿಪದ ೧ ವರಿಇಗೆ ವರುಷ ೧೧ ದಿವಸ ೧೭ ಪರಿಯಂತ್ರ ಪ್ರಥಮದಲ್ಲಿ ಆಳಿದ್ದನು. ಆ ಕಾಲದಲ್ಲಿ ಬಿಜಾಪುರದ ಶಾಹಾರ ಕಡೆಯಿಂದ ಅಹಂಮ್ಮದಖಾನ ಮಹಮ್ಮದುಖಾನರು ಫೌಜು ಸಹಾ ಬಂದು ಹೊಳೆಹೊನ್ನೂರ ಶೀಮೆ ಸ್ವಾಧೀನಮಾಡಿಕ್ಕೊಂಡು ರಾಮಾಜಿವಂತ ಬೀಮಾಜಿಪಂತನು ಶಾಲಿವಾಹನ ಶಕೆ ೧೫೭೦ ಸರ್ವಧಾರಿ ಸಂವತ್ಸರಭ್ಯ ಮನ್ಮಥ ಸಂವತ್ಸರ ವರೆಗೆ ಅವರು ಪ್ರಬುತ್ವ ಮಡಿದರು. ವರುಷ ೭.

ಪುನಹ ಶಕ ೧೫೭೭ನೆ ದುರ್ಮುಖ ಸಂವತ್ಸರದಲ್ಲಿ ಶಿವಪ್ಪನಾಯಕರು ದಂಡು ತೆಗೆದುಕ್ಕೊಂಡು ಬಂದು ಹೊಳೆಹೊನ್ನೂರು ಠಾಣಾ ಹಾಕಿಕ್ಕೊಂಡು ಠಾಣೆಗೆ ಶಿವಪ್ಪನಾಯಕನ ಮಗ ಕರೆಭದ್ರಪ್ಪನಾಯಕನ ಇಡ್ಡು ಗಂಜರಾಜಯಂಬ ಪಿರಂಗಿಯನ್ನು ಹಲು ಮಂದಿ ಸಾ ಯಿಟ್ಟಿದ್ದರಿಂದ ಈ ಕಿಲ್ಲೆದಾರನ್ನು ಹಜರು ಮದಿನ ಮನೆ ಉಗ್ರಾಣ ಕುಪ್ಪದಗಚ್ಚು ಸಹಾ ಕಟ್ಟಿಶಿ ಪಶ್ಚಮ ದಿಕ್ಕಿನ ಕೋಟೆಗೋಡೆಯನ್ನು ಬಂದೋಬಸ್ತಾಗಿ ಕಟ್ಟಿಸಿ. ಪಟ್ಟಣತ್ತವನ್ನು ಕಟ್ಟಿಸಿದನು. ಆ ಕಾಲದಲ್ಲಿ ಪಾರಪತ್ವದ ಬಗ್ಗೆ ಅರಳಿಕಪ್ಪದ ನರಸಣಂನ್ನ ಸಮೇತರಾಗಿ ಮೊಕರೂರು ಮಾಡ್ಸಿ ಇಟ್ಟನು. ಸನ್ ೧೫೮೮ನೆ ಪರಾಭವ ಸಂವತ್ಸರದ ವರಿವಿಗೆ ವರಿಷ ೧೧ ಪ್ರಭುತ್ವ ಮಾಡಿದನು. ಈ ಹನ್ನೊಂದು ವರುಷದಲ್ಲಿ ಈ ದೇಶವನ್ನು ಕಾಯಿದೆ ಮೇರಿಗೆ ಶಸ್ತುಬ ಕಟ್ಟಿದನು. ತರುವಾಯ ಶಿವಪ್ಪನಾಯಕನ ಮಹ ಭದ್ರಪ್ಪನಾಯಕನು ಪ್ರಭುತ್ವದಲ್ಲಿ ವಿಜಾಪುರದ ಬಾದಶಾಹನ ಕಡೆ ಇಂದ ಮುರ್ಜು ಮುಚಕಿನ ಜಬಿಬಿಖಾನ ಕವಾಯತ್ಮ ದಿನ ದರಗಾಕುಲ್ಲಿಖಾನ ಸಾ ಬಂದು ಈ ಕಿಲ್ಲೆಗೆ ದಿನ ಹದಿನೈದು ಮುತ್ತಿಗೆ ಹಾಕಿ ಕಿಲ್ಲೆಯನ್ನು ಠಾಣೆ ಹಾಕಿದನು. ಪ್ಲವಂಗ ಸಂವತ್ಸರದಾರಭ್ಯ ಶಕ ೧೬೪೫ಶೂಭಕೃತ೬೪ು ಸಂವತ್ಸರ ವರಿವಿಗೆ ಮುಸಲನಾನರು ಇದರ ಕಡೆಯವರು ಉಮತ್ತಿಗೆ ಕಿಲ್ಲೆಗೆ ಇದ್ದು. ವಿಜಾಪುರದ ಶುಬೆ ಶಿರಿಯಾ ಶುಭೆದಾರ ಸಲುಳಿದ ವರಷ ೫೭ ವಿವರ: ವುಜಾಪುರದ ಕೆಳಗೆ ಅಬ್ದುಲ್‌ಖಾನೆಂಬುವನೂ ಕೆಲ್ಲೆರ ಕನಕ್ಕೆ ಶೀಮೆಗೆ ಸಾಮುಭಿ ಸರದಾಎನಾಗಿ ಇದ್ದನ್ನು ಅವಾಗ. ಈ ಶೀಮೆ ಶೇಭಾನಯೆಂಬ ಜಾಹಗೀರುದಾನಗೆ ನಡೆಯುತ್ತಾ ಇತ್ತು. ಯಾರನ್ನ ವೊಬ್ಬಣದ ಇರುತ್ತಿದ್ದನು. ಇವನ್ನ ಯಾಪಿಲರ ಕಡೆಯಿಂದ ಹಣ ವಸೂಲು ನಾಡಿಕ್ಕೊಂಬವನು. ಈ ಮೇರಿಗೆ ಅಳಿದನುಭವಿಸಿದನು ವರುಷ ೩.೦ ಆ ಮೇಲೆ ತಿಯರ್‌ಝಾನ್ ಎಂಬುವನು ವಿಜಾಪುರದ ಸುಬೇದಾರನ ಮಾಡಿಕ್ಕೊಂಡು ಬಂದುನ್ನು. ಈತನ್ನು ನರೆದ ಇದ್ದ ಮುಂಚಿತವಾಗಿ ಮೇಲೆ ಬರದಿರುವ ಸರ[+ತಿಯರ್] ಖಾನನೂ ಮೃತನಾದನು.

ಯೀ ಶಿವಪ್ಪ ನಾಯಕನು ಯಿಬರು ಮಕ್ಕಳು ಬದ್ರಪನಾಯಕ ೧. ಸೋಮಶೇಖನಾಯಕ ೧. ಹಿರಿಮಗ ಬದ್ರಪ್ಪನಾಯಕನೂ ಪಟಾದಿಕಾರಿಯಾಗಿ ಬೆಲೂರು ವಸ್ತಾರೆ ಸ್ವಾಧೀನ ಮಾಡಿಕೊಂಢು ಬಿದನೂರಿಗೆ ಶೆರಿಸಿಕೊಂಡು ಯೀತನು ಕಾಲವಾಗುವ ತನಕಾ ಅಳುತ್ತಾ ಯಿದಲ್ಲಿ ಮೈಸೊರವರು ಯರಡು ಮೂರಾರ್ತೆ ದಂಡು ತೆಗೆದುಕೊಂಡು ಬಂದಲ್ಲಿ ಅವರನ ಹೊಡದು ವೊಡಿಶಿ. ವಸ್ತಾರೆ ಕಿಲ್ಲೆಯಲ್ಲಿ ೩ ಸಾವಿರ ಮಂದೀಯಿಟ್ಟು. ಕಿಲ್ಲೆಯನ್ನು ಮರಹಂಮ್ಮತ್ತು ಮಾಡಿಶಿದನು. ಯೀತನು ಪರಂಧಾಮಕೆ ಹೊದ ಮೇಲೆ ಯೀತನ ತಮ್ಮ ಸೊಮಶೆಖರನಾಯಕನೂ ಮಸಾಲೆಯಲ್ಲಿ ಕೊಡಿಸಿ

ಹಾಕಿಶಿ, ಯೀತನಗೆ ಹುಚು ಬರುವ ಹಾಗೆ ಮಾಡಿಶಿದರು. ಅದ್ದರಿಂದ್ದಾ ಯೀತಗೆ ಹುಚು ಸೊಮಶೆಖರನಾಯಕಾ ಯಂಬದಾಗಿ ಹೆಸರು ಅಯಿತ್ತು. ಆ ಕಾಲದಲ್ಲಿ ಮೈಸೂರು ದೇವರಾಜವಡೆಯರು ಪುನಹಾ ದಂಡು ತೆಗೆದುಕೊಂಡು ಬಂದ್ದು, ಯಿವರ ಶೀಮೆಯಲ್ಲಿ ಗಡೀ ಕಿಲ್ಲೆಗಳು ಠಾಣೆ ಹಾಕಿಕೊಂಡು ತಮ್ಮ ಸ್ವಜನರನ ವಸ್ತಾರೆಯಲ್ಲಿ ಯಿಟ್ಟು, ಮದ್ದು ಗುಂಡು ವಗೈರಾ ಕಾರಬಾಕೀ[ರೀ] ಸಹಾಯಿಟ್ಟು ಬಂದೋಬಸ್ತು ಮಾಡಿಯಿದಲ್ಲಿ. ನಗರದಲ್ಲಿ ಸೊಮಶೆಖರನಾಯಕನ ಕೃತ್ತಿಮದಿಂದಾ ಮಾಡಿ ಕೊಂದು ಹಾಕಿಶಿದರು."[೬]

**ಸೋಮಶೇಖರ ನಾಯಕ**

"ಬೂದಿ ಬಸಪ್ಪನಾಯಕನ ಮಗ ವೀರಭದ್ರನಾಯಕ ಸೋಮಶೇಖರ ನಾಯಕನು ಯಿಬ್ಬರು. ಯಿದರ ವಳಗೆ ಸೋಮಶೇಖರನಾಯಕರಿಗೆ ಪಟ್ಟವಾಯಿತು.ಯೀತನು ರಾಜ್ಯಭಾರ ಮಾಡುವ ಕಾಲಕ್ಕೆ ಯೀತನ ಮಾನ ನಿರ್ವಾಣಯ್ಯನು ಯಂಬುವನು ಶೃಂಘೇರಿಯಲ್ಲಿ ಮಠವನ್ನು ಕಟ್ಟಿಸಿದ್ದರಿಂದ, ಶೃಂಗೇರಿಸ್ವಾಮಿಗಳಿಗೂ ಜಂಗಮರಿಗೂ ನ್ಯಾಯಬಂದದರಿಂದ. ಯೀ ಶೃಂಗೇರಿಸ್ವಾಮಿಗಳು ಯಲ್ಲಿ ಮಠವನ್ನು ಕಟ್ಟಿಸಬೇಡಿ. ಯಿದು ಕಟ್ಟಿದರೂ. ಕಿತ್ತಿ ಹಾಕಿ ಬಿಡುತ್ತೇವೆ. ಯಂಬುದಾಗಿ ಹೇಳಿ ಪುನಾಹಾದ ಬಾಜೀರಾಯರಿಗೆ ಹೇಳಿಕಳುಹಿಸಿ, ಯಿಲ್ಲಿ ಜಂಗಮರ ಉಪದ್ರವ ಬಹಳವಾಗಿ ಯಿದೆ. ಯವರಿಗೆ ಯಿಕ್ಕೇರಿಯವರ ಬಲವಿದೆ ಯಂಬದಾಗಿ ಹೇಳಿದರಿಂದಾ. ಆ ಕ್ಷಣವೇ ಬಾಜೀರಾಯರು ಬಂದು, ಫ ಉಜು ಸಹಾ ತೆಗೆದುಕೊಂಡು ಬಂದು ಮೇಲೆ ಸೋಮಶೇಖರನಾಯಕರು ಸಲ್ಲಾ ಮಾಡಿಕೊಂಡು ಶೃಂಗೇರಿ ವಳಗೆ ತಮ್ಮ ಮಠ ಕೀಳುತ್ತ ಯಿದ್ದೇವೆ ಯಂಬದಾಗಿ ಹೇಳಿ, ಚೇಉತಾಯಿ ಮೂರು ಲಕ್ಷ ವರಹಾ ನಿಗದಿಮಾಡಿ ಕೊಡುತ್ತೇವೆ ಯಂಬುದಾಗಿ ಹೇಳಿ ಯೀ ವರಾಹವನ್ನು ಕೊಟ್ಟು, ಯೀ ಬಾಜೀರಾಯರಿಗೆ ಕೊಡಬೇಕಾದರೆ ಶೃಂಗೇರಿಮಠದವರಿಗೆ ಅನೇಕ ಧನವನ್ನು ಕೊಟ್ಟು ಸಮಾಧಾನ ಮಾಡಿಕೊಂಡು ಯಿರುವ ಯೀ ಬಾಜೀರಯನವರು ದಂಡು ಕಟ್ಟಿಕೊಂಡು ಪರಾಭವ ಸಂ॥ದಲ್ಲಿ ಹಿಂದಕೆ ಹೋದರು. ಶೃಂಗೇರಿಯವರು ತಮ್ಮ ಸ್ಥಳದಲ್ಲಿ ಯಿದ್ದು[>ದ್ದ] ಜಂಗಮರ ಮಠವನ್ನು ಅಲ್ಲಿ ಯಿರುವ ಭೂಮಿ ವಳಗಣ ಮಣ್ಣನ್ನು ಸಹಿತವಾಗಿ ಕಿತ್ತು ಹಾಕಿದನು. ಆ ಕಾಲದಲ್ಲಿ ಸೋಮಶೇಖರನಯಕನು ತನ್ನ ರಾಜ್ಯದ ಮೇಲೆ ವರಹಾ ೧ಕ್ಕೆ ೯೧೧೦ ಚವಲ ಪಗಡಿ ಮಡಿ ಶಿಸ್ತಿಗೆ ಕೊಡಿದರು.

ಬಿದರೂರ ಅರ್ಸ್ಲ ಸೋಮಶೇಖರನಯಕರು ತಮ್ಮ ಕಡೆ ಸುಭೇದಾರು ಲೇವಿ ನಿಂಗಣ್ಣ ದಂಡು ಸಹಾ ತೆಗೆದುಕೊಂಡು ಬಂದು, ಯೀ ಕೋಟೆಗೆ ಮೂರ್ರು ತಿಂಗಳು ಮುತ್ತಿಗೆ ಹಾಕಿ. ಯೀ ಕೋಟೆಯನ್ನು ಕಾವಲು ಮೇಲೆ ತೆಗೆದುಕೊಂಡು ೧೬೬೨ನೆಯ ರ ಉದ್ರಿ ಸಂ. ಲಾಗಾಯಿತು ಶಕ ವರುಷ ೧೬೮೪ನೆಯ ಚಿತ್ರಭಾನು ಸಂವತ್ಸರ ವರಿಗೆ ವರುಷ ೨೨ ಆಳಿದರು."[೮]

**ಚನ್ನಮ್ಮಾಜಿ (ಸೋಮಶೇಖರನ ಹೆಂಡತಿ)**

"ಚನ್ನಮ್ಮಾಜಿಯು ಪ್ರಭುತ್ವಕ್ಕೆ ಪುತ್ರ ಸಂತಾನ ವಿಲದ್ದರಿಂದಾ ಮರಿಯಪ್ಪಶೆಟ್ಟಿ ಮಗನನ್ನು ಸಾಕು ತೆಗೆದುಕೊಂಡು ಹಳಬರು ಸಾಮಾದಿಕರನ್ನು ತೆಗೆದು ಹಾಕಿಶಿ, ಹೊಸ ಸಾಮೂದಿಕರನ್ನ ನೇಮಕಾ ಮಾಡಿಶಿ, ಅಯಂಮ ಕೆಲಸಕ್ಕೆ ಯಿಟ್ಟು ೨೫ ಸಾವಿರ ಕುಂಮೀಯವರ ಹಳೆ ಪಯಕೀ ಕೊಟ್ಟು ತಾ[>ಕಾ]ಸರಕಂಡು ತಿಮ್ಮಣ್ಣನಾಯಕ, ತೊಳಪಾಡು ಬೊಮ್ಮರಸಯ್ಯ ಸಹಾ ಕಳುಹಿಶಿ, ಯೀವುತಕ ನೀರು ವಸ್ತಾರೆ ಪರಿಯಂತ್ರಕ್ಕೂ ಬರುವ ಬಾರು ವಸ್ತಾರಿಗೆ ದಕ್ಷಿಣ ದಿಕ್ಕಿನಲ್ಲಿ ಬೈಲು ಹೊಲದಲ್ಲಿ ಅಡಿತಿನ ತೆವರೆಂಬ ಸ್ಥಳದಲ್ಲಿ ವಂದು ಹರದಾರೀ ಮೇಲೆ ಯಿಳುಕೊಂಡರು. ಮೈಸೂರವರ ಕಡೆಯಿಂದಾ ವಸ್ತಾರೆ ಕೊಟೆಯಲ್ಲಿ ಯಿಂದ ತಿಮ್ಮಣ್ಣ ದಳವಾಯಿಯು ಮೂರು ದಿವಸ ಪರಿಯಂತ್ರಾ ಬಹಳ ಯುದ್ಧವನ್ನು ಮೆಯಿಸೂರವರ ಮಂದೀ ಸಂಗಡ ಮಾಡಿ ಯಡೆಹಳ್ಳಿ ಬದಿಯಲ್ಲಿ ಅರ್ಥ ಹರದಾರಿ ಮೇಲೆ ಹೇಹ ಬಿಟ್ಟರು. ಮೈಸೂರವರ ಮಂದಿಕಿಂತಾ ಯೀ ಬಿದರೂರವರ ಮಂದಿ ಹೆರಾಳವದ ಕಾರಣ ಯೀ ಮೈಸೂರವರ ಸಯಿನ್ಯವು ಪೆಟ್ಟು ಬಿದ್ದು ಪರಾಜಿತವಾಗಿ ವೊಡಿಹೋದರು. ಆಮೇಲೆ ಯೀ ಬಿದರೂರವರು ಯೀ ವಸ್ತಾರೆ ತೆಗೆದುಮೊಂಡು, ಯೀ ಕೋಟೆಯಲ್ಲಿ ತಮ್ಮಕಡೆ ಮಂದೀ ಕೆಲವು ಯಿಟ್ಟ ಬಂದೋಬಸ್ತು ಮಾಡಿ ಹೋದರು.

ಅ ಮೇಲೆ ಕೆಲವು ದಿವಸವಾಗುವುದು ದೊಡ್ಡದೇವರಾವಡೆಯರ ಮಗ ಕೃಷ್ಣಾರಾಜವಡೆಯ ಮಂದಿ ತೆಗೆದುಕೊಂಡು ದೊಡ್ಡದೇವರಾವಡೆಯರ ಮಗ ಕೃಷ್ಣರಾಜವಡೆಯ ಮಂದಿ ತೆಗೆದುಕೊಂಡು, ಯೀ ಕೋಟಿಗೆ ಮುತ್ತಿಗೆ ಹಾಕಿ ಯುದ್ಧ ಮಾಡಿದರು. ಯೀ ವಸ್ತರೆ ಕಿಲ್ಲೆದಲ್ಲಿ ಯಿದವರಿಗೆ ಬಿದರೂರವರ ಕಡೆಯವರು ಕುಮಕು ಬಾರದೆ ಹೋದ ಕಾರಣ. ಆ ಕಿಲ್ಲದಲ್ಲಿ ಯಿದವರು ಮೈಸೂರವರ ಕಡೆಯಂದ್ದಾ ಬಹಳ ಘೂ(>ಘಾ) ಶಿ ಆಗಿ. ಹತಸೆಷವಾದರು. ತಮ್ಮ ಕಡೆ ಕೆಲವು ಮಂದಿ ಯಿ ಗಡಿಯಲ್ಲಿ ಯಿಟ್ಟು ಬಂದೋಬಸ್ತು ಮಾಡಿ. ಕೃಷ್ಣರಾಜವಡೆರು ಯೀ ವಸ್ತಾರೆಯನ್ನೂ ಮೈಸೂರು

ಸಂಸ್ಥನಕೆ ಶೆರಿಶಿ ಕೆಲವು ದಿವಸ ಆಳಿದ್ದು. ಆ ಸಮಯದಲ್ಲಿ ಚೆನ್ನಮ್ಮಾಜಿ ದೇಹ ಬಿಟ್ಟಳು"[೯೯]

**ಚನ್ನಮ್ಮಾಜಿಯ ಸಾಕುಮಗ ಬಸಪ್ಪಮಾಯಕ ಕೈಫಿಯತ್ತುಗಳಲ್ಲಿರುವಂತೆ**

"ಆಕೆ ಆದ ತರುವಾಯ ಸಾಕು ಮಗ ಬಸಪ್ಪನಾಯಕ ಸ್ವತಂತ್ರ ಪ್ರಭುತ್ವಾ ಮಾಡುತ್ತಾ ಬಂದು. ಆತನ ಕಾಲದಲ್ಲಿ ಮತ್ತು ಬಹಳವಾಗಿ ದಂಡು ತೆಗೆದುಕೊಂಡು ಬಂದು, ಮೈಸೂರವರ ಕಡೆಯವರ ಸಂಗಡ, ಯುದ್ಧಮಾಡಿ, ವಸ್ತಾರೆ, ಕಿಲ್ಲೆಂದಾ ಅವರನ ಪರಾಜಿತವಾಗು ಹಾಗೆ ಮಾಡಿಶಿ, ಕಿಲ್ಲೆ ಸ್ವಾಧೀನ ಮಾಡಿಕೊಂಡು, ಮುಂದೆ ಶ್ರೀರಂಗಪಟ್ಟಣದ ತನಕಾ ಹೊಗಿ, ರಾಜ್ಯ ಸಾಧಿಸಬೇಕುಯಂಬ ಸಭಿಲಾಷೆಯಿಂದ್ದಾ ದಂಡು ಸಹಿತವಾಗಿ ಯಿಳುಕೊಂಡು ಯಿದು ಯೀ ಸಮಾಚಾರ ತಿಳಿದು ಮೈಸೂರು ಕೃಷ್ಣರಾಜವಡೆರು ತಮ್ಮ ದಂಡು ಶಿಧಾ ಮಾಡಿಕೊಂಡು ಸಂವಿದಾನದಲ್ಲಿ ಯಿದ್ದು, ತಮ್ಮ ಕಡೆಯಿಂದ್ಧಾ ಪ್ರಹ್ಲಾದಪಂಡಿತನ ಹೆಜಬಗೆ ಬಿದರೂರು ಅರಶಿನುಳಿಗೆ ವಸ್ತಾರಿಗೆ ಕಳುಹಿಸಿವಾಗ್ಯೆ ಯೆನೆಂತ್ತಯಾದರೆ ಮೈಸೂರವರು ಬಿದನೂರು ದಂಡೆತ್ತಿ ಸ್ವಾರಮಾಡುವದ್ದರಿಂದ್ದಾ ಯೀ ಭಾಗದಲ್ಲಿ ಯಿರೊ ಶೀಮೆಗಳು ಅನೇಕ ಕಾಲದ ಯಿಂದಾ ನಿರ್ಮೂಲವಾಗುದಾಗಿ ಆಯಿತ್ತು. ಯಿದರಿಂದ್ದಾ ರೈತರೆಲ್ಲರೂ ಅನೇಕ ಲುಕಸಾಲು(>ನು) ಪಡೆದರು. ಅದು ಕೊಸ್ತರವಾಗಿ ಉಭಯತ್ತರೂ ಸಲ್ಲಾ ಮಾಡಿಕೊಳಬೇಕೆಂದ್ದೂ, ಅವರು ನಿರೀಕ್ಷಿಸುತ್ತಾರೆ. ಯಿದು ಹೊರ್ತು ಸಾಮಾನೀಕರಿಗೆ ಅರ್ಥವ್ರಯನಮಾಡಿದರು. ಆಗ ಅವರು ತಮ್ಮ ಧಣೇರಿಗೆ ಹೇಳಿ ಆಲೊಚನೆ ಮಡಿ ಯೀ ಕರ್ತರಿಗೆ ವಂದ್ದು ತಹಾ ಮಾಡಿಶಿ, ವಸ್ತಾರೆ ಬಿದನೂರವರಿಗೆ ಕೊಡಿಶಿ, ಬೇಲೂರು ಮೈಸೂರವರಿಗೆ ಕೊಡಿಶಿ ಕಂಚಿನ ಕಲ್ಲುದುರ್ಗ ಗಡಿ ಗೊತ್ತುಮಾಡಿ, ಯಿ ಭಾಷಾಪತ್ರಗಳು ವುಭಯತ್ರರಿಗೂ ಹುಟಿಶಿಕೊಟರು."[೧೦೦]

**ಕೆಳದಿ ಬಸಪ್ಪನಾಯಕನ ಹೆಂಡತಿ ವೀರಮ್ಮಾಜಿ**

"ಬೆಂಕಿಪುರದ ಬಸಪ್ಪನಯಕರ ಪತ್ನಿಯಾದ ವೀರಮ್ಮಾಜಿಯು ತಮ್ಮ ಸೋದರಮಾವನದರಿಂದ ಪಟ್ಟಣಸೆಟ್ಟಿ ಚೆನ್ನವೀರಪ್ಪನ ಮಕ್ಕಳು ನಾಯಕ (ನಾಲಕು?) ಮಂದಿಯಲ್ಲಿ ಹಿರೀ(ಕಿರೀ?) ಮಗ ಬುದ್ಧಿಶಾಲಿಯಾದ ಕಾರಣ ಆತನಂ ತೆಗೆದುಕೊಂಡು ಸೋಮಶೇಖರನಾಯಕನೆಂದು ಆ ಹುಡುಗನಿಗೆ ಹೆಸರಿಟ್ಟು ಅವನಿಗೆ ಪಟ್ಟಾಭಿಷೇಕ ಮಾಡಿ ಸಣ್ಣವನಾದುದರಿಂದ ವೀರಮ್ಮಾಜಿಯವರು ರಾಜ್ಯಪರಿಪಲನೆ ಮಾಡಿದರು.ಈಶ್ವರ ಸಂವತ್ಸರದ ಶ್ರಾವಣ ಶುದ್ಧ ॥ ೩ ॥ ಆರಭ್ಯ ಚಿತ್ರಭಾನು ಸಂವತ್ಸರದ ಪುಷ್ಯಮಾಸದ

ವರೆಗೆ ವರ್ಷ ೫ ತಿಂಗಳು ೬, ದಿನ ೩ರ ವರೆಗೆ (ಸೋಮಶೇಖರನಾಯಕನು) ರಾಜ್ಯವಾಳಿದನು.

೧೬, ಅಂತು ಹದಿನಾರು, ಈ ಪ್ರಕಾರ ಚಿತ್ರಭಾನು ಸಂವತ್ಸರದ ವರೆಗೆ ನಗರದ ದೊರೆಗಳು ಧರ್ಮದಿಂದ ರಾಜ್ಯಪರಿಪಲನೆ ಮಡಿಕೊಂಡು ಬಂದನು.

ಆ ಸಮಯದಲ್ಲಿ ಚಿತ್ರದುರ್ಗ ಪಾಳೇಗಾರಂನ ಕೂಡಿಕೊಂಡು ಬಹದರನು ಬಂದು ಬಿದನೂರು ತೆಗೆದುಕೊಂಡು ಚಿತ್ರಭಾನು ಸಂವತ್ಸರದ ಮಾಘಮಾಸದವರಿಗೇ. ಯೀಕೆಯು ಚಿತ್ರಭಾನು ಸಂವತ್ಸರದವರೆಗೇ ಆಳಿದಳೂ. ಯೀಕೆಯೇ ಯೀ ನಗರದ ಸಂಸ್ತಾನಕ್ಕೆ ಆಖೈರಾಯ್ತು. ಆ ಬಳಿಕೆ ಹೈದರಲ್ಲಿಖಾನನು ವೀರಂಮಾಜಿಯವರಂನು ಕೈಸೆರೆ ಹಿಡಿದು, ಮಧ್ಗಿರಿಯೊಳಗೆ ಯಿಟ್ಟಿದ್ರು. ಬಿದನೂರಿಗೆ ಯಿದಕ್ಕೆ ಪೂರ್ವದ ಅರಸುಗಳು ಅಭಿಪ್ರಾಯವನ್ನು ತಿಳಿದು ಹೈದರನಗರಾಯೆಂಬ ಹೆಸರಿಟ್ಟನು. ಚಿತ್ರಭಾನು ಸಂ॥ ದಾರಭ್ಯ ಶುಭಕೃತು ಸಂ॥ವರಿಗೆ ವರ್ಷ ೨೧ ಆಳಿದನು. ತದನಂತ್ತರ ಯೀತನ ಮಗ ಟೀಪುಸುಲ್ತಾನನೆಂಬಾತನು ಪೌ[>ಚೌ]ಥಾಯಿ ಅನಿಸಿಕೊಂಡು ಸಿದ್ಧಾರ್ಥಿ ಸಂ॥ ರದ ಚೈತ್ರ ೩೦ ವರಿಗೆ ಆಳಿದರು."[೧೦೧]

"ವ್ಯಯ ಸಂವತ್ಸರದ ಆರಭ್ಯ ಚಿತ್ರಭಾನು ಸಂವತ್ಸರದ ಮಾಘ ಶು ೨ ಪರಿಯಂತ್ರಾ ವಸ್ತಾರೆ ಬಿದರೂರು ಸಂಸ್ಥಾನದ ದೊರಿಗಳ ಅಧಿಕಾರದ ವಳಗೆ, ಬಸಪ್ಪನಾಯಕ ಮೊದಲು ಮಾಡಿ ಸೊಮಶೆಖರನಾಯಕನು ಬಿದರೂರು ಸಂಸ್ಥಾನಕ್ಕೆ ಲಭೆ ಅದ ರಾಣಿ ವೀರಮ್ಮಾಜಿ ಸಾಕು ತೆಗೆದುಕೊಂಡು ಮಗ, ಯಿವನ ಪರಿಯಂತ್ರಕ್ಕೂ ಯೆನು ತೊಂದರೆ ಡಾಂಬರವಿಲ್ಲದೆ ಯೀ ವುಭಯ ಪಕ್ಷದವರು ತಮಹಾಲು ನಿರ್ಮಲವಾಗಿ ಯಿರುವ ಸಮಯದಲ್ಲಿ,ಯೀ ಬಿದರೂರು ಸಮಸ್ಥಾನದವರು ತಂಮ್ಮಾ ಕಡೆಯಿದ್ದಾ ಯೀ ವಸ್ತಾರೆ ಕೊಟೆಯಲ್ಲಿ ಮದ್ದುಗುಂಡು ಸಾಮನು ಸರಂಜಾಮೆ ಸುದಾ ಯಿಟ್ಟು, ಯೀ ಕೊಟೆಯಲ್ಲಿ ಯೀ ಬಿದರೂರವರಿಗೆ ಕಡೆಗಡಿಯಾದ ಕಾರಣ ದುರಸ್ತುಮಾಡ್ಸಿ, ಸರ್ವದಾ ಮತ್ತೇನು ಅವಿವೆಕಗಳು ಬಾರದ ಹಾಗೆ ದ್ರಿಷ್ಟಿಯಲ್ಲಿಟ್ಟು ಯಿರುತ್ತಿದ್ದರು. ಯಿ ವಸ್ತಾರೆ ಯೀ ಬಿದರೂರವರ ವಳಗೆ ದಾಖಲು ಆದಮೇಲೆ, ಸಂಸ್ಥಾನದ ರಾಜ್ಯಭಾರಾ ಮಾಡಿದವರು ವಿವರಾ ಕೆಳಗೆ ಬರದ ಪ್ರಕಾರಕ್ಕೆ ವ್ಯಯ ಸಂವತ್ಸರದಾರಭ್ಯ ಚಿತ್ರಭಾನು ಸಂವತ್ಸರದಾರಭ್ಯ ಚಿತ್ರಭಾನು ಸಂವತ್ಸರದ ವರಿಗೆ: ಬಸಪ್ಪನಾಯಕ ೧೦ ವರುಷ, ಸೋಮಶೆಖರನಾಯಕ ೨೪, ಬೂದಿ ಬಸಪ್ಪನಾಯಕ

೧೫, ಚನ್ನಬಸಪ್ಪನಾಯಕ ೨, ಸೋಮಶೇಖರ ವೀರಮ್ಮಾಜಿ ಸಾಕುಮಗ ವರುಷ ೫, ಯೀ ಮೆರಿಗೆ ಅಂತ್ತೂ ಜನ ೫ ಕೆ ಆಳಿದ ವರುಷ ೫೬

ಚಿತ್ರಭಾನು ಸಂವತ್ಸರದ ನಾಘ ಬ ೨ಲ್ಲೂ ಹೈದರಲ್ಲಿಖಾನಗೆ ಬರಾಜನ ವೇಷಧಾರಿ ಸಂಗಡ ಹತರು ತೆಗದುಕೊಂಡು ಬಂದು, ಯೀಗ್ಯೆ ಬರಾಜ ಮೇಲೆಬರದ ೩ ನದಲ್ಲಿ ನಾಲ್ಕನೆಯವನು ಯೀತನು ವೀರಮ್ಮಾಜಿಯು ತನ್ನ ಪ್ರಾಣಕೆ ತಂದದರಿಂದಾ, ಚಿತ್ರಗಲ್ಲು ಪಾಳೆಗಾರನ ಹತ್ರೆ ಕೆ [>ಹೈ] ದರನ ಸಹಾ ಸೇರಿಕೊಂಡವನು. ಯಿವನ ಹೆಸರಲ್ಲಿ ಬಿದರೂರಿಗೆ ಬರುವ ಮಾರ್ಗದಲ್ಲಿ ಸುಲಭವಾಗಿ ಗಡಿಗಳೆಲ್ಲಾ ಠಾಣೆ ಹಾಕಿಕೊಳ್ಳುತ್ತಾ ಬಂದರು. ವೀರಮ್ಮಾಜಿಯು ದುಷ್ಟಚರಿತ್ರೆಯಿಂದಾ ಬಹದರು ಮೆದಕರೆನಾಯಕನ ಸಂಗಡ ಫವುಜು ತೆಗದುಕೊಂಡು ಬರುವದಕ ಮೊದಲೆ ಯೀ ಸಂಸ್ಥನದಲ್ಲಿ ಬಹಲ ತೊಂದರೆ ಆಗಿ, ಅಸ್ವಾರಸ್ಯವಾಗಿ ಯಿತ್ತು. ಹೀಂಗ್ಗೆ ಯಿರುವಲ್ಲಿ ಬಹದರವರ ಫವುಜು ಬಂದ ವರ್ತಮಾನ ತಿಳದು, ಅರಮನೆಗೆ ಬೆಂಕೀ ಹಾಕಿ ಕೆಲವು ಖಜಾನೆ ತೆಗೆದುಕೊಂಡು ಬಲಾಳರಾಯದುರ್ಗ ವೊಡಿಹೊದಳು. ಅಮೇಲೆ ಬಿದರೂರು. ಸ್ವಾಧೀನ ಮಡಿಕೊಂಡ ಬಳಿಕ ಕಾರಶಹಯಂಬ ತನ್ನ ಗುರುವನನು ವೀರಮ್ಮಾಜಿ ಬಳಿಗೆ ಕಳುಹಿಸಿ, ವಡಂಬಡಿಕೆಯಿಂದ ಕರಕೊಂಡು ಬರಬೇಕೆಂದು ಕಳುಹಿಶಿದಲ್ಲಿ ಆತ ಹೋಗಿ ಯೀ ವೀರಮ್ಮಾಜಿಯನ್ನು ಬಹದರನ ದರ್ಶನಕ್ಕೆ ಕೊಡಿಯಾಲಕೆ ಕರಕೊಂಡು ಬಂದ್ದರು."[೧೦೨]

"ಅನಂತರದಲ್ಲಿ ಯಿವನ ಹೆಂಡತಿ ವೀರಮ್ಮಾಜಿಯವರು ಆಳಿದ್ದು ಚಿತ್ರಬಾನು ಸಂ ಮಾರ್ಗಶಿರ ಶು॥ ೨ ಆದಿತ್ಯವಾರ ಪರಿಯಂತ್ರಕು ವರುಷಾ ೧ಕೆ ಮರಾಟೆಯವರಿಗೆ ೧೨ ಲಕ್ಷ ರೂಪಯಿ ಕೊಟ್ಟುಕೊಂಡು ರಾಜ್ಯವನಾಳಿದರು,ಯಿ ಪ್ರಕಾರ ಚಿತ್ರಭಾನು ಸಂ।ವರಿಗೆ ಆಳಿದರು. ಆಗ್ಯೆ ಕಂದ ರಾಜಪ್ಪಯ........ಮಗ ಕುತುಕ........ಚಿತ್ರಭಾನು ಸಂ। ಆಳುತಿರುವಾಗೆವ ಸ್ತಳಕ್ಕೆ ಆಳ್ಲು......?...ಬಂದು ಬಿದರ್ರೂರ ತೇಗೆದುಕೊಂಡು ವೀರಮ್ಮಾಜಿಯವರನ್ನು ಕೈಸೆರೆ ಹಿಡಿದು. ಮದ್ದಗಿರಿ ವಳಗೆ ಯಿಟ್ಟರು. ಯೀ ಬಿದರೂರ್ರಿಗೆ ಹೈದರ ನಗರಯಂಬ ಹೆಸರು ಯಿಟ್ಟರು.ಈ ಚಿತ್ರಭಾನು ಸಂ।ಆರಭ್ಯ"[೧೦೩]

**ಚಿತ್ರದುರ್ಗದ ಪಾಳೇಗಾರರು**

ಪುರಾಣ ಕಾಲದಲ್ಲಿ ಚಿತ್ರದುರ್ಗ ಚಿನ್ಮೂಲಾದ್ರಿ ಎಂದು ಪ್ರಸಿದ್ಧವಾಗಿತ್ತು.ಇದು ಹಿಡಿಂಬಾಸುರನ ನಗರವಾಗಿತ್ತೆಂದು ಪ್ರತೀತಿ ಇದೆ. ಇಲ್ಲಿರುವ ಪಂಚಲಿಂಗಗಳನ್ನು ಪಾಂಡವರು ಸ್ಥಾಪಿಸಿದರೆಂದು ಹೇಳಿದೆ. ಕದಂಬರ ಕಾಲದಲ್ಲಿ ಈ ಪ್ರದೇಶಕ್ಕೆ ಚಂದ್ರವಳಿ

ಎಂದೂ ಚಾಲುಕ್ಯ-ರಾಷ್ಟ್ರಕೂಟರು ಕಾಲದಲ್ಲಿ ಸೂಳ್ಗಲ್ಲುನಾಡೆಂದೂ ಹೆಸರಿತ್ತು. ಚಿತ್ರದುರ್ಗ ಪಾಳೇಪಟ್ಟಿನ ಸ್ಥಾಪಕ ಮತ್ತಿ ತಿಮ್ಮಣ್ಣ ನಾಯಕ. ಈತ ತಿರುಪತಿಯ ಮೇದಕೇರಿಯಿಂದ ಬಂದವನಾದ್ದರಿಂದ ಇವನ ವಂಶದ ಅರಸರಿಗೆ 'ಮದಕರಿ ನಾಯಕ' ಹೆಸರು ಬಂದಿರಬೇಕು. ಇವರು ಬೇಡ ಜನಾಂಗಕ್ಕೆ ಸೇರಿದವರು. ಚಿತ್ರದುರ್ಗ ನಯಕರ ಇತಿಹಾಸ ಮತ್ತಿತಿಮ್ಮಣ ನಾಯಕನಿಂದ ಆರಂಭವಾಗುತ್ತದೆ, ಈತ ವಿಜಯನಗರದ ಸಾಳುವ ನರಸಿಂಹನ ಸಾಮಂತನಾಗಿದ್ದ. ಈತ ಚಿತ್ರದುರ್ಗದ ಪ್ರಸಿದ್ಧ ಕಲ್ಲಿನ ಕೋಟೆಯನ್ನು ನಿರ್ಮಿಸಿದ, ೧೪೯೫ ರಲ್ಲಿ ಚಿತ್ರದುರ್ಗದ ನಾಯಕನಾಗಿ ನಿಯುಕ್ತನಾದ ಕೊನೆಗೆ ತನ್ನ ಅವಿಧೇಯತೆಗಾಗಿ ವಿಜಯನಗರದಲ್ಲಿ ಸೆರೆಮನೆ ವಾಸವನ್ನು ಅನುಭವಿಸಿ ಅಲ್ಲಿಯೇ ಕೊನೆಯುಸಿರೆಳೆದ.

ತಿಮ್ಮಣ್ಣ ನಾಯಕನ ನಂತರ ಆತನ ಮಗ ಓಬಣ್ಣ ನಾಯಕ ಪಟ್ಟವೇರಿದ. ಮದಕರಿ ನಾಯಕ ಬಿರುದನ್ನು ಹೊಂದಿದ್ದ ಈತ ವಿಜಯನಗರದ ಪತನದ ನಂತರ ಸ್ವತಂತ್ರನಾದ.ಇವನ ನಂತರ ಕಸ್ತೂರಿ ರಂಗಪ್ಪ ನಾಯಕ ಎರಡನೇ ಮದಕರಿ ನಾಯಕ, ಚಿಕ್ಕಣ್ಣ ನಾಯಕ, ಭರಮಪ್ಪ ನಾಯಕ ಮೊದಲಾದವರು ರಾಜ್ಯವಾಳಿದರು.ಭರಮಪ್ಪ, ಬಿಜಾಪುರ, ರಾಯದುರ್ಗ ಮತ್ತು ಹರಪ್ಪನಹಳ್ಳಿಯವರ ವಿರುದ್ಧ ಸಮರ್ಥವಾಗಿ ಹೋರಾಡಿದ.ಈ ತನ್ನ ಸುದೀರ್ಘ ಆಳ್ವಿಕೆಯಲ್ಲಿ ಹಲವಾರು ದೇವಾಲಯ, ಅರಮನೆ ಮತ್ತು ಕೋಟೆಗಳನ್ನು ಕಟ್ಟಿಸಿದ. ಆತನ ನಂತರ ಪಟ್ಟವೇರಿದ ಮೂರನೇ (ಹಿರಿಯ) ಮದಕರಿ ನಾಯಕ ಸವಣೂರು,ಬಿದನೂರು, ಹರಪಸಹಳ್ಳಿ ಹಾಗೂ ಮರಾಠರ ವಿರೋಧವನ್ನು ಎದುರಿಸಬೇಕಾಯಿತು. ಆತನು ಮಾಯಕೊಂಡದ ಯುದ್ದದಲ್ಲಿ ಸಾವನ್ನಪ್ಪಿದ. ಆತನ ನಂತರ ಆಳಿದವನು ಎರಡನೇ ಕಸ್ತೂರಿ ರಂಗಪ್ಪ ನಾಯಕ.

**ಐದನೇ ಮದಕರಿ ನಾಯಕ (೧೭೫೫-೧೭೭೯)**

ಚಿತ್ರದುರ್ಗದ ನಾಯಕರಲ್ಲಿ ಅತ್ಯಂತ ಪ್ರಬಲ ಹಾಗೂ ಪ್ರಸಿದ್ಧನಾದವ. ಬರಮಣ್ಣ ನಾಯಕನ ಮಗ. ಈತ ಕೇವಲ ಹನ್ನೆರಡು ವರ್ಷದವನಾಗಿದ್ದಾಗ ಸಿಂಹಾಸನವನ್ನೇರಿದ. ಈತನಿಗೆ ಅನೇಕ ಸಮಸ್ಯೆಗಳು ಎದುರಾದವು. ಮೈಸೂರಿನ ಹೈದರಾಲಿಯೂ ಮರಾಠರೂ ರಾಯದುರ್ಗದ ನಾಯಕನೂ ಚಿತ್ರದುರ್ಗವನ್ನು ಕಬಳಿಸಲು ಹೊಂಚುಹಾಕುತ್ತಿದ್ದರು. ರಾಯದುರ್ಗ, ಸವಣೂರು ಹಾಗೂ ಹರಪನಹಳ್ಳಿಯ ಸೈನ್ಯ ಒಂದಾಗಿ ಎದುರಾದಾಗ ಮದಕರಿ ಅವರನ್ನು ಸೋಲಿಸಿದ.

ಮದಕರಿ ನಾಯಕನ ಪ್ರಾಬಲ್ಯವನ್ನರಿತ ಹೈದರಾಲಿ ಹಾಗೂ ಮರಾಠರೂ ಆತನ ಸ್ನೇಹಹಸ್ತವನ್ನು ಪಡೆಯಲು ನಿರ್ಧರಿಸಿದರು. ಮದಕರಿ ಹೈದರಾಲಿಗೆ ಹಲವು ಯುದ್ದಗಳಲ್ಲಿ ಪ್ರಮುಖನಾಗಿದ್ದ. ಆದರೆ ಮದಕರಿಯ ಸಾಹಸವನ್ನು ಮನಗಂಡ ಹೈದರಾಲಿ ಒಳಗೊಳಗೇ ಮತ್ಸರಪಟ್ಟುಕೊಂಡು ಅವನನ್ನು ಹತ್ತಿಕ್ಕಲು ನಿರ್ಧರಿಸಿದ.ಇದು ಮದಕರಿ ನಾಯಕನಿಗೆ ತಿಳಿದು ಆತ ಮರಾಠರ ಪಕ್ಷಕ್ಕೆ ಸೇರಿ ಅನವಟ್ಟಿಯ ಕದನದಲ್ಲಿ ಭಾಗವಹಿಸಿ ಹೈದರಾಲಿಯನ್ನು ಸೋಲಿಸಲು ಪೇಶ್ವೆ ಮಾಧವರಾಯನಿಗೆ ಸಹಾಯ ಮಾಡಿದ. ಇದರಿಂದ ರೊಚ್ಚಿಗೆದ್ದ ಹೈದರಾಲಿ ಮದಕರಿನಾಯಕನನ್ನು ಮುಗಿಸಿಬಿಡುವ ದೃಢ ನಿರ್ಧಾರ ತಳೆದ. ಆತನ ಸೈನ್ಯ ಚಿತ್ರದುರ್ಗವನ್ನು ಮುತ್ತಿತು. ಆದರೆ ಏಳು ಸುತ್ತಿನ ಅಭೇದ್ಯ ದುರ್ಗವನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸ್ವಲ್ಪ ಸಮಯದ ನಂತರ ಹೈದರಾಲಿಯ ಬೇಹುಗಾರರು ದುರ್ಗದ ಕೋಟೆಗಿರುವ ರಹಸ್ಯ ದಾರಿಯನ್ನು ಪತ್ತೆ ಮಾಡಿದರು. ಅಲ್ಲಿಯ ಕಾವಲುಗಾರ ಊಟಕ್ಕೆ ಹೋದ ಸಮಯದಲ್ಲಿ ಹೈದರಾಲಿಯ ಸೈನಿಕರು ಕಳ್ಳಗಿಂಡಿಯಿಂದ ಕೋಟೆಯನ್ನು ಪ್ರವೇಶಿಸಲು ಯತ್ನಿಸಿದರು. ಆ ಸಮಯದಲ್ಲಿ ಅಲ್ಲಿಗೆ ಬಂದ ಕಾವಲುಗಾರನ ಹೆಂಡತಿ ಓಬವ್ವ ತನ್ನ ಕೈಯಲ್ಲಿದ್ದ ಒನಕೆಯಿಂದ ಹೊಡೆದು ಅನೇಕ ಶತ್ರುಗಳನ್ನು ಕೊಂದಳು. ಇಂದಿಗೂ ದುರ್ಗದ ಕೋಟೆಯ ಪಶ್ಚಿಮದ ಮಾರ್ಗವನ್ನು ಓಬವ್ವನ ಕಿಂಡಿಯೆಂದು ಕರೆಯುತ್ತಾರೆ. ೧೭೭೯ ರಲ್ಲಿ ಹೈದರಾಲಿ ಮತ್ತೊಮ್ಮೆ ಚಿತ್ರದುರ್ಗವನ್ನು ಮುತ್ತಿದ. ಕುತಂತ್ರದಿಂದ ದುರ್ಗದ ಅನೇಕ ಸೈನಿಕರನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡ ಭೀಕರ ಯುದ್ಧ ನಡೆದು ಮದಕರಿಗೆ ಸೋಲಾಯಿತು. ಚಿತ್ರದುರ್ಗ ಹೈದರಾಲಿಯ ವಶವಾಯಿತು.ಐದನೇ ಮದಕರಿನಯಕ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ೧೭೭೮ ರಲ್ಲಿ ಕೊನೆಯುಸಿರೆಳೆಯುವುದರೊಂದಿಗೆ ಚಿತ್ರದುರ್ಗದ ನಾಯಕರ ವಂಶ ಕೊನೆಗೊಂಡಿತು.

**ಕೈಫಿಯತ್ತುಗಳು ವಿವರಿಸುವ ಚಿತ್ರದುರ್ಗದ ನಾಯಕರು**

**ಮದಕರಿ ನಾಯಕ :** "ಚಿತ್ರದುರ್ಗದ ಅರಸು ಮಧಕೆರಿನಾಯಕನು ಬಂದು ಶಕವರುಷ ೧೬೪೯ನೇ ಕ್ರೋಧಿ ಸಂ।ದಲ್ಲಿ ಶೀಮೆಯನ್ನು ಕಟ್ಟಿಕೊಂಡು ರಾಯರಪಾದದ ಕಣಿವೆ ಆಚೆಗೆಯಿರುವ ಗ್ರಾಮಗಳನ್ನು ತನ್ನ ತಲ್ಲೂಕು ಹೊಳಲಕೆರಿಯ ಶೀಮೆಗೆ ಸೇರಿಸಿಕೊಂಡುದು ವಿವರ: ತುಪ್ಪದ ಹಳ್ಳಿ ಗ್ರಾಮ, ತಾಳಿಕಟ ಗ್ರಾಮ, ಶಿಂಗೆನಹಳ್ಳಿ ಗ್ರಾಮ, ಕಣಿವೆಹಳ ಗ್ರಾಮ, ಹೊಸಹಳಿ ಗ್ರಾಮ, ೦ ಧಪಾ

**ಬರಮಪ್ಪ ನಾಯಕ ಕಾಟನಾಯಕ :** ಶುಕ್ಲ ಸಂವತ್ಸರದಲ್ಲೂ ಬರಮಪ್ಪನಾಯಕರ ಪಟ್ಟವಾದಾಗಿ ಮಾರ್ಗಶಿರ ಮಸದಲ್ಲಿ ಕುಮಾರಪ್ಪನು ದುರ್ಗಕ್ಕೆ ಹೋದನು ಕಾಟನಾಯಕ ನಾಯಕತನ ಮಾಡಿ ದುರ್ಗದಿಂದ ಕಳಿಸಿ ಕೊಟ್ಟು ಮಾಘ ಶು. ೭ ಸೋಮವಾರ ಕಣುಕುಪ್ಪೆಗೆ ಪ್ರವೇಶವಾದರು.

ಧಾತು ಸಂವತ್ಸರದ ಜ್ಯೇಷ್ಠಮಾಸದಲ್ಲು ಕಾಟಮದೇವರು ಇಡಲಿಕ್ಕೆ ಒಂದು ಮನೆ, ದೊರೆಗಳು ಇರಲಿಕ್ಕೆ ಒಂದು ಮನೆ ಈ ಪ್ರಕಾರ ಎರಡು ಅರಮನೆ ಕಟ್ಟುವುದಕ್ಕೆ ಆರಂಭ ಮಾಡಿದರು. ಈ ಸಂವತ್ಸರದಲ್ಲು ಕಟ್ಟಿದರು. ಈ ಅರಮನೆ ಮುಂದಣ ಬಾಗಿಲು ಮರದ ಬಗಿಲು ಇದ್ದಕಾರಣ. ಈ ಬಾಗಲ ಮುಂದೆ ಹೊಂಡ ಮಾಡಿಸಬೇಕು ಎಂದು ಆ ಸ್ಥಳ ಬಿಡಿಸಿ ಈಚೆಗೆ ಮುಡ ಗಡಿಗೆ ಕಲ್ಲುಬಾಗಿಲು ಮಾಡಿಸಿದ(ನು) ಅರಮನೇ ಮುಂದೆ ಸದರ ಚಾವಡಿಯನ್ನು ಕಟ್ಟಿದರು. ಕಲ್ಲು ಬಾಗಲಿಗೆ ಗಾರೇ ಹಾಕಿಸಿ, ಬಗಿಲು ಮಡಿಸಿದ, ಈ ಸಂವತ್ಸರದ ಮಾಘ ಮಾಸದಲ್ಲು ದುರ್ಗದಿಂದ ರಜಶ್ರೀಗಳು ಕೊಮಾರರೂ ಕುಟುಂಬ ಸಹಾ ಸಂಗಡ ಫವುಜು ಸಹಿತವಾಗಿ ಕಾಟದೇವರು ಉಚ್ಚಂಗಿದೇವರು ಉಚ್ಚಂಗಿದುರ್ಗದಲ್ಲಿ ಇದ್ದ ಕಾರಣ. ಇಲ್ಲಿಂದಾಲೆ ಊರು ಹೊರೆಗೆ ಬಿಳಜೇ (ಜೋ?) ಡು ಮಾರ್ಗದಲ್ಲಿ ಆಲದ ಮರದ ಬಳಿಯ ಹೋಗಿ ಎದುರುಗೊಂಡು, ಪೌರ್ನಮಿ ದಿವಸ ಕಾಳು ಹೊಯಿಸಿ, ಪಾಡ್ಯದ ದಿವಸ ರಾತ್ರಿಗೆ ಬೇವು ಉಟ್ಟು, ಬಿದಿಗೆ ದಿವಸ ಹೊಂಡದ ಗಂಗಾದೇವಿ ಮಾಡಿಸಿ, ತದಿಗೆ ದಿವಸ ಜೋಗುಲಾಡಿ. ರಾತ್ರಿಗೆ ಸಿಡಿ ಸಹಿತವಾಗಿ ಮಾಡಿದರು. ಸಿಡೀಕಂಬಾ ದುರ್ಗದಿಂದ ತರಿಸಿದರು. ಕಾಟನಾಯಕನು ರಾಜಶ್ರೀ ಬರಮಪ್ಪನಾಯಕನ್ನ ಕರಕೊಂಡು ಗುಡ್ಡಗಳು ಕೊರಸಿ ಗಾರೆ ಬಾಗಿಲ ಮುಂದೆ ಒಂದುಹೊಂಡ ಹುಟ್ಟಿಸಿ (ಹೊಡಸ?) ಬೇಕು. ಇದರ ಕೆಳಗೆ ಪೇಟೆ ಕಟ್ಟಿಸಬೇಕು ಎಂದು ಕಾಟನಾಯಕನು ಹೇಳಿದಲ್ಲಿ ಬರಮಪ್ಪನಾಯಕನು ಅಪ್ಪಣೆ ಕೊಟ್ಟರು. ಈ ಮಾಘ ಬ ೭ ದಿವಸ ದುರ್ಗಕ್ಕೆ ಹೋದರು ಈ ಪಾಲ್ಗುಣ ಶು ೫ ದಿವಸ ಶುಕ್ರವರ ಹೊಂಡ ತೆಗೆಸುವುದಕ್ಕೆ ಆರಂಭ ಮಾಡಿದರು. ವಡ್ಡರಿಗೆ ವೀಳ್ಯವನ್ನೂ ಕೊಟ್ಟರು.

ಈಶ್ವರ ಸಂವತ್ಸರದಲ್ಲು ಪೇಟೆ ಮನೆಗಳು ಕಟ್ಟಿದರು. ಸೆಟ್ಟಿ ಗುರಪ್ಪನ ಕಾಟನಾಯಕನು ದುರ್ಗಕ್ಕೆ ಕಳಹಿಸಿ. ಸೆಟ್ಟತನಕ್ಕೆ ಕೊಡಸಬೇಕು ಎಂದು ಬಿನ್ನವತ್ತಳೆ ಬರೆದುಕೊಂಡು ಕಾರಣ. ಗುರಪ್ಪಗೆ ಸೆಟ್ಟಿತನಕ್ಕೆ ಉಡುಗೊರೆ ಕೊಟ್ಟು ಕಳುಹಿಸಿ ಕೊಟ್ಟರು. ಈ ಶ್ರಾವಣ ಮಾಸದಲ್ಲು ಗುರಪ್ಪನು ಬಂದನು.

ಬಹುಧಾನ್ಯ ಸಂವತ್ಸರದಲ್ಲು ಕಾಟನಾಯಕನ ಕೆರೆ ಕಟ್ಟಿದರು. ಪ್ರಮದೀಚ ಸಂವತ್ಸರದಲ್ಲು ಕಾಟನಾಯಕನ ತಂದೆ ಜಂಪಣ್ಣನ ಹೆಸರಿನಲ್ಲು ಜಂಪಣ್ಣಗೆ ನಾಯಕತನ ಆಯಿತು. ಈತ ಮಾಡಿಸಿದಂತಾ ಕೆಲಸ ವಿಷು ಸಂವತ್ಸರದಲ್ಲು ಓಬನ ಕೆರೆ ಕಟ್ಟಿಸಿ ತೋಪು ಹಾಕಿಸಿದನು.

ಶಾಲಿವಾಹನ ಶಕ ವರ್ಷಂಗಳು ೧೯೧೩ನೇ ಅಂಗೀರಸ ಸಂವತ್ಸರದಲ್ಲು ಚಿಕ್ಕಬರಮಪ್ಪನಯಕಗೆ ಕಣುಕುಪ್ಪೆ ದೊರೆತನಕ್ಕೆ ಪಟ್ಟಾಕಟ್ಟಿ ದುರ್ಗದಿಂದಾ ಕಳುಹಿಸಿಕೊಟ್ಟರು. ಪಾಲಕಿ ಕೊಟ್ಟು ಕಾಲುಮಂದಿ ಮೂರು ಸಾವಿರ,ಕುದುರೆ ನೂರು,ಆನೆ,ನಿಶಾನೆ,ನಗಾರಿ ಸಹ ಕೊಟ್ಟು ಬರಮಪ್ಪ ನಾಯಕರವರು ಕಳುಹಿಸಿಕೊಟ್ಟರು.

ಯುವ ಸಂವತ್ಸರದ ಭಾ್ರದಪದ ಮಾಸದಲ್ಲು ಈ ಬರಮಪ್ಪನಾಯಕನಿಗೆ ಕಿವಿ ಕಿವುಡು ಬಿದ್ದ ಕಾರಣ ದೊರೆತನಕ್ಕೆ ಸಲ್ಲದು ಎಂದು ಹೊಸದುರ್ಗಕ್ಕೆ ನಾಯಕತನಕ್ಕೆ ಹಾಕಿದರು. ಕಾಟನಾಯಕರ ಮಗ ಕಿರೇ ಜಂಪಣ್ಣನಾಯಕರನ್ನ ನಾಯಕತ್ವಕ್ಕೆ ಇಟ್ಟರು.ಕೀಲಕ ಸಂವತ್ಸರದಲ್ಲು, ಆರಮನೆ ಬಳಿಯಣ ಪಿರಂಗಿ ಮಾಡಿಸಿದನು. ಈ ಪಿರಂಗಿ ಮಾಡಿದವನು ತೆಲುಗ ಕಮ್ಮಾರ ಗುರುವಯ್ಯ ಎಂಬವನು ಮಾಡಿದ.ಕಾಟಮಲಿಂಗಾ ಎಂಬೋ ಹೆಸರ ಇಟ್ಟರು. ಪ್ರಜೋತ್ಪತ್ತಿ ಸಂವತ್ಸರದಲ್ಲು ಕಮ್ಮಾರ ಗುರುವಯ್ಯ ಎಂಬವನು ಮಾಡಿದ. ಕಾಟಮಲಿಂಗಾ ಎಂಬೊ ಹೆಸರು ಇಟ್ಟರು. ಪ್ರಜೋತ್ಪತ್ತಿ ಸಂವತ್ಸರದಲ್ಲು ಕಮ್ಮಾರ ದೇವಗಾ ಹಾವುಗ ಸಹ ತೋಪು ಒಂದು ಮಾಡಿದರು.ಉಚ್ಚಂಗಿ ಎಂಬೋ ಹೆಸರು ಇಟ್ಟರು."[೧೦೪]

**ಭರಮಣ್ಣ ನಾಯಕ**

"ಶಕೆ ೧೫೭೫ ವಿಜಯ ಸಂವತ್ಸರದಲು ಚಿತ್ರದುರ್ಗದ ಭರಮಣ್ಣನಾಯಕನು ತನ್ನ ಮಗಳನು ಯೀ ತರಿಕೆರಿ ಸಂವತ್ತಾನಕರ ಮನಿಗೆ ಕೊಟ್ಟು ಮದುವೆ ಮಾಡಿದಾಗ್ಯೆ. ಹೆಣ್ಣಿಗೆ ಬಳವಳಿಯಾಗಿ ಕೊಟ್ಟದು, ಹಿರಿಯೂರುl ನಾಡು, ವಕಲಗೇರಿ ನಾಡು, ಕುಂಕನಡುವಿನ ನಾಡು.

**ಯಗಟು ನಾಡು ಹುಟ್ಟಿದ ವಿವರ:** ಆದಿಯಲ್ಲಿ ಪುರ ನಾಡಿನ ವಳಗಣ ಅರಿಯನತೋ (>ಪೊ) ಳಲ ಗ್ರಾಮಕ್ಕೆ ವಂದು ಗುಂಡಿನ ಯೆಶಿಕೆಯಲ್ಲು ವೇದಾವತಿ ಯಂಬ ನದಿಯು ಪ್ರವಾಹವಾಗಿ ಯಿರುವುದರಿಂದ, ಯೀ ನದಿ ಹುಟ್ಟಿದ ವಿವರಾ: ಚಂದ್ರದ್ರೋಣ ಪರ್ವತಕ್ಕೆ ಪ್ರತಿನಾಮವಾದ ಗಾಳಿಮುಜೆ ಹಬಿಗೆಯಲ್ಲು ವೃದ್ಧವಿಶಿ

ಪೂರ್ವಾಭಿಮುಖವಾಗಿ ಸಕರ್ರ್ರೆ.... ದ ಶಿತನಿರಾಯನು ಮದಗಜಕೆರೆ ಹೊಕ್ಕು ಮುಂದ ಕಡುರ್ರೂ ಬಳಿ ಯೆಣತಂಗಲಿಯಂಬ ಗ್ರಾಮದ ಬಳಿಯ ಹಾದು ಯೆಗಟಿ ವಳತಾ . .ಮಲ್ಲದೇವಿಯಂಬ ಬಳಿಯಲ್ಲಿ ಬರುವುದರಿಂದಾ ಸಿಹಿತೀರ್ಥಯಂಬುದಾಗಿ ಆಗಿ ಮುಂದೆ ಯಗಟಿ ಕೋಟೆಗೆ ವುತ್ತರವಾಗಿ ಈಶ್ವರ ದೇವಸ್ತಾನದ ದಕ್ಷಿಣೆ ಪೂರ್ವವಾಹಿನಿಯಾಗಿ ಹರಿಯುವ."[೧೧೫]

**ಓಬಣ್ಣನಾಯಕ, ಚಿಕ್ಕಣ್ಣ ನಾಯಕ :** "ಶಾಲಿವಾಹನ ಶಕವರ್ಷಂಗಳು ೧೫೨೬ನೇ ಪ್ರಮಾಥೀಚ ಸಂವತ್ಸರದಲ್ಲು ಗಡದ ಮೆದಕೇರಿ ನಾಯಕನ ದೊರೆತನ ಈತನ ಸಾಕುಮಗ ಓಬಣ್ಣನಾಯಕ ಈ ಮದಕರಿನಾಯಕನ ತಮ್ಮ ಹಿರೇಕೊಮಾರಪ್ಪ ಈತನ ಮಗ ಚಿಕ್ಕಣ್ಣ ನಾಯಕ ಸಹ ಈ ಪ್ರಕಾರ ದೊರೆತನ ಮಾಡಿಕೊಂಡು ಇದ್ದಲ್ಲಿ ಮೆದಕೇರಿ ನಾಯಕರು ಮೃತವಾದ ಕಾರಣ ಈತನ ಸಾಕುಮಗ ಓಬಣ್ಣನಾಯಕಗೆ ಪಟ್ಟವಾಯಿತು. ಆ ಓಬಣ್ಣನಾಯಕನಿಗೆ ದೊರೆತನ ಆಗ ಗುರಿಕಾರರಿಗೆ, ಓಲೇಕಾರರಿಗೆ ಸಹ ಉಡುಗೊರೆ ಬಹುಮಾನ ಮಾಡದ ಕಾರಣ ಓಬಣ್ಣನಾಯಕನ್ನ ತಲೆ ಹೊಡೆದರು. ಈ ಸಮಾಚಾರವನ್ನು ಈ ಕುಮಾರಪ್ಪ ಚಿಕ್ಕನಾಯಕ ಸಹ ಕೇಳಿ ತಮಗೆ ಏನು ಬಂದೀತೋ ಎಂದು ರಾತ್ರಿ ವೇಳೆಯಲ್ಲಿ ಸ್ಥಳ ಬಿಟ್ಟು ಹೋದರು. ಇದೇ ಅವರ ಅವಿವೇಕವಾಯಿತು. ಮುಂದೆ ದೊರೆತನಕ್ಕೆ ಯಾರು ಎಂಬುದಾಗಿ ಪಾರುಪತ್ತೆಗಾರು ಲಕ್ಷ್ಮಣನಾಯಕವಾಡಿಗಳು ಗುರಿಕಾರರೂ ಹಿರಿಯರು ಸ್ಥಳಕ್ಕೆ ಕರೆಸಿ ಚಾವಡಿಯಲ್ಲಿ ಕುಳಿತುಕೊಂಡು. ಮುಂದೆ ( >ಹಿಂದೆ) ಹೀಗೆ ಆದರೆ ಆಯಿತು. ಇನ್ನು ಮುಂದೆ ದುರ್ಗಕ್ಕೆ ದೊರೆತನಕ್ಕೆ ಯಾರು.? ಎಂದು ಕೇಳಿದಲ್ಲಿ ಒಬ್ಬರ(ನ್ನು) ಗೊತ್ತು ಮಾಡಿ ಎಂದು ಯಾವತ್ತೂ ಜನ ಹೇಳಿದ್ದರಿಂದ. ಮುಂದೆ ಪಟ್ಟವಾದ ದೊರೆಗೂ ಇದೇ ಪ್ರಕಾರ ಆದೀತು ಎಂದು ಹೇಳಿದ್ದರಿಂದ ಇನ್ನು ಮೇಲೆ ನಮ್ಮಿಂದ ಇಂತಾ ಕೆಲಸ ಆಗುವುದಿಲ್ಲ ವೆಂದು ನಾಯಕವಾಡಿಗಳು ಗುರಿಕಾರರು ಸಹಾ ಹೇಳಿದ್ದರಿಂದ ಸರ್ವರೂ ಆಲೋಚನೆ ಮಾಡಿ. ಹಿರೇ ಕೊಮಾರಪ್ಪನ ಮಗ ಚಿಕ್ಕಣ್ಣ ಇದಾನೆ. ಈತಗೆ ಪಟ್ಟಾ ಕಟ್ಟಿಸುವ ನಿಮಗೆ ಸಮ್ಮತವೋ ಹೇಗೆ/ ಎಂದು ಕೇಳಿದಾಗ ಸರ್ವರೂ ನಮಗೆ ಸಮ್ಮತವೆಂದು ಒಪ್ಪಿದರು. ಅಷ್ಟರಲ್ಲೇ ಕೊಮಾರಪ್ಪ ಈತನ ಮಗ ಚಿಕ್ಕಣ ಸಹ ಕುಟುಂಬ ಸಹಿತ ಬಿಟ್ಟುಕೊಟ್ಟು ಹೋದದರ ಎಂದು ಸಮಾಚಾರ ಕೇಳಿದಲ್ಲಿ ಇನ್ನೂ ಹೇಗೆ ಮಾಡಬೇಕು? ನಮಗೆ ಈನು ಬಂದಿತೋ? ಎಂದು ಹೋದರು. ಮುಂದೆ ಅವರಿಗೆ ನಂಬಿಗೆ ಭರವಸೆ ಕೊಟ್ಟು ಕರೆಸಬೇಕು ಹೊರತು ಪಟ್ಟಕ್ಕೆ ಇನ್ನು ಯಾರು ಇಲ್ಲ ಬುದ್ಧಿವಂತರು ಹೋಗಿ ಎಂದು ಲಕ್ಷ್ಮಣಸವರು ಹೇಳಿದಲ್ಲಿ ನೀನು ಯಾರಿಗೆ ಅಪ್ಪಣೆ ಕೊಡುತ್ತೀರೋ ಅವರು

ಹೋಗುತ್ತೇವೆ ಎಂದು ಹೇಳಿದರು ನಾಲ್ಕು ಕಡೆಗೂ ನಾಯಕವಾಡಿಗಳು ಗುರಿಕಾರರು ತಳವಾರರು ಸಹ ಬುದ್ಧಿವಂತರ ಕೇಳಿ ಕಳಿಸಿಕೊಟ್ಟರು. ಹರಪ್ಪನಹಳ್ಳಿ ಸೀಮೆ ಚಗಟದಲ್ಲಿ ಇದ್ದರು. ಅಲ್ಲಿಗೆ ಹೋಗಿ ಭರವಸೆ ಕೊಟ್ಟು ಕರೆದುಕೊಂಡು ಬಂದರು ಕೊಮಾರಪ್ಪನ್ನು ನಮಗೆ ನಂಬಿಗೆ ಸಲದು ಎಂದು ಮಗನ ಸಂಗಡ ಹೇಳಿದ ಕಾರಣ. ನಾನು ಹೋಗುತ್ತೇನೆ. ನೀವು ಇಲ್ಲೇ ನಿಲ್ಲಿಯೆಂದು ಹೇಳಿದ ಕಾರಣ ಕೊಪಾರಪ್ಪನವರು ಗಡೀ ಪ್ರಾಂತ್ಯದಲ್ಲಿ ನಿಂತು. ಚಿಕ್ಕಣ್ಣನಾಯಕನು ದುರ್ಗಕ್ಕೆ ಹೋದ(ನು)"[೧೦೬]

**ಹಿರೆಮದಿಕೇರಿ ನಾಯಕ, ಕಸ್ತೂರಿ ಸಂಗಪ್ಪನಯಕ, ಚಿಕ್ಕಮದಿಕೇರಿ ನಾಯಕ**

"ಯೀ ಮೊಗಲಾಯಿ ಠಾಣ್ಯ ಯಿರಲಿಕ್ಕೆ ಮೊರಳನವರು ಯೆಂಬೋ ಪಾಳೆಗಾರ್ರು ಬೇಡರು ಪ್ರಬಲವಾಗಿ., ಗುಡಿಕೋಟೆ ಜರಿಮಾಲಿ ಬಾಣರಾವಿ ಮತ್ತು ದೇಶ ವಗೈರೆ ಠಾಣ್ಯ ಹಾಕಿಕೊಂಡು ಮರಳೆನವರು ಆಳಿದರು ಪುನಹಾ ಆನೆಗೊಂದಿರಾಯ ಪ್ರಬಲವಾಗಿ ತಿಮ್ಮಪ್ಪನವರು ರಾಜ್ಯಸಾಧನೆ ಮಾಡಿಕ್ಕೊಂಡು ವಡ್ಡು ಬಾಣರಾವಿ ಶೀಮಿ ಸಹಾ ಸಾಧಿಸಿಕೊಂಡು ಆಳಿದರು. ಯೀ ಪ್ರಕಾರ ಯಿಂನ್ನು ಕೆಲವು ದಂಡು ಕೂಡಿಕೊಂಡು ಸಂತೆಬೆನ್ನೂರಿಗೆ ಯರಡು ತಿಂಗಳುವೆ ೧ ಹರ್ಚ ಹಾಕಿ, ಯುದ್ದಾಮಾಡಿದ್ದಾಗ್ಯೂ ಕೋಟೆ ಬಾರದೆ ಯಿದ್ದದರಿಂದಾ ಬಿದನೂರೂರಿಂದ ಅರಸುಗಳ ಹಿಲಾಲಿ ಮೊತ್ತಿಖಾನ ಮುರಾರಿರಾಯಗೆ ಸಹಾ ಚಉಕಾ (ತಾ)ಯಿ ಮುಕರೂರ್ರು ಮಾಡಿಕೊಂಡು ಬಿದನೂರವರೆಗೆ ಮಾಯಿಕ್ಕೊಂಡ ಕೆಲಸವಿಲ್ಲಾ. ದುರ್ಗದವರಿಗೆ ಸಂತೆಬೆನ್ನೂರು ಕೆಲಸವಿಲ್ಲಾ ಯಂಬುದಾಗಿ ತ್ತಾಹಬಂದಿ ಮಾಡಿ ಬಿಟ್ಟು ತಂಮ್ಮ ದಂಡು ತ್ತೆಗೆದುಕೊಂಡು ಪುನಹ ಸ್ಥಳಕ್ಕೆ ಹೋದರೂ ೪೬ ವರುಷ"[೧೦೭]

**ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ (೧೭೬೧-೧೭೯೯)**

ಹದಿನೆಂಟನೇ ಶತಮಾನದ ಉತ್ತರಾರ್ಧ ಕರ್ನಾಟಕದ ರಾಜಕೀಯ ರಂಗದ ಸಂಘರ್ಷದ ಕಾಲ. ಷಾಹಿ ರಾಜ್ಯಗಳು ಮೊಗಲರ ಆಕ್ರಮಣಕ್ಕೆ ಬಲಿಯಾಗಿದ್ದವು. ಔರಂಗಜೇಬನ ನಂತರ ದುರ್ಬಲರಾದ ಮೊಗಲರೂ ಮೂರನೇ ಪಾನೀಪತ್ ಯುದ್ದದಲ್ಲಿ ನೆಲಕಚ್ಚಿದ ಮರಾಠರೂ ದಕ್ಷಿಣದಲ್ಲಿ ತಮ್ಮ ಹಿಡಿತವನ್ನು ಕಳೆದುಕೊಂಡಿದ್ದರು. ಇತ್ತ ಮೈಸೂರಿನ ಒಡೆಯರು ದುರ್ಬಲರಾಗಿ ರಾಜ್ಯ ಅಪಾಯದ ಅಂಚಿನಲ್ಲಿತ್ತು. ಇಂತಹ ಸಂದಿಗ್ದ ಪರಿಸ್ಥಿಯಲ್ಲಿ ಹೈದರ್ ಆಲಿ ಮೈಸೂರಿನ ರಾಜಕೀಯ ರಂಗವನ್ನು ಪ್ರವೇಶಿಸಿದ ಹಂತ ಹಂತವಾಗಿ ಮೇಲೇರಿ ಮೈಸೂರಿನ

ಸರ್ವಾಧಿಕಾರಿಯಾದ ಆತನ ನಂತರ ಅವನ ಮಗ ಟಿಪ್ಪು ಅದೇ ರೀತಿ ಅಧಿಕಾರವನ್ನು ನಡೆಸಿದ ಅವರ ಆಳ್ವಿಕೆ ಕರ್ನಾಟಕದ ಇರಿಹಾಸದಲ್ಲಿ ತನ್ನದೇ ಸ್ಥಾನ ಪಡೆದುಕೊಂಡಿದೆ.

**ಹೈದರ್ ಆಲಿ(೧೭೬೧-೧೭೮೨)**

ಹೈದರ್ ಆಲಿಯ ಪೂರ್ವಜರು ಪಂಜಾಬದಿಂದ ಗುಲ್ಬರ್ಗಕ್ಕೆ ವಲಸೆ ಬಂದವರು. ಹೈದರನ ತಂದೆ ಫತೇ ಮಹಮದ್ ಸಿರಾದ ನವಾಬನ ಸೈನ್ಯದಲ್ಲಿ ಸೈನಿಕನಾಗಿದ್ದ. ಕೋಲಾರ ಜಿಲ್ಲೆಯ ಬೂದಿಕೋಟೆಯಲ್ಲಿ ೧೭೨೧ರಲ್ಲಿ ಹೈದರನ ಜನನವಾಯಿತು ಆತನ ಭಾಲ್ಯದ ದಿನಗಳು ಬಹಳ ಕಷ್ಟದಿಂದ ಕೂಡಿದ್ದವು. ಕೇವಲ ಏಳನೇ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡು ಈತ ಬೆಂಗಳೂರಿಗೆ ಬಂದು ತನ್ನ ಸೋದರಮಾವ ಇಬ್ರಾಹಿಮನ ಆಶ್ರಯದಲ್ಲಿದ್ದ. ಪ್ರಾಪ್ತ ವಯಸ್ಕನಾದೊಡನೆ ಮೈಸೂರಿನ ಸೈನ್ಯವನ್ನು ಸೇರಿಕೊಂಡ. ೧೭೪೯ರಲ್ಲಿ ಮೈಸೂರಿನ ಸೈನ್ಯ ದೇವನಹಳ್ಳಿಯನ್ನು ಮುತ್ತಿದಾಗ ಹೈದರನು ತನ್ನ ಧೈರ್ಯ ಮತ್ತು ಯುದ್ದ ಕುಶಲತೆಯನ್ನು ಪ್ರದರ್ಶಿಸಿದ. ಇದನ್ನು ಕಂಡು ಮೆಚ್ಚಿದ ದಳವಾಯಿ ನಂಜರಾಜ ಹೈದರನನ್ನು ಸೈನ್ಯದ ತುಕಡಿಯೊಂದಕ್ಕೆ ನಾಯಕನಾನ್ನಾಗಿ ನೇಮಿಸಿದ. ೧೭೫೧ರಲ್ಲಿ ಮೈಸೂರಿನ ಸೈನ್ಯ ತಿರುಚಿನಾಪಳ್ಳಿಯ ಮೇಲೆ ದಾಳಿ ಮಾಡಿತು. ಈ ಯುದ್ಧದಲ್ಲಿ ನಂಜರಾಜ ಸೋತರೂ ಹೈದರನಿಗೆ ಆ ಯುದ್ಧದಲ್ಲಿ ಭಾಗವಹಿಸಿದ್ದ ಇಂಗ್ಲೀಷರ ಮತ್ತು ಫ್ರೆಂಚರ ಯುದ್ಧದ ತಾಂತ್ರಿಕತೆಯನ್ನು ತಿಳಿದುಕೊಳ್ಳುವ ಅವಕಾಶ ಸಿಕ್ಕಿತು. ಹೈದರನ ಸಾಮರ್ಥ್ಯಕ್ಕೆ ಮೆಚ್ಚಿದ ಚಿಕ್ಕರಾಜ ಒಡೆಯ ಆತನನ್ನು ದಿಂಡಿಗಲ್ಲಿನ ಫೌಜುದಾರನನ್ನಾಗಿ ನೇಮಿಸಿದ (೧೭೭೫) ಯುದ್ಧಗಳಲ್ಲಿ ಪ್ರಾಪ್ತವಾದ ಹಣ ಹಾಗೂ ಬಂಗಾರಗಳಿಂದ ಹೈದರನು ಆರ್ಥಿಕವಾಗಿ ಪ್ರಬಲನಾದ, ತನ್ನದೇ ೫೦೦ ಮಂದಿ ಸಿಪಾಯಿಗಳ ಒಂದು ಪಡೆಯನ್ನು ರಚಿಸಿಕೊಂಡ. ಮರಾಠರು ಮೈಸೂರನ್ನು ಮುತ್ತಿದಾಗ ಹೈದರನು ಅವರನ್ನು ಹಿಮ್ಮಟ್ಟಿಸಿದ. ಒಡೆಯರು ಆತನಿಗೆ "ಫತೆ ಹೈದರ್" ಬಿರುದು ನೀಡಿ ಗೌರವಿಸಿದರು. ಈ ಮಧ್ಯೆ ಮೈಸೂರಿನ ಖಜಾನೆ ಖಾಲಿಯಾಗಿತ್ತು ಸೈನಿಕರ ವೇತನ ಕೊಡುವುದಕ್ಕೂ ಹಣವಿರಲಿಲ್ಲ ಸೈನಿಕರು ದಂಗೆಯೇಳುವ ಸನ್ನಾಹದಲ್ಲಿದ್ದರು ಆಗ ಹೈದರನು ಮೈಸೂರಿಗೆ ಧಾವಿಸಿ ಸೈನಿಕರಿಗೆ ಸಂಬಳ ನೀಡಿ ಅವರ ಒಲವನ್ನು ಗಳಿಸಿದ. ಅಸಮರ್ಥನಾದ ನಂಜರಾಜನನ್ನು ನಿವೃತ್ತಿಗೊಳಿಸಿದ. ತನ್ನ ವಿರುದ್ಧ ಪಿತೂರಿ ನಡೆಸಿದ ದಿವಾನ ಖಂಡೇರಾಯನನ್ನು ಬಂಧಿಸಿದ. ೧೭೬೧ರಿಂದ ಹೈದರನು ಮೈಸೂರನ್ನು ಸರ್ವಾಧಿಕಾರಿಯಂತೆ ಆಳಿದ. ಆದರೆ ಆತ ಸಿಂಹಾಸನವನ್ನೇರಲಿಲ್ಲ. ಒಡೆಯರನ್ನು ಪದಚ್ಯುತಿಗೊಳಿಸಲಿಲ್ಲ ತನ್ನನ್ನೂ

ರಾಜ್ಯದ ಕಾರ್ಯಕರ್ತ ಅಥವಾ ರಾಜಪ್ರತಿನಿಧಿಯೆಂದು ಕರೆದುಕೊಂಡು ಆಡಳಿತ ನಡೆಸಿದ.

ಆಂಗ್ಲೋ ಮೈಸೂರು ಯುದ್ಧಗಳ ವಿಶ್ಲೇಷಣೆ : ಮೂರನೇ ಪಾಣೀಪತ್ ಕದನ ಮರಾಠರಿಗೆ ಬಲವಾದ ಹೊಡೆತನವನ್ನು ಕೊಟ್ಟಿತು. ಈ ಸಂಧರ್ಭವನ್ನು ಉಪಯೋಗಿಸಿಕೊಂಡು ಹೈದರನು ಮೈಸೂರು ರಾಜ್ಯವನ್ನು ಉತ್ತರ ದಿಕ್ಕಿನೆಡೆಗೆ ವಿಸ್ತರಿಸಿದ, ಸಿರಾ, ಬಿದನೂರು, ಸುಂದಾ ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡ. ಆದರೆ ಮರಾಠರು ಪ್ರಬಲ ಪ್ರತಿಹೋರಾಟವನ್ನು ನೀಡಿದರು. ಆನವಟ್ಟಿಯ ಯುದ್ಧದಲ್ಲಿ (೧೭೬೪) ಪೇಶ್ವೆ ಮಾಧವರಾಯ ಹೈದರನನ್ನು ಸೋಲಿಸಿದ. ಅನಂತಪುರದ ಒಪ್ಪಂದದ ಪ್ರಕಾರ ಹೈದರ್ ಪೇಶ್ವೆ ಮೂವತ್ತೆರಡು ಲಕ್ಷ ರೂಪಾಯಿಗಳನ್ನು ಕೊಡಬೇಕಾಯಿತು. ಅಲ್ಲದೇ ಗುತ್ತಿಗೆಯ ಮುರಾರಿರಾಯನು ಹಾಗೂ ಸವಣೂರಿನ ನವಾಬನ ಪ್ರದೇಶವನ್ನು ಹಿಂತಿರುಗಿಸಬೇಕಾಯಿತು. ೧೭೬೭-೧೭೭೧ರಲ್ಲಿ ಮತ್ತೆ ಮರಾಠರು ಹೈದರನನ್ನು ಸೋಲಿಸಿದರು. ಈ ಮಧ್ಯೆ ಪೇಶ್ವೆ ಮಾಧರರಾಯರು ಕಾಲವಾಗಿ ಮರಾಠರಲ್ಲಿ ಅನಾಯಕತ್ವ ಉಂಟಾಯಿತು ಈ ಸಂದರ್ಭವನ್ನು ಗೆದ್ದುಕೊಂಡ ಕೊಡಗು ಮತ್ತು ಚಿತ್ರದುರ್ಗಗಳೂ ಆತನ ವಶವಾದವು. ತಮಿಳುನಾಡು ಮತ್ತು ಕೇರಳದ ಅನೇಕ ಪ್ರದೇಶಗಳಲ್ಲಿ ಹೈದರನು ತನ್ನ ಅಧಿಕಾರವನ್ನು ಸ್ಥಾಪಿಸಿದ.

ಮೊದಲನೇ ಆಂಗ್ಲೋ ಮೈಸುರು ಯುದ್ದ(೧೭೬೭-೧೭೬೯) : ಹೈದರನಿಗೂ ಆರ್ಕಾಟಿನ ನವಾನ ಮಹಮ್ಮದ್ ಆಲಿಗೂ ವೈಮನಸ್ಸಿತ್ತು. ಮಹಮ್ಮದ್ ಆಲಿ ಬ್ರಿಟಿಷರ ಸ್ನೇಹಿತನಾಗಿದ್ದ. ಆತನಿಂದಾಗಿ ಹೈದರಾಲಿ ಮತ್ತು ಬ್ರಿಟಿಷರ ನಡುವಿನ ಬಂಬಂಧ ಹಾಳಾಯಿತು. ಹೈದರನು ಮಲಬಾರಿನ ರಾಜರನ್ನು ಸೋಲಿಸಿದ್ದು ಮತ್ತು ಬ್ರಿಟಿಷರ ಕೆಲವು ವಿರೋಧಿಗಳಿಗೆ ಆಶ್ರಯವಿತ್ತುದು ಬ್ರಿಟಿಷರ ಅಸಮಾಧಾನಕ್ಕೆ ಕಾರಣವಾಯಿತು. ಹೈದರನಿಂದ ಅಪಾಯವನ್ನು ನಿರೀಕ್ಷಿಸಿದ ಬ್ರಿಟಿಷರು ಹೈದರಾಬಾದಿನ ನಿಜಾಮ ಮತ್ತು ಮರಾಠರೊಂದಿಗೆ ಸೇರಿ ತ್ರಿಪಕ್ಷೀಯ ಕೂಟವನ್ನು ರಚಿಸಿದರು ಇದನ್ನು ತಿಳಿದ ಹೈದರನು ಮರಾಠರಿಗೆ ಹಣ ನೀಡಿ. ಅವರು ಒಕ್ಕೂಟದಿಂದ ನಿರ್ಗಮಿಸುವಂತೆ ಮಾಡಿದ. ನಿಜಾಮಾನನ್ನೆ ತನ್ನ ಪಕ್ಷಕ್ಕೆ ಸೆಳೆದುಕೊಂಡ. ಹೈದರ್ ಮತ್ತು ನಿಜಾಮನ ಸೈನ್ಯಗಳು ೧೭೬೭ ರಲ್ಲಿ ಅರ್ಕಾಟನ್ನು ಆಕ್ರಮಿಸಿದವು. ಇದರೊಂದಿಗೆ ಮೊದಲನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಬ್ರಿಟಿಷರಿಗೆ ಜಯ ದೊರೆಯಿತು. ನಿಜಾಮನು ಅವರೊಡನೆ ಒಪ್ಪಂದ ಮಾಡಿಕೊಂಡ. ಆದರೆ ಸೋಲಿನಿಂದ ದೃತಿಗೆಡದ ಹೈದರ್ ಬಿರುಸಿನಿಂದ

ಹೋರಾಡುತ್ತಾ ಮದ್ರಾಸಿನವರಿಗೆ ಸಾಗಿದ. ಬ್ರಿಟಿಷರು ಹೆದರಿ ಹೈದರೊಂದಿಗೆ ಒಪ್ಪಂದ ಮಾಡಿಕೊಂಡರು.

**ಎರಡನೇ ಆಂಗ್ಲೋ ಮೈಸೂರು ಯುದ್ಧ (೧೭೮೦-೧೭೮೪)**

೧೭೮೦ ರಲ್ಲಿ ಹೈದರನು ಎರಡನೇ ಆಂಗ್ಲೋ-ಮೈಸೂರು ಯುದ್ಧವನ್ನು ಆರಂಭಿಸಿದ. ಬಿರುಗಾಳಿಯಂತೆ ಮುನ್ನುಗ್ಗಿ ಅರ್ಕಾಟನ್ನು ಗೆದ್ದು ಕರ್ನಲ್ ಬೇಲಿಯನ್ನು ಸೆರೆಹಿಡಿದ. ಬ್ರಿಟಿಷ್ ಸೇನಾನಿ ಮನ್ರೋ ಓಡಿಹೋದ . ಪೋರ್ಟನೋವ ಬಳಿ ನಡೆದ ಯುದ್ಧದಲ್ಲಿ ಹೈದರನಿಗೆ ಸೋಲಾಯಿತು. ಆದರೆ ಎದೆಗುಂದದೆ ಹೋರಾಟವನ್ನು ಮುಂದುವರಿಸಿದ. ಆದರೆ ಬೆನ್ನಫಣಿ ರೋಗದಿಂದ ಬಳಲುತ್ತಿದ್ದ ಹೈದರನು ಯುದ್ಧದ ಮಧ್ಯದಲ್ಲಿ ೧೭೮೨ ಡಿಸೆಂಬರ್ ೭ ರಂದು ಮೃತನಾದ. ಅನಂತರ ಟಿಪ್ಪು ಯುದ್ಧವನ್ನು ಮುಂದುವರಿಸಿದ.

**ಹೈದರನ ವ್ಯಕ್ತಿತ್ವ :** ಹೈದರನ ವ್ಯಕ್ತಿತ್ವ ಅಸಾಧಾರಣವಾಗಿತ್ತು. ಆತ ಪ್ರತಿಭೆ ಮತ್ತು ಸಾಹಸಗಳ ಸಂಗಮವಾಗಿದ್ದ. ಸಾಮಾನ್ಯ ಸೈನಿಕನಾಗಿದ್ದ. ಸಾಮಾನ್ಯ ಸೈನಿಕನಾಗಿದ್ದ ಆತ ಸ್ವಪ್ರಯತ್ನದಿಂದ ಮೇಲೇರಿ ಮೈಸೂರಿನ ಸರ್ವಾಧಿಕಾರಿಯಾದ. ಅವನಲ್ಲಿ ವಿಶೇಷವಾದ ಧೈರ್ಯ, ಬುದ್ಧಿಶಕ್ತಿ ಹಾಗೂ ನೆನಪಿನಶಕ್ತಿ ಇತ್ತು. ಯಾವುದೇ ಕಷ್ಟವನ್ನಾದರೂ ಸಹಿಸುವ ಶಕ್ತಯಿತ್ತು. ಆತ ಅನಕ್ಷರಸ್ಥನಾಗಿದ್ದರೂ ಸಾಕಷ್ಟು ಲೋಕಜ್ಞಾನವನ್ನು ಸಂಪಾದಿಸಿಕೊಂಡಿದ್ದ. ಅವನೊಬ್ಬ ಅಪ್ರತಿಮ ಯೋಧ ಹಾಗೂ ದಂಡನಾಯಕ. ಯುದ್ಧದ ತಂತ್ರಗಳೆಲ್ಲವನ್ನು ಬಲ್ಲವನಾದ ಆತನಿಗೆ ಐರೋಪ್ಯ ಯುದ್ಧ ತಂತ್ರದಲ್ಲಿಯೂ ಪರಿಣತಿಯಿತ್ತು. ಆತ ಮಿಂಚಿನ ಧಾಳಿಗಳಿಂದ ವೈರಿಗಳನ್ನು ಕಂಗೆಡಿಸುತ್ತಿದ್ದ. ಆತನ ರಾಜಕೀಯ ನೀತಿ ಹಾಗೂ ಯುದ್ಧಕೌಶಲಕ್ಕೆ ಬ್ರಿಟಿಷರೂ ಹೆದರುತ್ತಿದ್ದರು.

ಹೈದರನು ಉತ್ತಮ ಆಡಳಿತಗಾರನಾಗಿದ್ದ. ರಾಜ್ಯನನ್ನು ವಿಸ್ತರಿಸಿ, ಆಡಳಿತವನ್ನು ಬಿಗಿಗೊಳಿಸಿ, ಶಾಂತಿ ಸುವ್ಯವಸ್ಥೆಯನ್ನು ಕಾಪಾಡಿದ. ಸ್ಮಿತ್‌ರವರ ಪ್ರಕಾರ ಹೃದಯ ಧಾರ್ಮಿಕತೆ ಹಾಗೂ ನೈತಿಕತೆ ಇಲ್ಲದ ವ್ಯಕ್ತಿಯಾಗಿದ್ದ. ಆದರೆ ಕೆ.ಕೆ. ದತ್ತಾ ಅವರ ಪ್ರಕಾರ ಆತ ಧರ್ಮಶ್ರದ್ದೇಯುಳ್ಳವನು. ಆದರೆ ಧರ್ಮವನ್ನು ರಾಜಕೀಯದೊಂದಿಗೆ ಬೆರೆಸುತ್ತಿರಲಿಲ್ಲ. ಎಲ್ಲರಿಗೂ ಅವರವರ ಧರ್ಮ ಮತ್ತು ಆಚಾರವನ್ನು ಅನುಸರಿಸಲು ಅವಕಾಶ ಕೊಟ್ಟಿದ್ದ. ಯಲಹಂಕ ಪ್ರಭುಗಳ ಮಣ್ಣಿನ ಕೋಟೆಯನ್ನು ಕೆಡವಿ ಬೆಂಗಳೂರಿನ ಕೋಟೆ, ದರಿಯಾ ದೌಲತ್, ಅರಮನೆ ಹಾಗೂ ನಾಡಪ್ರಭು ಕೆಂಪೆಗೌಡರ ಕಾಲದ

ಅರಮನೆ ತೋಟವನ್ನು ವಿಸ್ತರಿಸಿ ಲಾಲ್‌ಬಾಗ್ ಹೂತೋಟಗಳು ಅವನಿಂದ ನಿರ್ಮಿತವಾದವು. ಒಟ್ಟಿನಲ್ಲಿ ಹೈದರ್ ಇತಿಹಾಸದಲ್ಲಿ ನೆನಪಿನಲ್ಲಿಡಬೇಕಾದ ವ್ಯಕ್ತಿ.

**ಟಿಪ್ಪು ಸುಲ್ತಾನ್(೧೭೮೨-೧೭೯೯)**

ಹೈದರನ ನಂತರ ಅಧಿಕಾರಕ್ಕೆ ಬಂದ ಮಗ ಟಿಪ್ಪು ಕರ್ನಾಟಕದ ಇತಿಹಾಸದಲ್ಲಿ ತನ್ನದೇ ಸ್ಥಾನ ಪಡೆದಿದ್ದಾನೆ. ಈತ ತಂದೆಯಂತೆಯೇ ಧೀರ ಪರಾಕ್ರಮಿ ಮತ್ತು ಮಹತ್ವಾಕಾಂಕ್ಷಿ, ತಂದೆ ಆರಂಭಿಸಿದ ಬ್ರಿಟಿಷರ ವಿರುದ್ಧದ ಹೋರಾಟವನ್ನು ಮುಂದುವರಿಸಿದ. ಟಿಪ್ಪು ೧೭೫೮ ರಲ್ಲಿ ಕೋಲಾರ ಜಿಲ್ಲೆಯ ದೇವನಹಳ್ಳಿಯಲ್ಲಿ ಜನಿಸಿದ. ಅನಕ್ಷರಸ್ಥನಾಗಿದ್ದ ಹೈದರ್ ತನ್ನ ಮಗನನ್ನು ವಿದ್ಯಾವಂತನನ್ನಾಗಿ ಮಾಡಿದ. ಆತನಿಗೆ ಯುದ್ಧ ವಿದ್ಯೆಯನ್ನು ಕಲಿಸಿದ. ಹದಿನಾರರ ಹರೆಯದಲ್ಲೇ ಟಿಪ್ಪು ನಿಷ್ಠಾವಂತ ಯೋಧನಾಗಿದ್ದ. ಎರಡನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಅವನ ಶೌರ್ಯ ಸಾಹಸಗಳು ಬೆಳಕಿಗೆ ಬಂದವು. ಕರ್ನಲ್ ಬೇಲಿಯನ್ನು ಸೋಲಿಸುವಲ್ಲಿ ಪ್ರಮುಖ ಪಾತ್ರವಹಿಸಿದ ಟಿಪ್ಪು ಹೈದರನ ಕರ್ನಲ್ ಬ್ರೈಟ್‌ವೇಟ್‌ನನ್ನು ಸೆರೆಹಿಡಿದ. ಮಲಬಾರಿನಲ್ಲಿ ಯುದ್ಧ ಮಾಡುತ್ತಿದ್ದ ಟಿಪ್ಪು ಹೈದರನ ಮರಣದ ವಾರ್ತೆಯನ್ನು ಕೇಳಿ ಶ್ರೀರಂಗಪಟ್ಟಣಕ್ಕೆ ಧಾವಿಸಿದ. ಕೂಡಲೇ ಬಿಟಿಷರು ಮಂಗಳೂರು ಮತ್ತು ಬಿದನೂರುಗಳನ್ನು ಆಕ್ರಮಿಸಿದರು. ಈ ಮಧ್ಯ ಒಡೆಯರ ರಾಣಿ ಟಿಪ್ಪುವಿನ ಪದಚ್ಯುತಿಗೆ ಪ್ರಯತ್ನಿಸಿದಳು. ಅದನ್ನು ನಿಷ್ಪಲಗೊಳಿಸಿ ಶೀಘ್ರ ಕಾರ್ಯಾಚರಣೆ ನಡೆಸಿ ಬಿದನೂರು, ಮಂಗಳೂರು ಮತ್ತು ಮಲಬಾರ್‌ಗಳನ್ನು ಗೆದ್ದುಕೊಂಡ. ಆತನ ಸಾಮರ್ಥ್ಯವನ್ನು ತಿಳಿದ ಬ್ರಟಿಷರು ಒಪ್ಪಂದಕ್ಕೆ ಮುಂದಾದರು. ಮಂಗಳೂರು ಒಪ್ಪಂದ(೧೭೮೪) ಎರಡನೇ ಆಂಗ್ಲೋ-ಮೈಸೂರು ಯುದ್ದವನ್ನು ಕೊನೆಗೊಳಿಸಿತ್ತು.

ಮಂಗಳೂರು ಒಪ್ಪಂದ ಟಿಪ್ಪುವಿನ ಘನತೆ ಗೌರವವನ್ನು ಹೆಚ್ಚಿಸಿತು. ಅಲ್ಲದೆ ಆತನ ಶತ್ರುಗಳಾದ ಮರಾಠರು ಹಾಗೂ ನಿಜಾಮನ ಲೆಕ್ಕಾಚಾರವನ್ನು ಬುಡಮೇಲು ಮಾಡಿತು. ಟಿಪ್ಪುವಿನ ಸೋಲು ಖಚಿತವೆಂದುಕೊಂಡಿದ್ದ. ಆದರೆ ಅವರಿಗೆ ನಿರಾಸೆಯಾಯಿತು. ಟಿಪ್ಪುವನ್ನು ಸದೆಬಡಿಯುವುದಕ್ಕಾಗಿ ಅವರು ಒಪ್ಪಂದವನ್ನು ಮಾಡಿಕೊಂಡು ಸಂದರ್ಭಕ್ಕಾಗಿ ಕಾಯುತ್ತಿದ್ದರು. ೧೭೮೫ರಲ್ಲಿ ಟಿಪ್ಪು ಬಾಕಿ ಇದ್ದ ಕಪ್ಪವನ್ನು ಪಡೆಯುವುದಕ್ಕಾಗಿ ಮರಾಠರ ನಡುವೆ ಯುದ್ಧ ಆರಂಭವಾಯಿತ್ತು. ಮರಾಠರು ಬಾದಾಮಿ ಮತ್ತು ಗಜೇಂದ್ರಗಡವನ್ನು ಆಕ್ರಮಿಸಿದರು. ಟಿಪ್ಪು ನಿಜಾಮನಿಂದ ಅದೋನಿಯನ್ನು ಕಿತ್ತುಕೊಂಡನು. ಬಹದ್ದೂರ್ ಬಂದ್‌ನ್ನು ಆಕ್ರಮಿಸಿ ಮರಾಠರು

ಒಂದಾಗಬಹುದೆಂಬ ಭಯವಿತ್ತು. ಅದಕ್ಕಾಗಿ ಮರಾಠರೊಡನೆ ಸಂಧಾನ ಮಾಡಿಕೊಂಡು ನರಗುಂದ, ಕಿತ್ತೂರು ಮತ್ತು ಬಾದಾಮಿಯನ್ನು ಅವರಿಗೆ ಬಿಟ್ಟುಕೊಟ್ಟ.

**ಮೂರನೇ ಆಂಗ್ಲೋ-ಮೈಸೂರು ಯುದ್ಧ(೧೭೯೦-೧೭೯೨)** : ಟಿಪ್ಪು ಮತ್ತು ಬ್ರಟಿಷರ ನಡುವಣ ಪರಸ್ಪರ ದ್ವೇಷ ಮತ್ತು ಅಪನಂಬಿಕೆ ಮೂರನೇ ಆಂಗ್ಲೋ - ಮೈಸೂರು ಯುದ್ಧಕ್ಕೆ ಕಾರಣವಾಯಿತು. ಬ್ರಟಿಷ್ ಗವರ್ನರ್ ಜನರಲ್ ಲಾರ್ಡ್ ಕಾರ್ನ್‌ವಾಲೀಸನು ಟಿಪ್ಪುವಿನ ಮೇಲೆ ಯುದ್ಧಕ್ಕಾಗಿ ಸಮಯ ಕಾಯುತ್ತಿದ್ದ. ೧೭೯೦ ರಲ್ಲಿ ಟಿಪ್ಪುವಿನ ತಿರುವಾಂಕೂರಿನ ಮೇಲೆ ದಾಳಿ ಮಾಡಿದ. ತಿರುವಾಂಕೂರಿನ ರಾಜ ಬ್ರಿಟಿಷರ ಆಶ್ರಯದಲ್ಲಿದ್ದುದರಿಂದ ಕಾರ್ನ್‌ವಾಲೀಸನು ಟಿಪ್ಪುವಿನ ಮೇಲೆ ಯುದ್ಧ ಸಾರಿದ. ಮರಾಠರು ಮತ್ತು ನಿಜಾಮನು ಬ್ರಿಟಿಷರ ಪಕ್ಷವನ್ನು ಸೇರಿದರು. ಶತ್ರುಗಳ ಒಕ್ಕೂಟವನ್ನು ಎದುರಿಸುವುದು ಟಿಪ್ಪುವಿಗೆ ಕಷ್ಟಸಾಧ್ಯವಾಯಿತು. ಕಾರ್ನ್‌ವಾಲೀಸ್ ಬೆಂಗಳೂರನ್ನು ಗೆದ್ದುಕೊಂಡ. ಶತ್ರುಗಳು ಶ್ರಿರಂಗಪಟ್ಟಣದ ಒಪ್ಪಂದದ ಪ್ರಕಾರ ಟಿಪ್ಪು ತನ್ನ ಅರ್ಧ ರಾಜ್ಯವನ್ನು ಬಿಟ್ಟುಕೊಡಬೇಕಾಯಿತು. ಯುದ್ಧದ ಖರ್ಚಿಗಾಗಿ ಮೂರು ಕೋಟಿ ರೂಪಾಯಿಯನ್ನು ತೆರಬೇಕಾಯಿತು. ಆ ಹಣ ಪಾವತಿಯಾಗುವವರೆಗೆ ತನ್ನ ಇಬ್ಬರು ಮಕ್ಕಳನ್ನು ಬ್ರಿಟಿಷರ ಒತ್ತೆಯಿಡಬೇಕಾಯಿತು.

**ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧ(೧೭೯೯)** : ಮೂರನೇ ಮೈಸೂರು ಯುದ್ಧದಿಂದ ಟಿಪ್ಪುವಿಗೆ ಸಹಿಸಲಾರದ ಅವಮಾನವಾಯಿತು. ಆತ ಬ್ರಿಟಿಷರನ್ನು ಭಾರತದಿಂದ ಹೊಡೆದಟ್ಟಲು ದೃಢ ಸಂಕಲ್ಪ ಮಾಡಿದ. ತನ್ನ ಸೈನ್ಯ ಮತ್ತು ಆರ್ಥಿಕ ಬಲವನ್ನು ಹೆಚ್ಚಿಸಿಕೊಂಡ. ಬ್ರಿಟಿಷರ ವಿರುದ್ದ ಸಹಾಯ ಯಾಚಿಸಲು ಕಾಬೂಲ್, ಕಾನ್ ಸ್ಟಾಂಟಿನೋಪಲ್, ಫ್ರಾನ್ಸ್‌ಗಳಿಗೆ ರಾಯಭಾರಿಗಳನ್ನು ಕಳುಹಿಸಿದ. ಬ್ರಟಿಷರು ಟಿಪ್ಪುವಿನ ಚಟುವಟಿಕೆಗಳನ್ನು ಗಮನಿಸಿ ತಾವು ಯುದ್ಧ ಸನ್ನಾಹವನ್ನು ಮಾಡಿಕೊಂಡರು. ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿ ತಾನು ಜಾರಿಗೆ ತಂದ 'ಸಹಾಯಕ ಸೈನ್ಯ ಪದ್ದತಿ'ಗೆ ಸೇರುವಂತೆ ಟಿಪ್ಪುವನ್ನು ಒತ್ತಾಯಿಸಿದ. ಫ್ರೆಂಚರನ್ನು ಮೈಸೂರು ರಾಜ್ಯದಿಂದ ಹೊರಹಾಕಬೇಕೆಂದು ಆದೇಶಿಸಿದ. ಈ ಸಲಹೆಗಳನ್ನು ಟಿಪ್ಪು ತಿರಸ್ಕರಿಸಿದಾಗ ವೆಲ್ಲೆಸ್ಲಿ ಯುದ್ಧ ಘೋಷಿಸಿದ. ಬ್ರಿಟಿಷರ, ಮರಾಠರ ಹಾಗೂ ನಿಜಾಮನ ಸೈನ್ಯವು ಮೈಸೂರಿನ ಮೇಲೆ ಧಾಳಿ ಮಾಡಿದವು. ಜನರಲ್ ಹ್ಯಾರಿಸನ್ ನಾಯಕತ್ವದಲ್ಲಿ ಬ್ರಿಟಿಷರು ಟಿಪ್ಪುವಿನ ಸೈನ್ಯವನ್ನು ಸಿದ್ದೇಶ್ವರ ಮತ್ತು ಮಳವಳ್ಳಿಯ ಕದನಗಳಲ್ಲಿ ಸೋಲಿಸಿದರು. ಶತ್ರುಗಳು ಶ್ರೀರಂಗಪಟ್ಟಣವನ್ನು ಮುತ್ತಿದರು. ಕರ್ನಲ್ ವೆಲ್ಲೆಸ್ಲಿಯ ನಾಯಕತ್ವದಲ್ಲಿ ವೈರಿಗಳು

ಶ್ರೀರಂಗಪಟ್ಟಣದ ಕೋಟೆಯನ್ನು ಉಡಾಯಿಸಿ ನಗರ ಪ್ರವೇಶಿಸಿದರು. ಓಪ್ಪು ವೀರಾವೇಷದಿಂದ ಹೋರಾಡುತ್ತಾ ಮರಣವನ್ನಪ್ಪಿದ (೧೭೯೯ ನೇ ಮೇ ೪).

**ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ಪರಿಣಾಮ**

**ಕರ್ನಾಟಕದ ವಿಭಜನೆ** : ವಿಜಯಾಶಾಲಿಗಳಾದ ಬ್ರಿಟಿಷ್, ಮರಾಠ ಮತ್ತು ನಿಜಾಮರು ಸ್ವಾಧೀನಪಡಿಸಿಕೊಂಡರು. ನಿಜಾಮನ ಪಾಲಿಗೆ ಈಗಿನ ಬಳ್ಳಾರಿ, ಅನಂತಪುರ, ಕಡಪ ಮತ್ತು ಕರ್ನೂಲು ಜಿಲ್ಲೆಗಳು ಹೋದವು (ಆದರೆ ನಿಜಾಮನು ೧೮೦೦ ರಲ್ಲಿ ತನ್ನ ರಾಜ್ಯದಲ್ಲಿ ಬ್ರಿಟಿಷ್ ಸೈನ್ಯದ ಠಾಣಕ್ಕೆ ಒಪ್ಪಿಕೊಂಡು, ತನಗೆ ದೊರೆತ ನಾಲ್ಕು ಜಿಲ್ಲೆಗಳ ಮೇಲಿನ ಹಕ್ಕನ್ನು ಬ್ರಿಟಿಷರಿಗೆ ಬಿಟ್ಟುಕೊಟ್ಟನು). ಈ ಜಿಲ್ಲೆಗಳಿಗೆ ಮುಂದೆ ವರ್ಗಪಟ್ಟ ರಾಜ್ಯ ಪ್ರದೇಶ (ceded District) ಎಂದುಹೆಸರಾಯಿತು.

ಬ್ರಿಟಿಷರೊಡನೆ ವಿಜಯ ಸೈನ್ಯದಲ್ಲಿ ಭಾಗವಹಿಸಿದ್ದ ಮರಾಠರಿಗೆ 'ಮುಂಬಯಿ ಕರ್ನಾಟಕ'ವೆಂದು ಕರೆಯಲಾದ ತುಂಗೆಯ ಉತ್ತರದ ಪ್ರದೇಶವು ಲಭಿಸಿತು. ಪಶ್ಚಿಮದ ಸಮುದ್ರತೀರ ಪ್ರದೇಶವನ್ನು ಬ್ರಿಟೀಷರೇ ಇಟ್ಟುಕೊಂಡರು. ತೀರಪ್ರದೇಶ ಲಭಿಸಿತು. ಮರಾಠರ ಅಥವಾ ಮೈಸೂರು ಒಡೆಯರ ಅಧೀನದಲ್ಲಿರುವಂತೆ ತುಂಬಾ ಎಚ್ಚರವಹಿಸಿದರು. ಫ್ರೆಂಚರಂತಹ ಸಮುದ್ರ ಸಂಚಾರಿ ಶಕ್ತಿಯೊಡನೆ ಭಾರತೀಯ ರಾಜರು ಸಂಧಾನ ಮಾಡಿಕೊಂಡು ತಮಗೆ ಎದುರು ಬೀಳ ಬಹುದಾದ ಸಂದರ್ಭವನ್ನು ತಪ್ಪಿಸುವುದೇ ಬ್ರಿಟಿಷರ ಉದ್ದೇಶವಾಗಿತ್ತು. ಆದ್ದರಿಂದ ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳನ್ನು ತಾವೇ ಆಕ್ರಮಿಸಿಕೊಂಡರು (೧೮೬೨ ರವರೆಗೆ ಕಡಲ ತೀರದ ಕನ್ನಡ ಪ್ರದೇಶವೆಲ್ಲ ಆಡಳಿತ ದೃಷ್ಟಿಯಿಂದ ಒಂದೇ ಭಾಗವಾಗಿತ್ತು.

ಆದರೆ ೧೮೬೨ ರಲ್ಲಿ ಕುಂದಾಪುರದ ಉತ್ತರಕಿರುವ ಕನ್ನಡ ನೆಲವನ್ನು ಉತ್ತರ ಕನ್ನಡವೆಂದು ವಿಭಜಿಸಿ ಅದನ್ನು ಬೊಂಬಾಯಿ ಅಧಿಪತ್ಯಕ್ಕೆ ಒಳಪಡಿಸಿತು). ಉಳಿದ ಭಾಗವನ್ನು ದಕ್ಷಿಣ ಕನ್ನಡವೆಂದು ಕರೆದು ಕನ್ನಡವೆಂದು ಕರೆದು ಮದ್ರಾಸು ಅಧಿಪತ್ಯಕ್ಕೂ ಒಳಪಡಿಸಿತು. ಇನ್ನುಳಿದ ಹಳೆಯ ಮೈಸೂರುರಾಜ್ಯದ ಭಾಗವನ್ನು ಪ್ರಾಚೀನ ರಾಜವಂಶೀಯರಿಗೆ ಪುನಃ ಸ್ವಾಧೀನ ಮಾಡಿಕೊಡಲು ಬ್ರೀಟಿಷರು ನಿರ್ಧರಿಸಿದರು.

**ಒಡೆಯರ ಪುನಃ ಸ್ಥಾಪನೆ** : ೧೭೮೨ರಲ್ಲಿಯೇ ರಾಣಿ ಲಕ್ಷ್ಮಮ್ಮಣ್ಣಿ ಕೃಷ್ಣರಾಜಒಡೆಯರರಾಣಿ) ಬ್ರೀಟಿಷರೊಡನೆಒಪ್ಪಂದ ಮಾಡಿಕೊಂಡಳು. ಬ್ರೀಟಿಷರು ಹೈದರನನ್ನು ಸೋಲಿಸಿ ಒಡೆಯರಿಗೆ ಸಿಂಹಾಸನವನ್ನು ಕೊಡುವುದಾಗಿ ವಾಗ್ದಾನ

ಮಾಡಿದ್ದರು. ಯುದ್ಧದ ಖರ್ಚಿಗಾಗಿ ರಾಣಿ ಹತ್ತು ಲಕ್ಷ ವರಹವನ್ನು ಕೊಡಲೊಪ್ಪಿದ್ಧಳು. ಈ ಒಪ್ಪಂದದ ಪ್ರಕಾರ, ಮುಮ್ಮಡಿ ಕೃಷ್ಣರಾಜಒಡೆಯರು ಗದ್ದುಗೆಯನ್ನೇರಿದರು. ಮೈಸೂರು ಸಂಸ್ಥಾನವನ್ನು ಸಹಾಯಕ ಸೈನ್ಯ ಪದ್ಧತಿಯ ವ್ಯಾಪ್ತಿಯಲ್ಲಿ ತರಲಾಯಿತು. ರಾಜರು ಕೇವಲ ಐದು ವರ್ಷದವರಾದುದರಿಂದ, ಪೂರ್ಣಯ್ಯನನ್ನು ದಿವಾನ ಮತ್ತು ಪಾಲಕನಾಗಿ ನೇಮಿಸಲಾಯಿತು. ಬ್ಯಾರಿಕ್ಲೋಸನು ಬ್ರೀಟಿಷ್ ರೆಸಿಡೆಂಟ್‌ನಾದ. ಬ್ರೀಟಿಷರು ಟಿಪ್ಪುವಿನಿಂದ ಮೈಸೂರನ್ನುಗೆದ್ದ ಗಳಿಗೆಯಿಂದ ಕರ್ನಾಟಕದ ಇತಿಹಾಸದಆಧುನಿಕ ಕಾಲ ಮೊದಲಾಯಿತೆನ್ನಬಹುದು.

**ಕೈಫಿಯತ್ತುಗಳ ವಿವರಿಸಿರುವಂತೆ ಹೈದರ್ ಅಲಿ :** "೩೫. ಯೀಚೆಗೆ ಶ್ರೀರಂಗ ಪಟ್ಟಣದಿಂದ ದೊಡ್ಡ ನವಾಬರುಚಿತ್ರಭಾನು ಸಂವತ್ಸರದ ಪುಷ್ಯಮಾಸದಲ್ಲು ನಗರವನ್ನುತೆಗೆದುಕೊಂಡು, ಯಿವರ ಸರದಾರರಾಣೋಜಿಕ್ಕರಸಾಗರವನ್ನು ಬಂದುಕಿಲ್ಲೆ ತೆಗೆದುಕೊಂಡ ಮ್ಯಾಲೆ....ಮಾಚಿಕಡೆ ಮಲ್ಲಪ್ಪರಾಯ ಮಾಮಲೆ ಸಹಾ ಯಿತ್ತದು ದಿನ ಚಿತ್ರಭಾನುಸಂವತ್ಸರದಆರಭ್ಯ ಸಿದ್ಧಾರ್ತಿ ಸಂರದಚೈತ್ರ ಬ! ೩೦ ರ ವರೆಗೆ ವರುಷ೩೬,೩೦ ೩ಕ್ಕೆ ಮಹಾರಾಷ್ಟರಠಾಣೆ ವಿರೊಧಿಕೃತ ನ ೧ ....ಶುಧ ನಿಂತ ವರುಷ ೩,೫, ೩೦,೩."[೧೦೮]

**ಟಿಪ್ಪು ಸುಲ್ತಾನ್ :** "ಚಿತ್ರಭಾನು ಸಂವತ್ಸರದ ಮಾಘ ಬ ೨ಲ್ಲೂ ಹೈದರಲ್ಲಿಖಾನೆಗೆ ಬರಾಜನದ ವೇಷಧಾರಿಸಂಗಡಹತರುತೆಗೆದುಕೊಂಡು ಬಂದು, ಯೀಗ್ಯೆ ಬರಾಜ ಮೇಲೆ ಬರದ ೩ನದಲ್ಲಿ ನಾಲ್ಕನೆಯವನು ಯಿತನು ವೀರಂಮ್ಮಾಜಿಯುತನ್ನ ಪ್ರಾಣಕೆ ತಂದದರಿಂದಾ, ಚಿತ್ರಗಲ್ಲು ಪಾಳೆಗಾರನ ಹತ್ರೆ ಕೆ[>ಹೈ]ದರನ ಸಹಾ ಸೆರಿಕೊಂಡವನು. ಯಿವನ ಹೆಸರಲ್ಲಿ ಬಿದರೂರಿಗೆ ಬರುವ ಮಾರ್ಗದಲ್ಲಿ ಸುಲಭವಾಗಿ ಗಡಿಗಳೆಲ್ಲಾ ಠಾಣೆ ಹಾಕಿಕೊಳ್ಳುತ್ತಾ ಆಮದು. ವೀರಮ್ಮಾಜಿಯುದುಷ್ಟ ಚರಿತ್ತೆಯಿಂದ ಬಹದವರು ಮೆದಕೆರೆನಾಯಕನ ಸಂಗಡಫವುಜುತೆಗೆದುಕೊಂಡು ಬರುವದಕೆ ಮೊದಲೆ ಯೀ ಸಂಸ್ಥಾನದಲ್ಲಿ ಬಹಳ ತೊಂದರೆ ಆಗಿ, ಅಸ್ವಾರಸ್ಯವಾಗಿ ಯಿತ್ತು.ಹೀಂಗ್ಗೆ ಯಿರುವಲ್ಲಿ ಬಹದರವರ ಫವುಜುಬಂದ ವರ್ತಮಾನ ತಿಳದು, ಅರಮನೆಗೆಬಂಕೀ ಹಾಕಿ ಕೆಲವು ಖಜಾನೆತೆಗೆದುಕೊಂಡ ಬಲಾಳರಾಯದುರ್ಗ ವೊಡಿಹೊದಳು. ಅಮೆಲೆ ಯಿ ಬಹದರನು ಬಿದರೂರುಠಾಣೆಹಾಕಿದ ದಾಳೀ ಲೂಟಿಮಾಡಿಸಿದ. ಅಮೇಲೆ ಬಿದರೂರುಸ್ವಾದೀನ ಮಾಡಿಕೊಂಡ ಬಳಿಕ ಕಾರಶಹಾಯಂಬ ತನ್ನಗುರುವನ್ನು ಪೀರಮ್ಮಾಜಿ ಬಳಿಗೆ ಕಳುಹಿಸಿ, ವಡಂಬಡಿಕೆಯಿಂದ

ಕರಕೊಂಡುಬರಬೇಕೆಂದು ಕಳುಹಿಶಿದಲ್ಲಿಆತ ಹೊಗಿ ಯೀ ವೀರಮ್ಮಾಜಿಯನ್ನು ಹದರನದರ್ಶನಕೆಕೊಡಿಯಾಲಕೆಕರಕೊಂಡು ಬಂದ್ದರು.

ಆಕೆ ಬಂದುದರ್ಶನಾತೆಗೆದುಕೊಂಡು ಬಳಿಕಾ, ಯರಡನೆ ಸಾಕು ಮಗ ಸಂಗಡಯೀತೆ [>ಕೆ]ನ ಸಹಾ ಮಧುಗಿರೀದುರ್ಗಕ್ಕೆ ಷಹರಾ ಹಾಕಿ ಕಳುಹಿಸಿ. ಬಹಳ ಬಂದೊಬಸ್ತು ಆಗಿ ಯಿಡುವ ಹಾಗೆ ತಾಕತ ಮಾಡಿಶಿದು, ಕೆಲವು ಕಾಲದ ಮೇಲೆ ಮರಾಟೆಯವರ [>ರು] ಮಧುಗಿರಿತಾಣೆಹಾಕಿದ, ಮೇಲೆ ಯೀ ವೀರಮ್ಮಜಿಯೀ ಸಾಕು ಮಗನ್ನ ಸಹಾ ಪಾರಾದ್ದಿಂದಾ ಬಿಡಶಿ ತಮ್ಮ ಸಂಗಡಲೆ ಕರಕೊಂಡುಹೊಗುವಾಗ್ಯೆ ಮದ್ಯೆಮಾರ್ಗದಲ್ಲಿ ಯೀಕೆಯು ಸತ್ತು ಹೋದಳು. ಆ ಸಾಕು ಹುಡುಗ ಮಾತ್ರಾಮರಾಟೆಯವರ ಶಿಮೆಯಲ್ಲಿ ಯಿದ್ದುಕೊಂಡು ಹೊದನುಯೀಚೆಗೆಆತನು ಆ ಶೀಮೆಯಲ್ಲಿ ಸತ್ತು ಹೋದನುಯೋಬುದಾಗಿ ವರ್ತಮಾನಾ.ಚಿತ್ರಭಾನು ಸಂ॥ ರದಆರಬ್ಯಾಶಭಕೃತು ಸಂವತ್ಸರದ ವರಿಗೆ ವರುಷ ೧೬ ಆಳಿದನು. ಯಿತನುತನ್ನ ದಿನದಲ್ಲಿದೆವಾದಾಯ ಬ್ರಹ್ಮಾದಯಕೆ ಅರ್ಧಮಾನ್ಯ ಮಾಡಿದನು.ಯಿವರ ದಿವ್ಸದಲ್ಲಿ ನಗರದ ಸುಭೇದತನ ಕೆಳಗೆ ಅನೆಕ ಅಮಲುದಾರು ಅಮಲು ಮಾಡಿದನು. ಸುಭೇದತನಕೆ ಸೆಕ ಅಯಾಜನು ಮಾಡುತ್ತಾ ಯಿದನು.ಯೀ ಸೆಕ ಅಯಾಜೀಕಾಲಕೆ ಹೈದರನವಾಬನು ಅರಕಾಡ ಮೇಲೆ ಮೃತವಾದ ಸಮಾಚಾರವನ್ನು ಕೇಳಿ, ಯಂಗ್ರೀಜೀವರಿಗೆಕರೆ ಕಳುಹಿಸಿ.ಠಾಂಣ್ಯವನ್ನು ಹಾಕಿಶಿಕೊಟನು.

ತರುವಾಯಯಿಂಗ್ರೇಜೀಯವರು ಪುನಹಾ ಶೇಖ ಅಯಾಜೀಗೆ ಕೊಡದರಿಂದ್ದಾಯಿತನು ಮೂರ್ರುಂಗಳು ಮಾಡಿದನು. ಯೀ ಸಮಾಚಾರವನ್ನು ಓಪ್ಪುಸುಲ್ತಾನನೂಕೇಳಿ ಅತಿಶೀಗ್ರದಲ್ಲಿ ಫವುಜುತೆಗೆದುಕೊಂಡು ಬಂದು ನಗರವನ್ನುಠಾಣೆ ಹಾಕಿಮೊಂಡನು. ಯೀ ಟಿಪ್ಪುಸುಲ್ತಾನನು ನಗರ ಬರುವದಕೆ ಮುಂಚಿತವಾಗಲೆ ಶೇಖ ಅಯಾಜನುಜಹ.... ಬೊಂಬಾಯಿಗೆ ಹೋದನು ಟಿಪ್ಪುಸುಲ್ತಾನನು ಶಧಾರ್ತಿ ಸಂ॥ ರದ ವರಿಗೆರಾಜ್ಯಭಾರವನ್ನು ಮಾಡಿದನು. ಅವಾಗ್ಯವಸ್ತಾರೆಯಲ್ಲಿ ಅಮಲನತಕೆ ಯಿದವನು ಪ್ರಾತಿ[>ಕಿ]ನ ಮೆರಿಗೆ ನಗರದ ಸುಭೆದ ಕೆಳಗೆ ನಟದುಕೊಳ್ಳುತ್ತಾಯಿದ್ದನು.ತರ್ವಾಯ ಶಿಧಾರ್ತಿ ಸಂವತ್ಸರದಲ್ಲೀ ಕುಂಪಣಿಯವರು ಶ್ರೀರಂಗಪಟ್ಟಣವನ್ನು.ಠಾಣೆ ಹಾಕಿಕೊಂಡರು. ಅವಾಗ್ಯೆ ವಸ್ತಾರೆ ಆಮೀಲಿಗೆ ಬೆಲೂರುಚೆನ್ನಬಸಪ್ಪಯ್ಯಾಯಂಬವನು ಮಾಡಿಕೊಂಡು ಯಿದಲ್ಲಿ ಓಪ್ಪುಸುಲ್ತಾನನ ದಿವಸದಲ್ಲಿ ನಗರದ ಸಂಸ್ಥಾನದವರ ರಾಯರೆಯೆನ್ನಿಶಿ ಯಿರುತ್ತಾಯಿದಅವನು"ಕುಂಪಣೀತಾಲ್ಲುಕಸರದಾರು ನಗರ ಸಂಸ್ಥಾನ ಸಮಗೆ ಕೊಟ್ಟು, ಯಿದಾರೆಯಂದ್ದುಕಾಗದವು ನಮ್ಮ ಬಳಿಯಲ್ಲಿ ಅದೇ"ಯಂದು ಸಹಾ

ವಾಸ್ತರೆ ಬಳಿಗೆ ಬಂದ್ದು, ಯೀ ವೊರಿಗೆಅಮಲುದಾರ ಬಸಪಯ್ಯ ಯಂಬವನು ಯಿರುವನಂ ಯೀ ವಸ್ತಾರೆಕಿಲ್ಲದೆದಲ್ಲಿ ಹಾಜರು ಯಿಲ್ಲದೆಆತನ ತಂಮ್ಮತಿಮ್ಮಪ್ಪೈಯ್ಯಾಯಂಬವನು ಕಿಲ್ಲದೆಲ್ಲಿ ಯಿರುವಅಂತ್ತಾರನಿಗೆ ತನ್ನಲ್ಲಿಯಯಿರುವ ಅಪಥಕಾಗದವನ್ನು ತೊರಿಶಿಯಿಟ್ಟಂದ್ದಾ ಯೀ ಕಿಲ್ಲೆತಯಿನಾತಿ

ಜನರು ವಾಲೆಕಾರು ಶೀಮೆ ರೈತರುನ ಸಹಾ ಕರಕೊಂಡುಯಡೆಹಖ ಶೀಮೆಗೆ ಹೋದನು ಆಮೇಲೆ ಯೀ ಶೀಮೆ ಮೆಲೆ ಬಂದ ಪಾಳೆಗಾರಗೆ ಅಮಲದಾರಿಕೆ ಕೊಡುಲ್ಲಾಯಂಬದಾಗಿಪೂರ್ಣಯ್ಯನ ಪರವಾನೆ ಬಂದದರಿಂದಾ ಆಮೆಲೆ ಆಮೀನನು ರಯಿತವನ್ನೆರೆರನ ಕರೆಕಳುಹಿಸದಲ್ಲಿ, ರೈತರು ಬಾರದೆ ಯಿದ ಸಂಮ್ಮಥಾ ಪಂಥ ಪಿತೂರಿ ಮಾಡಿ, ಸದರಹಂ ಪಾಳೆಗಾರಗೆ ಜಮೆಯ ಸಹಾಯ ಕಿಲ್ಲೆಕೆ ಮುತ್ತಿಗೆ ಹಾಕಿಶಿ ಕಿಲ್ಲೆದ ವಳಗೆ ಬಂದ್ದುಕಿಲ್ಲೆದ ಬಾಗಲ್ಲೀ ಯಿದ ಪಾರಾದ ಆನಕೆ ಶಿಕ್ಷೆ ಮಾಡಿಶಿ, ಸದರೀ ಅಮೀಲಗೆ ಠಾರ ಮಾಡಿದರು.

ಯೀ ವರ್ತಮಾನ ಪೂರ್ಣಯ್ಯನರಿಗೆ ತಿಳಿದು ತಂ[<ಕಂ]ದಾಚಾರದ ಯಿಲಾಕೆ ಮುತ್ಸದ್ದಿತಮ್ಮಾಜ್ಜೀಪಂತನ ಹಮರಹಾ ಕೆಲವು ಫವುಜನ್ನುಕೊಟ್ಟು ಕಳುಹಿದರಿಂದಾ ಕೆಂಚನಹಳ ವುಕ್ಕಡಕೆ ಯೀ ಫವುಜು ಬೋದುದಾಖಲು ಆದ ವರ್ತಮಾನಕೇಳಿ, ಸದರಹೂ ಪಾಳೆಗಾರನು ರಾತೊರಾತ್ತು ವೊಡಿಹೋದ ಆ ಮೇಲೆ ತಮ್ಮಜೀಂತ್ತಫವುಜುಸಹಿತವಾಗಿಬಂದುಕಿಲ್ಲದೆಠಾಣೆ ತೆಗದುಗೊಂಡುರಹತಮೀನಾಯಂಬ ಕಿಲ್ಲೆದಾರನ್ನ ಮೊಕರರು ಮಾಡಿಯಿಟ್ಟರು. ಆಮೇಲೆ ಪತ್ತೇಹೈದರಾಯಂಬ ಹೆಸರು ಹೇಳಿಸಿಕೊಂಡು, ಸಂಗಡ ಕೆಲವು ಫೈವುಜು ತೆಗೆದುಕೊಂಡು ಸಂಗಡ ಸುರಳೀ ಸುಬರಾಯಂಬ ಮುತ್ಸದ್ದಿಗೆ ಫವುಜುದಾರೀ ಮೊಕರರುಮಾಡಿದ, ತರುವಾಯಅವನು ಯೀ ಕಿಲ್ಲೆದಾರಿ ಸುದಾತಮ್ಮ ಸ್ವಾಧೀನಕೆಕೊಡಬೇಕುಯಂದುಕಿಲ್ಲೆದಾರನಸಂಗಡಜವಾಬು ಸ್ವಾಲು ಮಾಡಿದಲ್ಲಿ ಆಗ ಕಿಲ್ಲೆದಾರನೂ ಫಿತೂರಿತನದಲ್ಲಿ ಸದರಹೂ ಫತ್ತೆಹೈದರಗೆ ಆ ಸರಳೆ [>ಸುರಳಿ] ಸುಬರಾಯಗೆ ಸಹಾಯಿಕರ್ತರನೂ ಕರೆಕಳುಹಿದಲ್ಲಿ ಫತೆಹೈದರಾ ಬಾರದೆ ಆ ಸುರಳೀ ಸುಬರಾಯ ಸರದಾರ ಮಾತ್ರಾವ್ಯನೆ ಸಂಗಡ ಯಿದ್ದಾ ೫೦ ಆನ ಸುದಾ ಬಂದ್ದು, ಕಿಲ್ಲೆದ ಪಶ್ಚಿಮದ ಬಾಗಿಲಲ್ಲೂ ಯಿರುವ ಅಂಚೆ ಚಾವಡಿಯಲ್ಲು ಬಂದು ಕುಳಿತನು."[೧೮೯]

**ಕೈಫಿಯತ್ತುಗಳಲ್ಲಿ ತರಿಕೆರೆ ಅರಸುಗಳ ಬಗೆಗಿನ ವಿವರ**

**ಸರ್ಜಾ ಹಣನಪ್ಪ ನಾಯಕ** : ೨೩. ಆ ಕೋಟೆತರಿಕೆರೆ ಸ್ತಳದ ಅರಸು ಸರ್ಜಾ ಹಣಮಪ್ಪನಾಯಕನು ಶಕ ವರುಷ.... ಹೇವಿಳಂಬಿ ಸಂವತ್ಸರದಲ್ಲು ಯೀ ಅಜಪುರದಕಿಲ್ಲೆಠಾಣೆ ಹಾಕಿಕೊಂಡು ಶಕವರುಷ ೧೬೧೦ನೆ ವಿಭವ ಸಂ।ವರಿಗೆ ಆಳಿದ ವರುಷಾ ೨೩., ಸರ್ಜಾ ಹಣಮಪ್ಪನಾಯಕ, ನಿತ್ಯಮದುವಣೆಗರಾಮಪ್ಪನಾಯಕ, ಪಟ್ಟಾಭಿರಾಮಪ್ಪನಾಯಕ

**ಯಿವರ ಆಳೀಕೆಲಿ ಮಾಡಿದಧರ್ಮಗುಳು:** ೨ ಬ್ರಾಹ್ಮಣರಿಗೆಕೊಟ್ಟ ಅಗ್ರಹಾರಗಳು: ೧. ಶಲಿವಾಹನ ಶಕ ೧೫೮೪ನೆ ಶೋಭಕೃತ ಸಂ।ದಲ್ಲು ಸರ್ಜಾ ಹಣುಮಪ್ಪನಾಯಕರು [ಮ+]ಗಳೀಗ್ರಾಮವನ್ನು ಧಾರಾಪೂರ್ವವಾಗಿಕೊಟ್ಟರು.

**ಯಿದಕತಾಂಬ್ರಶಾಸನಯಿದೆ:** ೧ ಶಾಲಿವಾಹನ ಶಕ ವರುಷ ೧೬ ...ಪುರದ ಗ್ರಾಮವನ್ನು ಯಿದೆ. ೧ ಮೊಗಲರಕಾಲದಲ್ಲು ಶ್ರೀಂಗೇರಿ ಶ್ರೀಕೂಡಲಿ ಮಟಕೆ ಶಿವನೆ ಸ್ಥಳದ ...ದುಗ್ರಾಮವನ್ನು ಬರಶಿಕೊಟ್ಟು ಯಿದ್ದುದಕ್ಕೆಹಾಲಿ

ಪಟ್ಟಾಬಿರಾಮಪ್ಪನಾಯಕರುರೂಪವನ್ನು ಬರಶಿಕೊಟ್ಟರು. ಯೀ ಗ್ರಾಮಕುಂಪಣಿ ಸರಕಾರಆದಮೆಲ್ಲು[>ಮೇಲು] ವಂದು ವರುಷಾ ನಡೆದು ಬಂತು. ೩ ಪುನಹಾ ತರಿಕೆರೆಅರಸು ಹಣಮಪ್ಪನಾಯಕರು ಶಕವರುಷ ೧೬೪೨ನೇ ಪ್ಲವಂಗ ಸಂ।ದಲ್ಲು ಯೀ ಶೀಮೆಯನ್ನು ಠಾಣೇ ಹಾಕಿಕೊಂಡು ಶಕವರುಷ ೧೬೪೫ ಶುಭಕೃತು ಸಂ। ವರಿಗೆ ಆಳಿದ ವರುಷಾ ೩.[೧೧೦]

**ಕೆಂಗಹನುಮಪ್ಪನಾಯಕ** : "ಸದರೀ ಮೊಗಲರು ಆಳೂತ್ತ ಯಿದ್ದಲ್ಲಿ ಬಾಣಾವಾರದಲ್ಲು ಯಿದ್ದಚಿಕ್ಕ ಕೆಂಗೆಹನುಮಪ್ಪನಾಯಕರು ತಮ್ಮ ಅಣ್ಣ ಹಿರೆಕೆಂಹನುಪ್ಪನಾಯಕರನ್ನು ಭಾಗನಗರಕ್ಕೆ ಕರಕೊಂಡು ಹೋದ ಬಗ್ಗೆ ಯೀ ಚಿಕ್ಕ ಕೆಂಗೆಹನುಮಪ್ಪನಾಯರು ಭಾಗನಗರಕ್ಕೆ ಹೋಗಿ, ಪಾದಷಾಹಾರ ಕಂಡು ಮರ್ಜಿಕಾದುಕೊಂಡು ಯಿರುತ್ತ ಯಿದ್ದಲ್ಲಿ, ವಂದು .... ಲದಲ್ಲಿ ಹುಲಿಕಾಳಗವನ್ನು ಬಿಡ್ಸಿಯಿದ್ದಲ್ಲಿ. ಯೀತನು ಹುಲಿಮೇಲಿ ಬಿದ್ದು ಹುಲಿಯನ್ನು ಹೊಡದು ಬಹಳ ಮೆಹನತ್ತು ಮಾಡಿದ್ದರಿಂದ, ದಣೀರು ಚಿತ್ತಕ್ಕೆ ತಂದು ಯೀತಗೆ ಸರ್ಜಾಯೆಂಬುದಾಗಿ ಕಿತ್ತಾಬುಕೊಟ್ಟು, ನೀಉ ಪೂರ್ವದಲ್ಲಿ ಆಳುತ್ತ ಯಿದ್ದ ರಾಜ್ಯವನ್ನು ಆಳಿ ಯಂಬುದಾಗಿ ಪರವಾನೆ ಕೊಟ್ಟು, ಹಸರ್ರು ಪಾಲಕಿ, ಹಸರು ಕೊಡೆ, ಹಸರ್ರು ಶಾಲು ಮುಂತಾಗಿಯು

ತಸರೀಪು ಕೊಟ್ಟು ಕಳುಹಿಸಿದಲಿ, ಯೀತನು ಪುನಾ ಬಸವಾಪಟ್ಟಕ್ಕೆ ಬಂದು ಶಖ ೧೫೭೮ನೆಯ ದುರ್ಮುಖಿ ಸಂಲಾಗಾಯಿತು ಶಕ ೧೫೮೪ನೆಯ ಶುಭಕೃತ ಸಂ.ವರಿಗೆ ವರುಷ ೬ ಆಲಿದನು."[೧೧೧]

**ಚಿಕ್ಕ ಕೆಂಗಹನುಮಪ್ಪನಾಯಕ** : "ಯೀ ಪ್ರಕಾರ ಹದಿನೇಳು ವರುಷ ರಾಜ್ಯವನ್ನು ಆಳಿಕೋಮಡು ಯಿರುವಲಿ ಬಾಣಾವಾರದಲ್ಲು ಯಿದ್ದ ಸಣ್ಣ ಕೆಂಗೆಹನುಮಪ್ಪನಾಯಕರು 'ತಮ್ಮ ಅಣ್ಣ ಹಿರೆ ಕೆಂಗೆಹನುಮಪ್ಪನಾಯಕರ ಬಾಹಾ [>ಗಾ] ನಗರಕ್ಕೆ ಕರಕೋಂಡು ಹೋದರು ಯಂಬದಾಗಿಯೂ, ಯಿವರು ಭಾಗಾನಗರಕ್ಕೆ ಹೋಗಿ ಅಲ್ಲಿ ಷಾದಷಾರ ಕಂಡು, ಮರ್ಜಿಕಾದುಕೊಂಡು ಯಿರುತ್ತಾ ಯಿದ್ದಲ್ಲಿ ಯೀ ಚಿಕ್ಕ ಕೆಂಗೆಹನುಮಪ್ಪನಾಯಕರು ಹುಲಿ ಮೇಲೆ ಬಿದ್ದು ಹೊಡದ್ದರಿಂದ ಪಾದಷಾಹಾರು ಮೆಚ್ಚಿ ಸರ್ಜಾ ಯಂಬುದಾಗಿ ಕಿತಾಬು ಕೊಟ್ಟು, ಹಸುರು ಪಾಲಕಿ ಹಸುರುಕೊಡೆ ಹಸರು ಥಾಲು ಮುಂತಾಗಿಯು ಕೊಟ್ಟು ಸನ್ನದು ಕೊಟ್ಟು ಪವೂರ್ವದ ಪ್ರಕಾರ ನೀಉ ಆಳುತ್ತಾಯಿದ್ದ ರಾಜ್ಯವನ್ನು ಆಳಿಕೊಂಡು ಬರುವುದು ಯಂಬದಾಗಿ ಪರವಾನಿಯನ್ನು ಬರಶಿಕೊಟ್ಟರಿಂದ ಪುನಹ ಯಿವರು ಬಂದು ಠಾಣ್ಯಹಾಕಿದು. ಶಕ ೧೫೭೮ ದುರ್ಮಖ ಸಂವತ್ಸರದ ಆರಭ್ಯ ಶಕ ೧೫೭೯ ನೆಯ ವಿಳಂಬಿ ಸಂವತ್ಸರದ ವರಿಗೆ ವರುಷ ೧ ಆಳಿದಾಗ್ಯೆ ಯೀ ಮಲ್ಲೂರು ಸಹಿತವಾಗಿ ಬಸವಾಸಪಟ್ಟಣದಲ್ಲಿ ನಡದು ಬಂತು. ಯೀ ಸರ್ಜಾ ಕೆಂಗೆ ಹನುಮಪ್ಪನಾಯಕರು ಬರಶಿಕೊಟ್ಟ ದಾನಪಟ್ಟಿ: ಯೀ ಸ್ಥಳದ ಪುರಾಣೀಕಅಹೋಬಳಶಾಸ್ತ್ರಿಗಳಿಗೆ ಶ್ರೋತ್ರಿಯಮಾನ್ಯವಾಗಿ ಅಗ್ನಿಹೊತ್ರವನ್ನು ಯಿಟ್ಟುನಡುವ ಬಗ್ಯೆ ಬರಶಿಕೊಟ್ಟ ಮಕಸಾ ಪಟ್ಟೆ, ಪ್ರತಿದಾನಶಾನವಾರುವದಾಗಿ ಅಳುತ್ತಾ ಯಿದ್ದಲ್ಲಿ, ಯಿಕ್ಕೇರಿಸಂಸ್ತಾನದ ಅರಸುಗಳು ಶಿವಪ್ಪಾ ನಾಯಕರು ತಮ್ಮ ದಂಡು ಸಹಿತವಾಗಿ ಬಂದು. ಯೀ ಮಲ್ಲೂರು ಶೀಮೆಯನ್ನು ಠಾಣ್ಯ ಹಾಕಿಕೊಂಡುಲ್ಲಿ. ಶಕ ೧೫೭೯ನೆಯ ಹೇವಳಂಬಿ ಲಾಗಾಯಿತು ೧೫೮೪ ನೆಯ ಶುಭಕೃತು ಸಂವತ್ಸರದ ವರಿಗೆ ವರುಷ ೫ ಪರಿಯಂತ್ರ ಬಿದನೂರ ಸಂಸ್ಥಾನಕ್ಕೆ ಯೀ ಮಲ್ಲೂರು ಶೀಮೆಗೆ ಸೇರಿ ನಡದು ಬಂತು. ಯೀ ಶೀಮೆ ಅಧಿಕಾರದ ಕರೆ ಭದ್ರಿಯಯಂಬವಗೆ ಪಾರುಪತ್ಯವನ್ನು ಕೊಟ್ಟು ರಾಜ್ಯವನ್ನು ಆಳಿದರು. ಯಿವರ ಕಾಲದಲ್ಲಿ ಹುಟ್ಟಿದ ನಿರೂಪಗಳು."[೧೧೨]

**ಹಣುಮಪ್ಪ ನಾಯಕ** : "ಅಗ್ರಹಾರ ಬಿಟ್ಟದ್ದು: ಕುಲಕರಣಿ ಕಟ್ಟೆಗ್ರಾಮವನ್ನು ಕಟ್ಟೆಗ್ರಾಮವನ್ನು ಅಗ್ರಹಾರವಾಗಿ ಪ್ರಾಕು ಮೇರಿಗೆ ಜೀರ್ನೋದ್ದಾರ ಮಾಡಿ ಸರ್ವಮಾನ್ಯವಾಗಿ ಕೊಟ್ಟ ಗ್ರಾಮ ೧. ಯೀ ಮೇರೆಗೆ ಅಗ್ರಹಾರ ಭಟಮಾನ್ಯ ದೇವತಾ ಉತ್ತರವನ್ನು ಸರ್ವಮಾನ್ಯವಾಗಿ ಸತ್‌ಸಧರ್ಮದಿಂದ ರಾಜ್ಯವನ್ನು ಅಳಿಕೊಂಡು

ಬಂದರು. ಯಿವರ ಕಾರ್ಯಕತ್ರಾದ ಮೂಲ ವಂಶೋದ್ಧಾರಕ ಕರೆ[>ಕೆಂಗೆ] ಹನುಮಂತಪ್ಪನಾಯಕರು ಶಕ ೧೪೮೪ನೆಯ ದುಂದುಭಿ ಸಂವತ್ಸರದಲ್ಲು ಬಸವಾಪಟ್ಟ [+ಣ]ದ ಕೋಟೆಯನ್ನು ಕಟ್ಟಿಶಿ. ಯಾವತ್ತು ರಾಜ್ಯವನ್ನು ಸಾಧಿಸಿ ಆಳಿದ್ದು ೧೪೮೯ನೆಯ ಪ್ರಭವ ಸಂವತ್ಸರದ ವರಿಗೆ ವರುಷ ೫ ಯಿವರ ಕಾಲದಲು ಸಡುವಂಥಾ ದರ್ಮದ ಕ್ರಮಗಳ ವಿವರ, ಶಕ ೧೪೮೭ನೆಯ ಕ್ರೋಧನ ಸಂವತ್ಸರದ ಚೈತ್ರ ಶುದ್ಧ ೯ ಉ ಆದ ದಾನ ಪಟ್ಟಿ: ೧. ಕಣಿಗಲಗಟ್ಟಿ ಅಗ್ರಹಾರದ ಬಗ್ಗೆ ಯಜಮಾನ ಹರಿಭಟ್ಟ ದ್ಯಾಮರಸ್ಯೆ ಶ್ಯಾನುಬೋಗನ ಉತ್ರಿ ಸಹವೊಬನಾಯಕ ಅಮರವನ್ನು ತೆಗೆದು ಜೀರ್ಣೋದ್ಧಾರವನ್ನು ಮಾಡ್ಸಿಕೊಟ್ಟು ಯಿದ್ದೇವೆಂಬದಾಗಿ ಬರಶಿಕೊಟ್ಟ ದಾನಪಟ್ಟಿ. ೧. ಕಮಲಾಪುರವೆಂಬ ಗ್ರಾಮವನ್ನು ಯೀ ಕುಣಿಕಲಗಟ್ಟಿನ ಭೂಮಿಯಲ್ಲಿ ವಿಂಗಡಿಶಿ, ಯೀ ಗ್ರಾಮವನ್ನು ಹೊಸ್ತಾಗಿ ಕಟ್ಟಿ ಯೆಕ ಭೋಗ್ಯವಾಗಿ ನಡವಂತೆ ಬರಶಿಕೊಟ್ಟ ದಾನಪಟ್ಟಿ

ಸೂಳೆಕೆರೆ ಶೀಮೆ ವಳಿತವಾದ ನವಲಿಹಾಳೂ ಗ್ರಾಮದಲ್ಲಿ ಯಜಮಾನ ಗಿಣಿವಾಲದ ತಿಮ್ಮೆಯ್ಯನು ಗ್ರಾಮಕ್ಕೆ ರಾಯತಭೋಗ್ಯವನ್ನು ಅನುಭವಿಸಿ ಬಂದವನ್ನ ಪ್ರಾಕು ಪ್ರಕಾರ ಜೀರ್ಣೋದ್ಧಾರವನ್ನು ಮಾಡಿ ಕೊಟ್ಟದ್ದೇವೆ [>ವೆ] ಶಖ ೧೧೮೪ನೆ ದುಂದುಭಿ ಸಂವತ್ಸರದ ದಾನಪಟ್ಟಿ. ಯಿದು ಹೊರತು ಕುಂಚಗಾರನಹಳ್ಳಿ ಗ್ರಾಮದಲ್ಲಿ ಹಣುಮಪ್ಪನಾಯಕರ ಹೆಂಡತಿ ಗಿರಿನಾಗಕ್ಕೆ [>ತ್ತಿ] ಕೆತೆ ಯಂಬದಾಗಿ ಹೆಸರು ಆಗಿಯಿದೆ. ಯಿವರ ಮಕ್ಕಳು ಯಿಮ್ಮಡಿ ಕೆಂಗೆ ಹನುಮಪ್ಪನಾಯಕ ಶಕೆ ೧೪೧೨ ನೆಯ ಪ್ರಮೋದೂತ ಸಂವತ್ಸರದ ವರಿಗೆ ವರುಷ ೩ ಆಳಿದರು. ಯಿವರು ಕಟ್ಟಿಸಿದ ಕೆರೆಗಳ ವಿವರ

ಸಾಸಿವೆಹಳ್ಳಿಗ್ರಾಮದ ಉತ್ತರಭಾಗದಲ್ಲು ವಂದು ಕೆರೆ ಕಟ್ಟಿಶಿ, ಯೀ ಕೆರೆಯನ್ನು ಕಟ್ಟಿಸತಕ್ಕದಕ್ಕೆ ಹವಾಲೆ ವೀರನಾಯಕನ ಯಿಟ್ಟು, ಕೆರೆಯನ್ನು ಕಟ್ಟಿಶಿದ್ದರಿಂದ ಯೀರನಾಯಕನ ಕೆರೆ ಯಂಬದಾಗಿ ಜನರು ಹೇಳುತ್ತಾ ಯಿದ್ದಾರೆ. ಹಾಗು ಬಾಲನಾಯಕನ ಕೆರೆ ಇರುವುದನ್ನು ಕಾಣಬಹುದು.

ಯೀ ಪ್ರಕಾರ ಕೆರೆಯನ್ನು ಕಟ್ಟಿಶಿ ರಾಜ್ಯವನ್ನು ಆಳುತ್ತಾ ಯಿದ್ದರು. ಯಿವನ ಮಗ ನಿತ್ಯಮದವಣಿಗ ಹನುಮಪ್ಪನಾಯಕನ [>ನು] ಶಕ ೧೫೦೨ನೆ ವಿಕ್ರಮ ಸಂವಸ್ತರದ ವರಿಗೆ ವರುಷ ೧೦ ಆಳಿದರು. ಯಿವರ ಮಕ್ಕಳು ಚಿಕ್ಕ ಕೆಂಗಪ್ಪನಾಯಕರು ಹಿರೆ ಕೆಂಗೆ ಹನುಮಪ್ಪನಾಯಕರು ಸಹ ಶಕ ೧೫೦೩ನೆ ವಿಷುಸಂವತ್ಸರದಾರಭ್ಯ ಚಿತ್ರಭಾನು ಸಂವತ್ಸರದ ವರಿಗೆ ವರುಷ ಉಬಯತ್ರರು ರಾಜ್ಯವನ್ನು ಆಳಿಕೊಂಡು ಬರುತ್ತಾಯಿದ್ದರು.

ಉಬಯತ್ರರಿಗೂಕಟ್ಟಿನಾಯಕ ಹೊಸೆಯ ಚಿಕ್ಕ ಕೆಂಗೆಹನುಮಪ್ಪನಾಯಕರು ಬಾಣಾವಾರಕ್ಕೆ ಹೋದರು."[೧೧೩]

**ತಿಮ್ಮನಾಯಕ** : "ತದನಂತರ ತರ್‍ರಿಕೆರೆ ಅರಸು ತಿಮ್ಮಪ್ಪನಾಯಕನೆಂಬೀ ಪಾಳೆಗಾರುನು ಬಲವಂತವಾಗಿ ಯೀ ಶೀಮೆ ಯಾವತ್ತನ್ನುಕಟ್ಟಿಕೊಂಡು ಅಮರಗಿರಿ ಜನಾರ್ಧನಸ್ವಾಮಿಯವರ್‍ರು ತಿಮ್ಮಪ್ಪನಾಯಕರಿಗೆ ಪ್ರತ್ಯಕ್ಷವಾಗಿ ದೇವಸ್ಥಾನವನ್ನು ವಿಸ್ತಾರವಾಗಿ ಕಟ್ಟಿಸು ಯಂಬುದಗಿ ಅಪ್ಪಣೆ ಆದ್ದರಿಂದ, ಅವರಗಿರಿ ಮೇಲಿನ ದೇವಸ್ತಾನವನ್ನು ಕಟ್ಟಿಸಿ ಕೆರೆಯನ್ನು ಕಟ್ಟಿಸಿದನು. ದೇವಸ್ತಾನ ಸೇವೆಯನ್ನು ಮಾಡಿಕೊಂಡು, ದೇವತಾ ಸೇವೆಯನ್ನು ಮಾಡಿಕೊಂಡು ಯಿವರ ವಂಶಸ್ತರು ಹನುಮಪ್ಪನಾಯಕ, ಸರ್ಜಾ ಹನುಮಪ್ಪ ನಾಯಕ, ಸೀತಾರಾಮಪ್ಪನಾಯಕ ಮುಂತಾದವರು ಆಳಿದರು.

ತದನಂತರದಲ್ಲಿ ಗೊಲ್ಲುಕೊಂಡೆ ಗಜಮಸ್ತೂಕಿ ಆಳಿದು. ಸಿರ್ತೆ[>ಸಿರ್‍ಯೆ] ದ ಸುಭೆಯಕ್ಕೆ ದಾಖಲು ಮಾಡಿ. ಕಾರಬಾರಿ ದಿಲ್ಲಾಮ[>ವ].... ಕಾನ ದಿಲ್ಲಿ. ದಿಲ್ಲಾಪ[>ವ] ರಕಾನ ಮುಂತಾದ ಸರದಾರಗೆ ನೇಮಕಾ ಮಾಡಿ ಆಳಿದರು.

ತದನಂತರ ಯಿಕೇರಿ ನಗರದ ಸಂಸ್ತಾನದ ಚನ್ನಮ್ಮಾಜಿಯವರು ವೆಂಕಟಪ್ಪನಾಯಕರು ಸಹಾ ಆಳಿದರು."[೧೧೪]

**ಬಿಜಾವವುರದ ಮಿಲಿಟರಿ ನಾಯಕರು**

**ರಣದುಲ್ಲಾಖಾನ್** : "೪೨ ಯಿವರು ಆಳುವಾಗೆ ಮೊಗಲ ಕಡೆ ಯಿ ಶಿರೆದ ಸುಭೆ ಮಾಡಿಕೊಂಡು ಬಂದ ರಣದುಲ್ಲಾಖಾನರು ಯೀ ಶಿಮೆಯನ್ನು ಠಾಣೆ ಹಾಕಿಕೊಂಡುದು. ಶಕವರುಷ ೧೫೩೨ನೆ ಸಾಧಾರಣ ಸಂದಲ್ಲು ತೆಗೆದುಕೊಂಡುದು. ಶಕವರುಷ ೧೫೭೮ ದುರ್ಮುಖಿ ಸಂ ವರಿಗೆ ಆಳಿದ ವರುಷಾ ೪೭ಕೆ, ರಣದುಲ್ಲಾಖಾನ, ಅಗ್ರಾಖಾನ, ವಿರ್ಜಾನಬಿ

ತದನಂತರದಲ್ಲಿ ಮೀರ್ಜಾನವಾಬ ಯಿವರ ನಾ.... ನು ಯಿವರ ಕಡೆ ಆಚಿರಾಭ್ರಾನಲ್ಲಾಲೊ [>ಅಜಿಮಖಾನುಲ್ಲಾಳು] ಮೊಬವರಿ ಶಿರ್ಯದಿಂದಾ ಬಸವಾಪಟ್ಟಣಕೆ ಹೋಗುವ ಬಗ್ಗೆ ಬರುತ್ತ ಮಧ್ಯಮಾರ್ಗದಲ್ಲಿ ಕರುಹಾಲ್ಲು ಗ್ರಾಮದ ಬಳಿಯ ಬಮದು ಉಳಿದುಕೊಂಡಲ್ಲಿ. ಯಿವರ ಸವಾರಿ ಸಂಗಡಾ ಬಂದ ನಾಯಿ ೨ ಗಿಡದಲ್ಲಿ ಸಂಚರಿಸುವಾಗ ಗಿಡದಿಂದಾ ಯರಡು ಮೊಲಾವು ಹೊರಟು ಬಂದು ಯೀ

ನಾಯಿಗಳನ್ನು ಅಟ್ಟಿಕೊಂಡು ಬಂದದರಿಂದಾ ಯೀ ಆಶ್ಚರ್ಯವನ್ನು ಯೀ ಅಜಿಮಖಾನಲ್ಲಾಖಯವರು ಕಂಡು, ಯೀ ಸ್ಥಳವು ಗಂಡುಭೂಮಿ ಯಿಲ್ಲಿ ಕೋಟೆಯನ್ನು ಕಟ್ಟಿಸಬೇಕೆಂಬುದಾಗಿ ಮನಶಿನಲ್ಲಿ ಯೋಚಿಸಿಕೊಂಡು, ಯಿಲಿಂದಾ ಬಸವಾಪಟ್ಟಣಕೆ ಹೋಗಿ, ತಮ್ಮ ಧಣಿಯು ಪಿರ್ಜಾನಬಿಯವರಿಗೆ ಯೀ ಪೂರ್ವವೃತ್ತಾಂತವನ್ನು ಪಿಸ್ತಾರವಾಗಿ ಶೃತಮಾಡಲಾಗಿ ಅವರು ಆಶ್ಚರ್ಯಬಟ್ಟು ಕೋಟೆಯನ್ನು ಕಟ್ಟುವುದರಿಂದ. ಯೀ ಆಚಿ[>ಅಜಿ] ಮುಖಾನಲ್ಲಾಖ ಇವರು ಬಂದು ಯೀ ಕಿ[>ಕ]ರು ಹಾಲ್ಲು ಗ್ರಾಮವನ್ನು ಶಾಲಿವಾಹನ ಶಕ ೧೫೬೦ನೆಯ ಬಹುಧಾನ್ಯ ಸಂದಲ್ಲಿ ಕೋಟೆ ಕಟ್ಟುವ ಬಗ್ಗೆ ಪ್ರಾರಂಭ ಮಾಡಿಶಿ ಕೋಟೆ ಕಟ್ಟಿಸಿ ಆಕೋಟೆ ಅಜಂಪುರಾಯಂಬ ಹೆಸರು ಯಿಟ್ಟು ಪೇಟೆ ಸಹಾ ಕಟ್ಟಿಶಿ. ಯೀ ಗ್ರಾಮದ ಪಶ್ಚಿಮಕೆ ಯಿದ್ದಾ ಸಣ್ಣಕೆರೆಯನ್ನು ದೊಡ್ಡದಾಗಿ ಕಟ್ಟಿಶಿದರು. ಆಮೇಲೆ ಹಣ್ಣೆ ಯಿರುವ ಬಳಿ ಮಗುಳೀಕಲ್ಲು ಬಾವಾಬುಡನಗರಿಯಿಂದಾ ಬಂದುದಂನ್ನು ಹಾಸಕರನ್ನು ವಮದು ತುರಿ[>ತಾಕಿ] ಯಾ ಕಟ್ಟಿಕೊಂಡು ಯಿರುತಾ ಯಿದ್ದ. ಅಜಂಪುರ ಕಿಲ್ಲೆ ಕಟ್ಟುವರು [ಮ+]ಗುಳೀಕಲ್ಲುಯಿಂದಾ ಬಂದು, ಯಿಲ್ಲಿ ವಂದು ತಾಕಿಯಾದಲ್ಲಿಯೇ ಗೋರಿ ಮಾಡಿಯಿದ್ದಾರೆ.

ಅನವರ್ದೀಖಾನರ ಮಗ ಮಹಮ್ಮದಲ್ಲೀಖಾನರು ಕೆಲವು ಸೀಮೆ ಬಲಕಾಯಿಸಿಕೊಂಡು ಇದ್ದರು. ಹೈದರಾ ಬಾದಿನಲ್ಲಿ ಜೂಂ ಪಿಕಲಿಸ್ ಖಾನ್ ಅಸಫಜಹಾನ್ ಬಹದರವರು ಐವತ್ತು ವರುಷ ಪರಿಯಂತರ ಹೈದರಾಬಾದು ದವಲತ್ತು ಮಾಡಿ ಮಾಡಿ ನುರು ವರುಷ ಪರಿಯಂತ ಬದುಕಿ .ದೇಹಕ್ಕೆ ಕೇವಲ ಸ್ವಸ್ಥಪಿಲ್ಲದೆ ತಮ್ಮ ಮಗನಾದ ಗಾಜಿವುದ್ದೀನ್ ಖಾನರಿಗೆ ದಿಳ್ಳಿ ವಜೀರಿಯಿದ್ದು ಸತ್ತು ಹೋಗಿ ಅವನ ಚಿಕ್ ಪ್ರಾಯದವನು ದಿಳ್ಳಿ ವಜೀರಿ ಮಾಡುತ್ತಾ ಇದ್ದ ಕಾರಂ.ಎರಡನೇ ಮಗನಾದ ನಿಜಾಮರ್ಜ ಮುಲುಕು ನಾಜರದಂಗ ಬಹದವರಿಗೆ ಹೈದರಾಬಾದನು ಅಸಫಜಹಾಆಗಿರಿಯನ್ನು ಸ್ವಾಧೀನ ಮಾಡಿಕೊಟಟ್ಟು ತಾವು ಸ್ವರ್ಗಸ್ಥಾರಾದ್ದರಿಂದ ತಮ್ಮ ತಮದೇಯವರಾದ ಅಸಫಜಹಾರರು ಬರಿಸಿಕೊಟ್ಟು ಹದಿನೇಳು ಕಲಮಿನ ಹುಕ್ಕುಂ ನಾಮೆ ಮೇರೆಗೂ ನಡೆಯದೆ ತನ್ನ ಸ್ವಬುದ್ಧಿಯಿಂದ ಜಾಹಿಲಿಯತ್ತಿನಿಂದ ...ದಿವಾನ್ ಪೂರ್ಣಚಂದ್ರ ಎಂಬಾತನು ತಗ್ಗೈರು ಮಾಡಿ.ಷಹನವಾಸಖಾನನೆಂಬುವವನಿಗೆ ದಿವಾನ್ ಗಿರಿ ಕೊಟ್ಟು ಕೆಲವು ಬರಜಾ ಹಲ್ಕಿ ಚಾಲ ನಡೆಯಿತ್ತಾ ಇದ್ದರು."[೧೧೫]

ಅಷ್ಟರಲ್ಲೇ ಈ ಅರ್ಕಾಡ ಸೀಮೆಯಲ್ಲಿ ನಡೆದ ಅನಾಹುತಗಳ ಕೇಳಿ ಇದರ ಬಂದೋಬಸ್ತಿ ಬಗ್ಗೆ ಒಮ್ಮ ಪೌಜು ಸುಧಾ ಹೊಸಕೋಟೆ ಮಾರ್ಗವಾಗಿ ಆರುಕಾರು

ಸೀಮೆಗೆ ಬಂದರು.ಅವರ ಸಂಗಡ ಮೊಖ್ತಿಯಾರಿ ದಿವಾನ್ ಸದರಿ ಶಹನವಾಸ ಖಾನರೆಂಬವರಿಗೆ ಈ ನಾಜರಜಂಗರೇ ಹೊಸತಾಗಿ ಕೊಟ್ಟು ಇದ್ದದ್ದರಿಂದ ಅವರು ಸಂಗಡಲೇ ಇದ್ದರು ಕಡಪೆ ಕಂದನೂರು ಸವಣೂರು ಮುಂತಾದ ನವಾಬರು ಗದವಾಲ ಮುಂತಾದ ಪಾಳ್ಯಗಾರರು ತಮ್ಮ ತಮ್ಮ ಪಫವುಜ ಸಹ ಸಂಗಡ ಬಂದಿದ್ದರು ನಾಜರಜಂಗರವರು ತಮ್ಮ ಹುಕ್ಕಂ ಶಿವಾಯಿ ಚಂದಾಸಹೇಬರ ಮಾತಿನ ಮೇಲೆ ನೀವಿ ಹೇಗೆ ಬಂದಿರಿ ಎಂದು ತಪ್ಪು ಹೊರೆಸಿ ಬೇಡಿ ಹಾಕಿಸಿ ಪಹಡೇಲಿಟ್ಟರು ಚಂದಾಸಾಹೇಬರು ತಾವು ಕೆಲವು ಫವುಜು ಜಮಾಯಿಸಿಕೊಂಡು ಫರಾಷೀಷರಿಗೆ ಆಸರೆ ಕೊಟ್ಟು ಕರಿಸಿಕೊಂಡು ನಾಜರಜಂಗ್ ೧೭೮. ದವಲತ್ತು ಮಾಡಿ ಮಾಡಿ ನುರು ವರುಷ ಪರಿಯಂತ ಬದುಕಿ .ದೇಹಕ್ಕೆ ಕೇವಲ ಸ್ವಸ್ಥವಿಲ್ಲದೆ ತಮ್ಮ ಮಗನಾದ ಗಾಜಿವುದ್ದೀನ್ ಖಾನರಿಗೆ ದಿಳ್ಳಿ ವಜೀರಿಯಿದ್ದು ಸತ್ತು ಹೋಗಿ ಅವನ ಚಿಕ್ ಪ್ರಾಯದವನು ದಿಳ್ಳಿ ವಜೀರಿ ಮಾಡುತ್ತಾ ಇದ್ದ ಕಾರಂ, ಎರಡನೇ ಮಗನಾದ ನಿಜಾಮರ್ಜ ಮುಲುಕು ನಾಜರದಂಗ ಬಹದವರಿಗೆ ಹೈದರಾಬಾದನು ಅಸಫಜಹಾಅಗಿರಿಯನ್ನು ಸ್ವಾಧೀನ ಮಾಡಿಕೊಟಟ್ಟು ತಾವು ಸ್ವರ್ಗಸ್ಥಾರಾದ್ದರಿಂದ ತಮ್ಮ ತಮದೇಯವರಾದ ಅಸಫಜಹಾರರು ಬರಿಸಿಕೊಟ್ಟು ಹದಿನೇಳು ಕಲಮಿನ ಹುಕ್ಕುಂ ನಾಮೆ ಮೇರೆಗೂ ನಡೆಯದೆ ತನ್ನ ಸ್ವಬ್ಬುದ್ಧಿಯಿಂದ ಜಾಹಿಲಿಯತ್ತಿನಿಂದ ...ದಿವಾನ್ ಪೂರ್ಣಚಂದ್ರ ಎಂಬಾತನು ತಗ್ಯೆರು ಮಾಡಿ,ಷಹನವಾಸಖಾನನೆಂಬುವವನಿಗೆ ದಿವಾನ್ ಗಿರಿ ಕೊಟ್ಟು ಕೆಲವು ಬಠಜಾ ಹಲ್ಕಿ ಚಾಲ ನಡೆಯಿತ್ತಾ ಇದ್ದರು.

ಅಷ್ಟರಲ್ಲಲೇ ಈ ಆರ್ಕಾಡು ಸೀಮೆಯಲ್ಲಿ ನಡೆದ ಅನಾಹುತಗಳು ಕೇಳಿ ಇದರ ಬಂದೋಬಸ್ತಗೆ ಬಗ್ಗೆ ಒಮ್ಮೆ ಫೌಜು ಸುಧಾ ಹೊಸಕೋಟೆ ಮಾರ್ಗವಾಗಿ ಅರುಕಾರು ಸೀಮೆಗೆ ಬಂದರು ಅವರ ಸಂಗಡ ಮೊಖಿತಯಾರ ದಿವಾನ ಸದರಿ ಸಹನವಾಸ ಖಾನರೆಂಬವರಿಗೆ ಈ ನಾಜರಂಗರೇ ಹೋಸತಾಗಿ ಕೊಟ್ಟು ಯಿದ್ದರಿಂದ ಅವರು ಸಂಗಡಲೇ ಇದ್ದರು ಕಡಪೆ ಕಂದನೂರು ಸವಣೂರು ಮುಂತಾದ ನವಾನರ ಗದವಾಲ ಮುಂತಾದ ಪಾಳ್ಯಗಾರರು ತಮ್ಮ ತಮ್ಮ ಫವುಜ ಸಹ ಸಂಗಡ ಬಂದಿದ್ದರು ನಾಜರಜಂಗರವರು ತಮ್ಮ ಹುಕ್ಕುಂ ಶಿವಾಯಿ ಚಂದಾಸಹೇಬನರಿಗೆ ಮಾತಿನ ಮೇಲೆ ನೀವು ಹೇಗೆ ಬಂದಿರಿ ಯೆಂದು ತಪ್ಪು ಹೊರೆಸಿ ಬೇಡಿ ಹಾಕಿಸಿ ಪಹರೇಲ್ಪಟ್ಟರು ಚಂದಾಸಹೇಬರು ತಾವು ಕೆಲವು ಫವುಜು ಜಮಾಯಿಸಿಕೊಂಡು ಫರಾಷೀಷರಿಗೆ ಆಸರೆ ಕೊಟ್ಟು ಕರಿಸೊಕೊಂಡು ನಾಜರಂಗ ಬಹದೂರದ ಸಂಗಡ ತಿರುಗ ಬಿದ್ದು ಪುಲಿಚೇರಿಯಲ್ಲಿಯರಾಗಿ ಪ್ರಮೋದುತ ಸಂಲ್ಲಿ ಹುಚ್ಚು ಹೊಳೆ ಬಂದು ಕಂದನೂರು

ಕೋಟೆ ಕೊಚ್ಚಿ ಹೋದ್ದರಿಂದ ಕಂದನೂರು ನವಾಬ ಹಿಮ್ಮತ್ ಬಹದರು ಸ್ಥಳಕ್ಕೆ ಅಪ್ಪಣೆ ಕೇಳಿದ್ದಲ್ಲಿ ನಾಜರಂಜನ್ ಬಹದರವರು ಅಪ್ಪಣೆ ಕೊಡದೆ ಹೋದ ಕಾರಣ ಮಸಸ್ಸಿನಲ್ಲಿಯಿಟ್ಟು ಕಡಪೆ ಸವಣೂರು ಮುಂತಾದ ಯಾವತ್ತೂ ಏಕವಾಗಿ ಫಿತೂರಿವಳಗೆ ಇದ್ದು ಒಂದು ದಿವಸ ರಾತ್ರಿ ಫರಾಷೀಷರ ಮೇಲೆ ಜಗಳಕ್ಕೆ ಎಂಬುದಾಗಿ ನಾಜರಂಗನ ಅಂಬಾರಿ ಮೇಲೆ ಕೂಡಿಸಿ ತಾವೂ ಅಂಬಾರಿಗಳಲ್ಲಿ ಕುಳಿತುಕೊಂಡು ಎಲ್ಲರೂ ಹೋರಗೆ ಹೊರಟು ಆ ಗಡಬಡುಯಲ್ಲಿ ಹಿಮ್ಮತ್ ಬಹದವರು ತಮ್ಮ ಆನೆಯನ್ನು ನಾಜರಂಗದ ಸಮೀಪಕ್ಕೆ ತಂದು ಪ್ರಾಣಕ್ಕೆ ಹೋಗಿದ್ದ ಜಾಜರಜಮಗರ ತಲೆಯನ್ನು ಕುಯಿದರು ದಂಡಿಯಲ್ಲಿ ಖಜಾನೆ ಮುಂತಾದ ಯಾವತ್ತೂ ಸಿಕ್ಕಿದರೂ ಸಿಕ್ಕಿದ ಹಾಗೆ ಲೂಟಿಸಿದರು ವಬ್ಬರನ ಒಬಒರು ಕಡಿದು ಕೇವಲ ಅನಾಹುತವಾಗಲಾಯಿತು ನಾಜರಜಂಗರ ಬಳಿಗೆ ಮಹಮ್ಮದಲ್ಲೀಖಾನರು ಬದುದು ಇದರಿಂದ ಗಡಿಬಡಿಯೊಳಗೆ ಮಹಮ್ಮದಲ್ಲಿಖಾನರು ವಂಟಿ ಕುದುರೆ ಸಂಗಡ ಹೋಡಿಹೋಗಿ ರಂಜನಗಡದ ನವಾಬ ಮಾತಬರಖಾನರ ಕಂಡು ಅವರ ಸಂಗಡ ಕೆಲವು ಮಂದಿ ಆಡು ತೆಗೆದುಕೊಂಡು ತಿರುಚನಾಪಲ್ಲಿಗೆ ಕೊಟೆಗೆ ಓಡಿಹೋಗಿ ಅಲ್ಲಿ ತನ್ನ ಹೆಂಡತಿ ಮಕ್ಕಳು ಯಿದ್ದದರಿಂದ ಅಲ್ಲಿಗೆ ಸೇರಿ ಇಂಗ್ರೀಜರಿಗೆ ಮಧ್ಯಸ್ಥ ಇಟ್ಟು ಅವರ ಫವುಜ ಕೆಲವು ತರಿಸಿಕೊಂಡು ತಿರುಚನಾಪಲ್ಲಿ ಕೋಟೆಯೊಳಗೆ ಅವರ ಠಾಣೆಯಿಟ್ಟು ಚನ್ನಪಟ್ಟಣ ಕೋಟೆ ಕಟ್ಟುವ ಬಗ್ಗೆ ಅವರಿಗೆ ಸ್ಥಳ ಕೊಟ್ಟು ಬಂದೋಬಸ್ತು ಮಾಡಿಕೊಂಡಿರಲಾಗಿದೆ ಅಸಫಜಹಾ ಹಿತಾಹಿತ್ ಮೋಹದೀನ್ ಖಾನರು ದಿವಾನ್ ಷಹನವಾಸ್ ಖಾನರು ಕಡೆಗೆ ಕಂದನೂರು ವಗೈರ ನವಾಬರು ಹೈದರಾಬಾದು ಫವುಜ ಸಿಥಾ ಆರ್ಕಾಡು ಸೀಮೆ ನವಾನಗಿರಿಯ ಬಂದೋಬಸ್ತು ನೀವೆ ಮಾಡುಕೊಳ್ಳಿ ಎಂದು ಚಂದಾಸಾಹೇಬರಿಗೆ ಅಪ್ಪಣೆ ಕೊಟ್ಟು ತಾವೆಲ್ಲಾ ಹೈದರಾಬಾದಿಗೆ ಹೋಗತಕ್ಕ ಬಗ್ಗೆ ಕಲ್ಲುರು ಕಣಿವೆಯೊಳಗೆ ಹೊರಟು ಸಿದ್ದವಟ ರಾಚೋಟಿಯ ಬಳಿಯಲ್ಲಿ ದಂಡು ಇಳಿದಿದ್ದರಿಂದ ನಾಜರಜಂಗ ತಮ್ಮಂದಿರಾದ ನಿಜಾಮಲ್ಲಿಖನನು ಕಡಪೆ ಕಂದನೂರು ವಗೈರ ನವಾಬರುಬ ಹಯದರಾಬಾದು ಫವುಜ ಸುದಾ ಆರ್ಕಾಡು ಸೀಮೆನವಾಬರಿಗೆ ಬಂದೋಬಸ್ತು ನಾವೆ ಮಾಡಿಕೊಳ್ಳಿ ಎಂಬುದಾಗಿಚಂದಾಸಾಹೇಬರಿಗೆ ಹೋಗತಕ್ಕ ಬಗ್ಗೆ ಕಲ್ಲೂರು ಕಣಿವೆಯೊಳಗೆ ಹೊರಟು ಸಿದದಪಟ ರಾಚೋಡಿಯ ಬಳಿಯಲ್ಲಿ ದಂಡು ಇಳಿದಿದ್ದರಿಂದ ನಾಜರಜಂಗರ ತಮ್ಮಂದಿರಾದ ನಿಜಾಮಲ್ಲಿಕಾನರು ಸಲಾಬತ್ ಜಂಗರು ಬಸಾಲತ್ ಜಂಗರು ಮಗಲಲ್ಲೀಸಾಬರು ಮುಂತಾದ ನಾಲ್ಕು ಜನ ತಮ್ಮಮದಿರು ಪುನೇದ ಶ್ರೀಮಂತರ ಕಡೆಯಿಂದ ಕುಮುಕಿ ಬಂದಿದ್ದ ನಾಲ್ವತ್ತು ಸಾವಿರ ಕುದುರೆ ಸರದಾರನಾದ ರಾಜಾಚಂದ್ರಸೇನ ಬಹದರು ಬಳಿ ಸೇರಿದ್ದರು. ಕಡಪೆ ನವಾಬರು ಸಿದ್ದವಟದ ಕೋಟೆ ಯೋಳಗೆ ಅವ್ರುತನಕ್ಕೆ ಯತ್ನ ಮಾಡಿಸಿ, ಹಿತಾಯತ್

ಮೋಹದ್ದೀನ್‌ಖಾನರು ತಮ್ಮ ಬಳಿಯಲಿಲರುವ ಬದ್ದ ಮಸಲತ್ತಿನವರ ಮಾತಿನ ಮೇಲೆ ಕೆಲವು ಜನ ತುಂಟ ಸರದಾರರು ಫವುಜಿಗೆ ಸಹ ಅಪ್ಪಣೆ ಕೊಟ್ಟಿದ್ದರಿಂದ ಇವರು ಕೋಟೆಯೋಳಗೆ ಹೊಕ್ಕು ಜ್ಯಾಪತಿಗೆ ಕುಳಿತ್ತಿದ್ದ ಜನರನ    ಕಡಿದ್ದರಿಂದ ಅವರು ಇವರನ ಕಡಿದು ಹೇರಳ ಜಘಳವಾಗಿ, ಕಡಪೆ ನವಾಬರ ಕಾಲಿಗೆ ಭಾಲೆಯ ಪೆಟ್ಟು ತಗಲಿ ವಂಟಿ ಕುದುರೆ ಸಂಗಡ ತನ್ನ ಇಲಾಖೆ ಗುರ್‍ರಂಕೊಂಡೆಗೆ ಓಡಿಹೋದರು. ಕಂದನೂರು ನವಾಬ ಹಿಮ್ಮತ್ ಬಹದರ್

"ದಿವಾನ್ ಷಹನವಾಸ್ಖಾನರು ಮುಂತಾದವರು ಲಡಾಯಿ ಮಾಡಿ ಪಾರಾಗಿ ಹೋದರು. ಇನ್ನೂ ಹೇರಳ ಜನ ಉಭಯ ಫೌಜಿನಲ್ಲೂ ಠಾರಾದರು. ಈ ವರ್ತಮಾನ ಹಿತಾಯತ್ ಮೊಹದಿನ್ ಖಾನರಿಗೆ ತಿಳೀಯುವುದಕ್ಕೆ ಮೋದಲೇ ನಿಜಾಮಲ್ಲಖಾನರು ಮುಂತಾದರ ಮಸಲತ್ತಿನ ಮೇಲೆ ಚಂದ್ರಸೇನರ ಕಡೆ ಫವುಜು ಹಿತಾಯತ್ ಮೊಹದೀನ್ ಖಾನರ ಖಾಸ ಡೇರೆ ಮೇಲೆ ಬಿದ್ದು, ಹಿತಾಯತ್ ಮೊಹದೀನ್ ಸಾಹೇಬರ ತಲೆ ಕುಯಿದು ಹಾಕಿದರು. ವಟ್ಟಿಗೆ ಆ ಹೊತ್ತಿಗೆ ಲಡಾಯಿಯಲ್ಲಿ ಐವತ್ತು ಅಂಬಾರಿ ಖಾಲಿ ಆಗಿ ಹೋದವು. ಸವಣೂರು ವಗೈರೆ ಕೆಲವು ನವಾಬರು ಕೆಲವು ಸರದಾರೂ ಸಹ ತಂತ್ಮಮ ವೂರುಗಳಿಗೆ ಓಡಿ ಹೋದರು. ಚಂದ್ರಸೇನನು ನಿಜಾಮಲ್ಲಿಖಾನರ ಅಣ್ಣ ಮಗಲಲ್ಲೀಗೆ ಹೈದರಾಬಾದ ದವಲತ್ತು ಸಾಲಜಂಹರಿಗೆ ಅದವಾನ ನವಾಬಗಿರಿ, ಸಲಾಬತಜಂಗರಿಗೆ ಗೋಲಕೊಂಡೆ ಮೊಕರರು ಮಾಡಿ ಪುನಗೆ ಹೊರಟುಹೋದರು. „೧೧೬

**ಕಿಲ್ಲೆದಾರ ಅಚ್ಚಿಸಖಾನ್ :** "ಶಾರ್ವರಿ ಸಂತ್ರರದಲ್ಲೂ ದುರ್ಗದಲ್ಲು ದೌಲತ್‌ಖಾನ್ ಜವಾದಾರ ಇದ್ದಾಗ. ಇಲ್ಲೇ ಕಿಲ್ಲೇದಾರ ಅಚ್ಚೀಸಖಾನ್ ಕಿಲ್ಲೇದಾರಿ ಮಾಡಿತ್ತಾ ಇದ್ದಾಗ. ಈತಗೆ ದೌಲತ್‌ಖಾನ್ ಜವಾದಾರನ ಹೆಸರಿಂದ ನಿಮ್ಮ ಕಿಲ್ಲೇದಲ್ಲಿ ಮೆದಕೇರಿನಾಯಕರ ದೇವರು ಕಾಡಮಲಿಂಗನ ದೊಣ್ಣೆ ಇದ್ದೀತಂತೆ. ಆದಕ್ಕೆ ಭೊಗಾರದ ಕವಚ ತೊಡಿಸಿ ಇದ್ದೀತಂತೆ. ಅದರ ಕವಚ ಕಡೆಗೆ ತೆಗಿಸಿ ಆ ಕಳುಗಿಸಿ ಕೊಡಿ ಎಂದು ತಾಕ[>ಕಿ] ತೀ ದಖಿಮು ಬಂದ ಕಾರಣ, ತೆಗೆಸಿ ತೂಕ ನೋಡಿದರು.ಎಂಭತ್ತು ವರಹಾದ ತೂಕ ಇತ್ತು. ಕಡೆಗೆ ತೆಗೆದು ತೂಕ ಮಾಡಿದ ಮೇಲೆ ಇಲ್ಲಿ ನಾವು ಏನು ಕಾರಣ ಇಟ್ಟುಕೊಂಬೇವು' ಎಂದು ಬಂದಿದ್ದ ಊಳೀಗದವರ ಸಂಗಡ ವಾಲೇಕಾರರ ಕೊಟ್ಟ ದುರ್ಗಕ್ಕೆ ದೌಲತ್ ಖಾನನ ಬಳಿಗೆ ಕಳುಹಿಸಿಕೊಟ್ಟರು

ಪರೀಧಾರಿ ಸಂತ್ಸರದಲ್ಲು ಸುಲ್ತಾನ ಠಾಣಾ ಇದ್ದಾನ, ಈ ತುಕಡಿ ಸುಬೇದಾರ ಷೇಕುಇಸುಮಾಲುಗೆ ಇಲ್ಲಿ ಅಮಲು ಇತ್ತು ಈತಗೆ ಕಣುಕುಪ್ಪೆಯಲ್ಲಿ ಇರುವ ತೋಪುಗಳು ಯಾವತ್ತನ್ನೂ ಒಡೆ ಹೊಡಿಸಿ ಪಟ್ಟಣಕ್ಕೆ ಕಳುಹಿಸಿಕೊಡುವುದು ಎಂಬುದಾಗಿ ಫರವಾನೆ ಬಂತು. ಫರವಾನೆ ಬಂದ್ದರಿಂದ ಮೇಲುದುರ್ಗದ ಮೇಲೆಯಿದದ ಉಚ್ಚಂಗಿ. ಕಾಡಮಲಿಂಗ ಎಂಬ ಎರಡೂ ತೋಪುಗಳನ್ನೂ ಗುಡ್ಡದಿಂದ ಕೆಳಕ್ಕೆ ಹಾಕಿಸಿ, ಕಮ್ಮಾರವನ್ನಕರೆಸಿ ಒಡೆ ಹಾಕಿಸಿದೆ. ಒಡೆದ ಕಬ್ಬಿಣ ಪಟ್ಟಣಕ್ಕೆ ಕಳಿಸಲಿಲ್ಲ. ಅರಮನೆಯಲ್ಲಿ ಒಂದು ಕೊಟಡಿಯಲ್ಲು ಹಾಕಿಸಿದ."[೧೧೭]

**ಜುಲುಫಿಕರಖಾನ್** : "ದಿಳ್ಳಿಯಿಂದ ಬಂದಿದ್ದ ಫವುಜಿನ ಸರದಾರರು ದಿಳ್ಳಿ ಪಾದಿಷಾಯವರಿಗೆ ಬರೆದ್ದರಿಂದ. ಅಲ್ಲಿನ ವಜೀರ ಹಸದ್ ಖಾನರ ಕೊಮಾರ ಜುಲುಫಿಕರ ಝಾನರನ ಅವರ ಸಂಗಡ ಕೆಲವು ಫವುಜು ಸಹ ಕೊಟ್ಟು ಈ ಕರ್ಣಾಟಕ ಸಂಸ್ಥಾನದ ರಾಜ್ಯದ ಬಂದೋಬಸ್ತು ಮಾಡಿಸಿ ಬರುವಂತೆ ಕಳುಹಿಸಿದ್ದರಿಂದ. ಅಪ್ಪನೆ ಪ್ರಕಾರ ಜುಲಫಿಕರಖಾನರು ಈ ರಾಜ್ಯಕ್ಕೆ ಬಂದು ಕ್ಷೀರನದೀ ತೀರದಲ್ಲಿರುವ ಷಡಾರಣ್ಯವೆಂಬ ಅಡವಿಲ್ಲಿ ಇಳಿದುಕೊವುಡು, ಸುತ್ತೂ ಯಾವತ್ತು ಜನ ಪಾಳ್ಯಗಾರರು ಮುಮತಾದವರನ್ನೆಲ್ಲಾ ಕರೆಸಿಕೊಂಡು ,ಮಸಲತ್ತು ಮಾಡಿ ತಾವು ಇಳಿದಿದ್ದ ಅರಣ್ಯವೇ ವಂದು ಊರು ಕಡ್ಡಿಸಿ, ಅದಕ್ಕೆ ಅರುಕಾಡು ಯೇಂಬದಾಗಿ ಹೆಸರಿಟ್ಟು, ಅದು ವಂದು ಸಭೆ ಮೊಕರರುಮಾಡಿ, ಆ ಸುಭೇದ ನವಾಬಗಿರಿ ತಮ್ಮ ಸಂಗಡ, ಅವರ ಸಂಮೀಪದಲ್ಲಿ ಮೋಃಖ್ತಿಯಾರಿ ದಿವಾನ್ ಗಿರಿ ಸಾತ್ತುಲ್ಲಾಖಾನರಿಗೆ ಮೊಕರು ಮಾಡಿಸಿ, ಅವರ ಕಯಕೆಳಗೆ ಹನ್ನೇರಡು ಸಾವಿರ ಕುದುರೆ ಮತ್ತು ಸಾವಿರ ಬರು ಇಪ್ಪತ್ತು ಸಾವಿರ ಅಹಷಾಂ ಕರ್ಣಾಟಕ ಮುಮತಾಗಿ ಐವತ್ತು ಸಾವಿರ ಫವುಜು ಐಇಡುವಂತೆ ಮೋಕರರು ಮಾಡಿಸಿ, ಅವರ ಹುಕ್ಕುವಿನಲ್ಲಿ ಶ್ರೀರಂಗಪಟ್ಟ ಸಾತಗಡ ಘಾಟಗಳಿಂದ ಹಿಂದು ಪೂರ್ವ ಸಮುದ್ರ ತೀರದ ಪರಿಯಂತರಿರುವ ದ್ರಾವಿಡರಾಜ್ಯ ಕಾಳಹಸ್ತಿ ದಾಮೆರ್ಲ ವಲಗೋಟಿ ತಿರುಚನಾಪಲ್ಲಿ ಮಧುರೆ ತಂಜೈವೂರು ನೆಲ್ಲೂರು ಸವಾಪಲ್ಲಿ ಮಛಲಿಬಣದರ್ ಚಿತ್ತೂರು ಮುಂತಾದ ಪಾಳ್ಯಗಾರರು ಪಗದಿ ಕೊಟ್ಟುಕೊಂಡು, ಸುಭೇ ನವಾಬರ ತಾಬೇದಾರಿಯೋಳಗೆ ಜಾಜರಿರುವಮತೆಯೂ, ಸುಭೆದ ನವಾಬರು ಹೈದರಾ ಬಾದು ಅಸಫಜಹಾನ್ ರವರತಾಬೇದಾರಿಯಲ್ಲಿರು ವಂತೆಯೂ ಮೋಕರರು ಮುಡಿಸಿದರು., ಈ ಬಗ್ಗೆಲ್ಲಾ ದಿಳ್ಳಿಯಿಂದ ಸನ್ನದು ಖಿಲ್ಲದು ಖಿಲ್ಲತ್ತು ಮುಂತಾದ್ದು ತರಿಸಿಕೊಟ್ಟು, ಕೃಷ್ಣಾನದಿಯಿಂದ ಶಿಂಗರಪಟ್ಟಿ ಘಾಟ ಪರಿಯಂತರು ಇರುವ ರಾಜ್ಯವೆಲ್ಲಾ ಶೀರ್‍ಯ ವಂದು ಸುಭೆ ಮೊಕರ್‍ರು ಮಾಡಿಸಿ, ಅಲ್ಲಿ ಒಬ್ಬ ನವಾಬರ ಇಟ್ಟು ಪೆನುಗೊಂಡೆ

ಸಹ ಕರ್ಣಾಟಕದೇಶ ಶೀರ್ಯದ ಸುಭೇಕ್ಕೆ ದಾಖಲ್ಮಾಡಿ, ವುತ್ತರ ದಿಕ್ಕಿನಲ್ಲಿ ಕೆಲವು ಆಂದ್ರಪ್ರದೇಶ ಅದವಾನ ವಂದು ಸಿಭೆ ಮೊಕರರು ಮಡಿ, ಆಸುಬೇಕ್ಕೆ ದಾಖಲು ಮಾಡಿಸಿ, ಸದರಿ ಮೂರು ಸುಭೆ ನವಾಬರರೂ ಬಿಜಾಪುರ (ಮಹಾರಾಷ್ಟ್ರ ರಾಜ್ಯ) ಬಿದರೆ (ಹಿಂದೂರಾಜ್ಯ) ಅಹಮ್ಮದನಗರ (ಗುಜ್ಜರರಾಜ್ಯ) ಮುತಾಮದ ಮೂರು ಸುಭೆ ನವಾಬರು ಸಹ ಸಾರೆಟ ಸುಭೆ ಆ ದಖಿನ್ ನವಾಬರು ಇದು ಂಹೊರ್ತು ದಿಳ್ಳಿಯಿಂದ ಜಹಗೀರು ಸನ್ನದು ಅದಂಥ ಕಡಪ ಕಮದನೂರು ಸವನೂರು ದೊಡ್ಡ ಬಳ್ಳಾಪುರಿ ಚಿಲ್ಲರ ನವಾಬರು ಸಹ ಯಾವತ್ತು ಜನವೂ ದಿಳ್ಳಿಗೆ ದಕ್ಷಿಣದೇಶದ ವಜೀರನಾದ ಹೈದರಾಬಾದು ಅಸಫಜಹಾನನ್ರ ತಾಬೇತಾರೀಲಿ ಇರುವಮತೆ ಮೊಕರರು ಮಾಡಿಸಿ, ಜುಲಫಿಕರಖಾನರು ಫವುಜು ಸದಾ[>ಹಾ] ದಇಳ್ಳಿಗೆ ಹೊರಟು ಹೋದರು."[೧೧೮]

**ಆರ್ಕಾಡು ಸಂಸ್ಥಾನದ ನವಾನರು** :

**ದಾವೂದ ಖಾನ್, ಸಾತುಲ್ಲಖಾನ್, ಅನವುದ್ದಿನ್ ಖಾನ್, ನಾಜರಜಂಗ್, ಹಿಮ್ಮತೆ ಬಹದರು, ಮೊಹದ್ದೀನ್ ಖಾನ್ :** "ಆರ್ಕಾಡು ನವಾಬ ದಾವೂದಖಾನರಿಗೆ ಬಿಜಾಪುರದ ಸುಭೆ ನವಾಬಗಿರಿ ಮೊಕರಿರಾಗಿ, ಸಾತ್ತುಲ್ಲಾಕಾನರಿಗೆ ಆರ್ಕಾಡು ಸುಭೆ ನವಾಬರಿಗೆ ಮೊಕರರಾಗಿ ಸಂನದು ಶಿರಪೇಂಚ ಖಿಲ್ಲತು ಮುಂತಾದ್ದು ದಿಳ್ಳಿಯಿಂದಂಲೇ ಅರ್ಕಾಡಿಗಡ ಬಂತು. ಅದು ವರೆಗೆ ನವಾಬ ಸಾತ್ತುಲ್ಲಾಖಾನರಿಗೆ ಸುಮಾರು ಈವತ್ತು ವರುಷ ವಯಸ್ಸಾಗಿತ್ತು ಮತ್ತು ಐವತ್ತೈದು ವರುಷ ಪರಿಯಂತರ ದವುಲತ್ತು ಮಾಡಿದರು. ಮದ್ಯೆ ಚಂಚಿ ಜಯಸಿಂಗು ಮುಂತಾದ ಕೆಲವು ಜನ ಪಾಳ್ಯಗಾರರು ಜಮೀನ್ ದಾರ್ ಮುಂತಾದವರು ಪಗದಿ ವಗೈರೆ ಸಲೀಸು ಕೊಡದೆ, ಹುಕ್ಕುಮಿನಲ್ಲಿ ಚನ್ನಾಗಿ ನಡೆಯದೆ, ತಿಂಟಾಟ ಮಾಡಿದವರಿಗೆ ಚೆನ್ನಾಗಿ ನಶಿಯತ್ತುಗಳು ಮಾಡಿಸಿ ಬಮದೋಬಸ್ತ ಮಾಡಿಸಿ ದುಷ್ಟನಿಗ್ರಹ ಶಿಷ್ಟಪರಿಪಾನೆಎ ಸಹ ಮಡಿಸುತ್ತ ಅವರವರ ವರ್ಣಾಶ್ರಮ ಜಾತಿ ಮರ್ಯಾದೆಯಲ್ಲಿರುವಂತೆ ಯಾವ ರೀತಿಯಿಂದ ಬಂದೋಬಸ್ತು ಮಾಡಬೇಕೋ ಆ ರೀತಿಯಲ್ಲಿ ಬಂದೋಬಸ್ತು ಮಾಡಿಸಿ, ದೇವಬ್ರಾಹ್ಮರ ಅಗ್ರಹಾರಗಳು ಇನಾಮತಿ ಭಟಮಾನ್ಯಗಳು ಫಕೀರ ಜಂಗಮ ದಾಸರಿ ಮುಂತಾದವರ ಇನಾಮು ಗ್ರಾಮ ಭೂಮಿಗಳು ಜಮೀನ್ದಾರ್ ತ್ಯಾಜಗಾರ್ ಅಹಲೇಕಾರ್ ಬಾರಾಬಲೂತಿ ಜನ ಮುಂತಾದವರ ಇನಾಮು ಜಹಗೀರು ಮುಮತಾದ ಗ್ರಾಮ ಭೂಮಿಗಳು ರುಸುಮು ವರ್ತನೆ ತಹರೀರು ಮುಂತಾದ್ದು ಯಾವತ್ತು ಲೇಶ ಹರಕತ್ತು ಇಲ್ಲದಂತೆ ಸಲೀಸು ನಡೆಯುವಂತೆ ಬಂದೋಬಸ್ತು ಮಾಡಿಸಿಲ್ಲ ಅಹಲೇಕಾರರು ಮುಂತಾದ ಜನಗಳಿಗೆ ತಾಜಿ ತವಾಜಿಂ ಮುಂತಾದ ಮರ್ಯಾದೆಗಳು ಅವರವರ ಲಾಯಖ ಮೇರೆಗೆ ಲೇಶ ನ್ಯಾನ್ಯತೆ

ಇಲ್ಲದೆ ನಡೆಯುವಂತೆಯೂ ತನ್ನ ರಾಜ್ಯದಲ್ಲಿ ಒಬ್ಬರಿಗೊಬ್ಬರು ಬೇಜಾ ಜಗಳಗಳು ಆಡದೆ ವಬ್ಬರನ ಕಮಡರೆ ಒಬ್ಬರಿಗೆ ಅಸಹತ್ಯೆಯಿಲ್ಲದೆ, ದೇವರು ಗುರು ಧಣಿ ತಮದೆ ಅಣ್ಣ ಮಾವ ಮುಮತಾದ ಹಿರಿಯರಲ್ಲಿ ಜನರು ಭಕ್ತಿಯಿಂದ ಇರುವಂತೆಯೂ ಲೇಶ ಅನ್ಯಾಯಗಳು ಅನಾಚಾರಗಳು ಸುಳ್ಳುಚಾಡಿ ಕ್ಷುದ್ರಗಳು ಮುಂತಾದ್ದು ನಡೆಯುವಂತೆಯೂ ಲೇಶ ಅನ್ಯಾಯಗಳು ಅನಾಚಾರಗಳು ಸುಳ್ಳುಚಾಡಿ ಕ್ಷುದ್ರಗಳು ಮುಂತಾದ್ದು ನಡೆಯುವಂತೆಯೂ ಹಿಂದೂ ಮುಸಲ್ಮಾನರು ತಮ್ಮ ತಮ್ಮ ಶಾಸ್ತ್ರದ ಕಿತಾಬುಗಳ ಪ್ರಕಾರ ನಡೆಯುವಂತೆಯೂ ಬಂದೋಬಸ್ತು ಮಾಡಿಸಿ, ಸದರಿ ಬರೆದಿರುವ ಪ್ರಕಾರ ಕಿತಾಬುಗಳ ಪ್ರಕಾರ ನಡೆಯುವಂತೆಯೂ ಹಿಂದೂ ಮುಸಲ್ಮಾನರು ತಮ್ಮ ತಮ್ಮ ಶಾಸ್ತ್ರದ ಕಿತಾಬುಗಳ ಪ್ರಕಾರ ನಡೆಯುವಂತೆಯೂ ಬಂದೋಬಸ್ತು ಮಾಡಿಸಿ, ಸದರಿ ಬರೆದಿರುವ ಪ್ರಕಾರ ಸತ್ಯವಾಗಿ ನಡೆಯುವಂಥ ದೊಡ್ಡ ಮನುಷ್ಯರಿಗೆ ದೊಡ್ಡ ದೊಡ್ಡ ಅಧಿಕಾರಿಗಳ ಮೊಕರರು ಮಾಡಿಸಿ, ಅವರವರು ಸ್ನೇಹದಲ್ಲಿ ಲೇಶ ವಿರುದ್ಧವಿಲ್ಲದೆ ಅರಮನೆ ಕೆಲಸದಲ್ಲಿ ನರ್ವಂಚನೆಯಿಂದ ಇರುವಂತೆ ಬಂದೋಬಸ್ತು ಮಾಡಿಸಿ ತುಂಟರಾದ ಹಲ್ಕೆ ಜನರನ ದರಬಾರಿನಲ್ಲೂ ಅಹಲೇಕಾರ ಮನೆಗಳಲ್ಲೂ ಚಾಕರಿ ಮುಂತಾದ ಕೆಲಸದಲ್ಲಿ ಯಿಟ್ಟು ಬಳಸಿಕೊಳ್ಳದಂತೆಯೂ ಶೆಟ್ಟಿ ವರ್ತಕ ರೈತ ಮುಂತಾದವರು ಸುಳ್ಳು ಫಿರಿಯಾದು ಮೆಣಸಮಯ ಮುಂತಾದ್ದು ಮಾಡದೆ ತಂತಮ್ಮ ವ್ಯಾಪಾರ ಸಾಗುವಳಿ ಮುಂತಾದ ಕೆಲಸದಲ್ಲಿ ಯಿರುವಂತೆ ಬಂದೋಬಸ್ತು ಮಾಡಿಸಿ, ಬ್ರಾಹ್ಮಣ ಅಹಲೇಕಾರರು ಪ್ರಾತಃಕಾಲವಾದ ಯೆರಡು ಘಳಿಗೆಯೊಳಗಾಗಿ ಸ್ನಾನ ಸಂಧ್ಯಾವಂದನೆ ಮುಂತಾದ್ದು ಮಾಡಿಕೊಂಡು ಕಚೇರಿಗೆ ಬರುವಂತೆಯೂ, ಬಾಕಿ ಹಿಂದು ಮುಸಲ್ಮಾನ ಯಾವತ್ತು ಜನವೂ ಕೈಕಾಲು ಮುಖ ತೊಳೆದುಕೊಂಡು ಪ್ರಾತಃಕಾಲವಾದ ವಂದು ಘಳಿಗೆ ವರೆಗೆ ನಮಾಜು ಮುಂತಾದ್ದು ಮಾಡಿಕೊಂಡು ಕಚೇರಿಗೆ ಬಂದು, ಯಾವತ್ತು ಜನರು ಹದಿನಾಲ್ಕು ಘಳಿಗೆ ಪರಿಯಂತರ ಹಾಜರು ಇದ್ದು, ತಂತಮ್ಮ ಮನೆಗಳಿಗೆ ಹೋಗಿ ಮೂರು ಝಾವಕ್ಕೆ ಪುನಃ ಕಚೇರಿಗಳಿಗೆ ಬಂದು ಸಾಯಂಕಾಲಕ್ಕೆ ಅರೆ ಘಳಿಗೆ ಯುರುವಾಗ್ಯೆ ನದಿಗೆ. ತಮ್ಮ ತಮ್ಮ ಮನೆಗಳಿಗೆ ಸಹ ಹೋಗಿ ಸಂಧ್ಯಾವಂದನೆ ಮುಂತಾದ್ದು ಮಾಡಿಕೊಂಡು ಸಾಯಂಕಾಲವಾದ ಅರೆಘಳಿಗೆ ಪುನಃ ಕಚೇರಿಗೆ ಬಂದು, ಸಾಯಂಕಾಲವಾದ ನಾಲ್ಕು ಘಳಿಗೆ ತಮ್ಮ ಮನೆಗಳಿಗೆ ಹೋಗುವಂತೆ ಕಾಯಿದೆ ಮಾಡಿಸಿ, ಸತ್ಯದಿಂದ ಐವತ್ತೈದು ವರುಷ ಪರಿಯಂತ್ರ ದವಲತ್ತು ಮಾಡಿದರು."[೧೧೯]

**ಯಲಹಂಕದ ಪ್ರಭುಗಳು :** "ಪೂರ್ವದೇಶದಿಂದಾ ಯೇಳು ಬಂಡಿಯವರು ಬೀಗರು ಬಂದು. ಪಂಚನಂದಿ ಕ್ಷೇತ್ರ ಪಂಚಕ್ರೋಶ ಮಧ್ಯದಲ್ಲಿ ದಂಡಕಾರಣ್ಯದಲಿ ವಂದು ಹುತ್ತಿದ ಮರೆಯಲ್ಲಿ ವಾಸಮಾಡಿಕೊಂಡು ಯಿರುತಾ ಯಿದ್ದಾ ಸಮಯದಲ್ಲಿ ಗ್ರಾಮಗಳ ಪುರೋಹಿತ ನಮಿತ್ಯವಾಗಿ ಹೋಗಿ ನಾಗಾಜೋಯಿಸರ್ರು ಯಿಮ್ಮಡಿ ಬೈರೆಗೌಡ ಮುಂತಾದ ಯೇಳು ಬಂಡಿಯವರನು ಕಂಡು. ಅವರ ಬಳಿಗೆ ಹೋಗಿ. ಆಶೀರ್ವಾದ ಮಾಡಿದ್ದರಿಂದಾ ಆ ಗೌಡರು ನಾಜೋಯಿಸರನ (ಪ್ರತ್ಯಗ) ತಾವು ನಮ್ಮ ಬಳಿಗೆ ಬಂದು ನಮಗೆ ದಿವಸ ವರಗಳು ಹೇಳಿ ಯಂಬುದಾಗಿ ಕೇಳಿದ್ದರಿಂದಾ. ವಂದಾನುವಂದು ದಿವಸ ಅತ್ತಿ ಮರಕ್ಕೆ ತೊಟ್ಲ ಕಟ್ಟಿಕೊಂಡು ಯಿದ್ದ ಸಮಯದಲ್ಲಿ. ವಂದು ದೃಢ ಸರ್ಪ ತೊಟ್ಲ ಮೇಲೆ ಹತ್ತಿ ಆ ಶಿಶುವಿಗೆ ಸೂರ್ಯಕಿರಣ ಉಪದ್ರ ಯಿಲ್ಲದ ಹಾಗೆ ಸಂರಕ್ಷಣೆ ಮಾಡಿಕೊಂಡು ಯಿರತಾ ಯಿದ್ದದ್ದರಿಂದಾ. ಅಲ್ಲಿ ಗ್ರಾಮ ಕಟ್ಟಬೇಕೆಂದು ತರಗು ಗೂಡಿಸೊ ಸಮಯದಲ್ಲಿ ಅವರ ಪುಣ್ಯೋದಯದಿಂದಾ ಬಹಳ ದ್ರವ್ಯ ಲಭವಾದ್ದರಿಂದ ಗ್ರಾಮವನ್ನೂ ಕಟ್ಟಿ ಪರಿದತ್ತಿಯಂಬ ನಾಮದೇಯ ವಿಟ್ಟು ಅಲ್ಲಿಂದಾ ಬೇಟೆ ಮಾರ್ಗವಾಗಿ ಬಂದದ್ದರಿಂದ ಯೀ ಅಡವಿಯಲ್ಲಿ ದೇವಗೌಡ ಯಂಬವನು ವಂದು ಹುಡ್ಯ ಕಟ್ಟಿಕೊಂಡು ಯಿರುತ್ತಾ ಯಿದ್ದದ್ದರಿಂದಾ ಅಲ್ಲಿ ಬೇಟೆ ನಿಮಿತ್ಯ ನಾಯಿ ಬಿಡಲಾಗಿ ಕುಂದಂ ನಾಯಿನ ತರ [+ಬ]ಲಾಗಿ ಯೀ ಭೂಮಿ ಗಂಡುಭೂಮಿ ಯಂದು ನಿಶ್ಚಯ ಮಾಡಿ, ಅವನಿಗೆ ಅದೇ ಅವಂದು ಗ್ರಾಮ ಕಟ್ಟಿಸಿಕೊಟ್ಟು ಅವನ ಅಲ್ಲರಿಸಿ, ಮುಂದೆ ಕೋಟಿಗೆ ಪ್ರಯತ್ನಮಾಡೋದಕ್ಕೆ ಉದ್ಯುಕ್ತರಾಗಿ ಯಿದ್ದರು.

ಯೀ ಕೋಟೆ ಕಟ್ಟುವಾಗ್ಯೆ ರಣ ಬೈರೆಗವುಡರು ಮುಹೂರ್ತ ನಿಶ್ಚಯಮಾಡಿದ ಸಂವತ್ಸರಕೆ ಶಾಲಿವಾಹನ ಶಕವರ್ಷಂಗಳು ೧೪೨೩ನೇ ಪ್ರರ್ತಮಾನ...... ನಾಮ ಸಂವತ್ಸರ ಚೈತ್ರ ಶುದ ೧೫ ಗುರುವಾರ ಚಿತ್ತಾ ನಕ್ಷತ್ರದ ಉದಯದ ೫ ಘಳಿಗೆ ವೃಷಭ ಲಗ್ನದಲ್ಲಿ ಹೋರೆದ್ರೆ ಕಾರನವಾಶ ದ್ವಾದಶಾಂಶ ತ್ರೀತಾಂಶ ಯೀ ಶುಭ ಷೆವರ್ಗ ಶೊರ್ದ್ವಿಯಾಗಿ ಗಜಾಯದಿಂದಾ ವಾಸ್ತು ಪ್ರಕಾರ ಶಂಕು ಸ್ಥಾಪನೆ ಮಾಡಿ. ಚಂದ್ರಮಾಳೇಶ್ವರಸ್ವಾಮಿಯವರ ಸನ್ನಿಧಾನಕ್ಕೆ ಬಂದು. ಫಲ ಪುಷ್ಪ ಸಮರ್ಪಣೆ ಮಾಡಿ.

ದೇವಬ್ರಾಹ್ಮಣರ ಸಂತರ್ಪಣ ಮಾಡಿಸಿ. ಯೀ ಸಭೆಯವರ ಕೈಲಿ ಆಶೀರ್ವಾದವನ್ನು ತೆಗೆದುಕೊಂಡು. ಪುರೋಗವಾಗಿ ವಿನಾಯಕ ಪ್ರಾರ್ಥನೆಯನ್ನು ಮಾಡಿಶಿ. ಯಿಶಾನ್ಯಭಾಗದಲ್ಲಿ ಶಂಕುಸ್ಥಾಪನೆ ಮಾಡಿಶಿ,ಕೋಟೆಯನ್ನು ಹಾಕಿಶಿ. ಪೇಟೆ ಕಟ್ಟಿಶಿ, ಶೆಟ್ಟಿ ವರ್ತಕರನ ಕವುಲ ಕೊಟ್ಟು ಕರಸಿ. ಪೇಟೆ ವಸತಿ ಮಾಡಿ, ದೇವಣೇಪುರವೆಂಬ ನಾಮಧೇಯವ ಬೈರೇಗೌಡ ಅಯ್ಯನವರು ತನ್ನ ಮೂರು ಮಂದಿ

ಕುಮಾರ್ರ ವಲಗೆ ಜೇಷ್ಠಪುತ್ರನಾದ ಸಣ್ಣ ಬೈರೆಗೌಡರಿಗೆ ಪಟ್ಟಾಕಟ್ಟಿ ಪಟ್ಟಾಭಿಷೇಕವನ್ನು ಮಾಡಿಶಿ, ಬುಕ್ಕರಾಯರ ಬಳಿಯಿಂದಾ ವುಡುಗರೆ ಉಚಿತಾಭರಣಗಳು ತರಿಸಿಕೊಂಡು. ಯೀ ದೇವಣಾಪುರದ ಸಂಸ್ಥಾನಕ್ಕೆ ಅಧಿಪತಿಗಳಾಗಿ, ಶೀಮೆ ಭೂಮಿ ಎಂಗಡಿಸಿ ವಡಿಗೆನಹಳ್ಳಿ. ನಲ್ಲೂರು, ಬೂದಿಗೇರೆ, ಬಾಗಲೂರು, ಜಾಲಮಟ್ಟನಹಳ್ಳಿ, ಕುಂದಣ ಕೊಡಗುರಿಗಿ ಕಸಬೆ ಮುಂತಾದ ಯಂಟು ಹೋಬಳಿಯನ್ನು ಎಂಗಡಿಸಿ ಕೊಂಡು, ಯೀ ಸಂಸ್ಥಾನ ಸಣ್ಣ ಬೈರೆಗೌಡರೈಯ್ಯನವರು ಆಳುತಾ ಯಿದ್ದರು. ಅಣ್ಣ ಬೈರೆಗೌಡರು ಪಟ್ಟವಾಳಿದ ವರ್ಷಂಗಳು ೪೦ ತಿಂಗಳು ೫ ದಿನ ೧೬ ತರುವಾಯ ಅವರು ಕೊಮಾರ್ರು ಬೈರೆಗೌಡರ್ರುಯ್ಯನವರು ಪಟ್ಟವಾಳಿದ್ದು....ವರ್ಷ ತಿಂಗಳು ೩, ದಿನ ೫ ಆ ತರುವಾಯ ದೈಯಲ ಬೈರೇಗೌಡರ ಆಳಿಕೆ ೨೫ ವರ್ಷ, ಆ ತರುವಾಯ ಮುದ್ದ ಬೈರೇಗೌಡರ ಆಳಿಕೆ ೩೫೧೮೧ ಆ ತರುವಾಯ ಯಿಮ್ಮಡಿ ಸಣ್ಣ ಬೈರೆಗೌಡರ ಆಳಿಕೆ ೪೨ ತಂ ೪.

ಗೋಪಾಲಗೌಡರ ಆಳಿಕೆ ೩೦ ತಿಂ ೧೦ ಆ ತರುವಾಯ ದೊಡ್ಡ ಬೈರೇಗೌಡರ ಆಳಿಕೆ ೪೦೧೪ ಆ ತರುವಾಯ ರಂಗಪ್ಪಯ್ಯನವರ್ರ ಆಳಿಕೆ ತಿಂಗಳು ೧೦ದಿ. ೮. ಆತರುವಾಯ ಮಹೀಶೂರ ಕಲ [>ರೂ] ಚೂರಿ ನಂಜರಾಜೈಯ್ಯನವರ ಸ್ವಾದೀನವಾಗಿ ನಡಿಯುತ್ತಾ ಬ ತು.

ರಣ ಬೈರೇಗೌಡ, ಸಣ್ಣಬೈರೇಗೌಡ ೪೦+೫-೬, ಬೈರೇಗೌಡ ೩ ....ತಿಂ ೩. ದಿ, ಅರವೇದ್ಯಯ್ಯಲ ಬೈಚಿಗೌಡ ೨೫ ತಿಂ, ಮುದ್ದುಬೈರೆಗೌಡ ೩೫ ೧೮, ಯಿಮ್ಮಡಿ ಸಣ್ಣಬೈರೆ ೪೨೧೪, ಗೋಪಾಲಗೌಡ ೩೦೧೧೦, ದೊಡ್ಡ ಬಯಿರ್ರೇಗೌಡ ೪೦೧೪, ರಂಗೇಗ ಉಡ ೧೧೬, ರಂಗೇಗ ಉಡ ೧೧೬, ಕಲ[>ರಾ]ಚೂರಿ ನಂದರಾಜೈಯ್ಯನವರು, ದೊಡ್ಡ ನವಾಬರ್ರು, ಸುಲತಾನು, ಯಿಂಗರೇಜರ್ರು, ಯಿವರಿಗೆ ಶಾಲೀವಾಹನ ಶಕೆ ೧೭೨೩, ಕಲ್ಯಾಬ್ದಾಂ ೪೯೦೨"[೧೨೦]

**ಹಂಡೆ ಮನೆತನ** : ಹಂಡೆಯವರ ವಂಶಾವಳಿ ವಿವರ: ಮೂಲ ಪುರುಷ ಹಂಡೆ ಹನುಮಪ್ಪನಾಯಕ (೫ ಜನ ಮಕ್ಕಳು). ಅಂಕುಶರಾಯ. ದ್ಯವಾಪ್ಪನಾಯಕ. -೧೮೬-

ಸೇಹವನ್ನು ಮಾಡಿಕೊಂಡು ಹೋಗಿ ಪಂತಿವಳಿಗೆ ಬೋಜನವನ್ನು ಮಾಡಿದಲ್ಲಿ ಓಗೆ ಕಳ್ಳತನದಲ್ಲಿ ಗ್ರಾಮಗಳ ರ‍್ಯಾಲಿ ಮಾಡಿದಿರಿ? ಯಂಬಿದಾಗಿ ಕೇಳಿದಲ್ಲಿ, ಶಿಖಂಡಿಗ್ನಯಿವಿಗೆ ಸಾಲದ್ದರಿಂದ, ಓಗೆ ಮಾಡಿದೆ ಯಂಬುದಾಗಿ ಹೇಳಿದಲ್ಲಿ ಯಿನ್ನು ಮೇಲೆ ಯಿಂತಾ ಕೆಲಸ ಮಾಡಬೇಡಿರಿ ಯಂದು ಹೇಳಿಬಿಟ್ಟು, ಸೇಹ ಮಾಡಿಕೊಂಡು

ಪುನಃಹ ಅಮ್ಮಚವಾಡಿಗೆ ಹೋದನು ಯೀ ವೀರಭದ್ರನಾಯಕನು ಅರಿಕುಟಾದಲ್ಲಿ ಯಿದ್ದುಕೊಂಡು ಅರಿಕುಟಾರಕ್ಕೆ ಸೇರಿದ ಹಳ್ಳಿಗಳನ್ನು ಸೇರಿದ ಹಳ್ಳಿಗಳನ್ನು ಅಳಿಕೊಂಡು ೫೦ ವರುಷ ಯಿದ್ದನು ೪೩

**ಚನ್ನರಾಜ ವಡೆರ್ರು** : "ಚನ್ನರಾಜವಡೆರ್ರು ಯಂಬ ಹೆಸರಿನಿಂದ ಯಪ್ಪತ್ತೆರಡು ವರುಷ ಯೀ ರಾಜ್ಯವನ್ನು ಸುಕದಿಂದ ಆಳುತ್ತಾ ಯಿದ್ದನು. ಯಿವನು ವಬ್ಬರ ಮೇಲೆ ದಂಡು ಯತ್ತಿ ಹೋಗಲಿಲ್ಲ. ಯಿವನ ಮೇಲೆ ವಬ್ಬರೊಬ್ಬರೂ ಬರಲಿಲ್ಲ. ಯಿವನು ದೈವಗತಿ ಹೊದಿದ ಮೇಲೆ, ಯಿವನ ಮಗನು ಚಂದೆಶೇಖರವಡೆರ್ರು ಯೀ ರಾಜ್ಯವನ್ನು ೫೬ ವರುಷ ಸುಕದಿಂದ ಆಳಿಕೊಂಡು ಯಿದ್ದನು. ಯಿವನ ಮೆಲೆ ವಬ್ಬರ ದಂಡೂ ಯತ್ತಿ ಬರಲಿಲ್ಲ, ಯಿವನೂ ವಬ್ಬರ ಮೇಲೂ ದಂಡೆತ್ತಿ ಹೋಗಲಿಲ್ಲ. ಯಿವನ ದೈವಗತಿ ಹೊಂದಿದ ಮೇಲೆ, ಯಿವನ ಮಗನು ದೊಡ್ಡೆ ಅರಸನು ೬೬ ವರುಷ ಯೀ ರಾಜ್ಯವನ್ನು ಸುಕದಿಂದ ಆಳಿಕೊಂಡು ಯಿದ್ದಮ. ಅಪ್ಪನಂತೆ ಮಗ ಪಟ್ಟಣಲ್ಲಿಯ ದಂಡುಯೆತ್ತಿ ಪಿರಿಯ (ಪಿರಿಮ್ಮೆ)ಪಟ್ಟಣಕ್ಕೆ ಹೋಗುವಾಗ ಯಿವನು ಸಂಗರ ಹೋಗಿ ಪಿರಿಯಪಟ್ಟಣ ತೆಗೆದುಕೊಳ್ಳುವ ಹಾಗಾಯ್ತು."[೧೨೧]

**ಚಿಕ್ಕರಿರಾಯ** : "ಚನ್ನರಾಜ ಅರಸು ದೈವಗತಿ ಮಾಡಿದ ಮೇಲೆ ಯಿವನು ಮಗ ಚಿಕ್ಕರಿರಾಯ? ಯಂಬವನು ಅನುಭವಿಸಿಕೊಂಡು ೬೨ ವರುಷಾ ಸುಕದಿಂದ ಯಿರುತಾ ಯಿದ್ದನು. ಘವನ ಮಗಾ ಚೆನ್ನೆ... ಯಂಬವನ್ನು ಅನುಭವಮಾಡಿ... ಬರುತಾ ಯಿದ್ದನು. ನವಾಬು ಪ್ರಬಲವಾಗಿ ಪಟ್ಟಣವನ್ನು ತನ್ನ ದೊರೆತನ ಮಾಡಿಕೊಂಡು ಯಿರ್ರುವಲ್ಲಿ ಯಿ ಗಾಳಶಾಲಿ ಗ್ರಾಮವನ್ನು ಜಪ್ತಿಮಾಡಿಕೊಂಡು ಅರಿಕುತಾರದಲ್ಲಿ ಹದಿನೈದು ವರಹ ಉಂಬಳಿ ಕೊಟ್ಟು ಯಿದ್ದನು. ಯಿವನು ಉಂಬಳಿ ಅನುಭವ ಯಂಬತ್ತು ವರುಷಾ ಯಿದ್ದನು."[೧೨೨]

**ವಿರಾಜಪ್ಪ ವಡೆಯ** : "ಚಿಕ್ಕರಿರಾಯ ದೈವಗತಿ ಹೊಂದಿದ ಮೇಲೆ ಯಿವನು ಮಗ ವಿರಾಜಪ್ಪವಡೆನ ದಿವಸಕೆ ಹದಿನೈದು ವಹರಾ ಯಂಬ ನಾಲ್ಕು ಜಪ್ತ ಮಾಡಿಕೊಂಡುದರಿಂದ ಮನೆಯಲ್ಲಿ ಯಿದ್ದದ ಮಾರಿಕೊಂಡು ೬೦ ವರುಷ ಯಿದ್ದನು. ಯಿವನು ದೈವಗತಿ ಹೊಮದಿದ ಮೇಲೆ ಯಿವನ ಸಂತತಿಯಿಲ್ಲ."[೧೨೩]

ದಳವಾಯಿ ವೀರ ರಾಜು ಮತ್ತು ನಾಯಿಯ ಶಿಲಾ ಪ್ರತಿಮೆ – ಸ್ವಾರಸ್ಯ ಕಥೆ : ಹೊ[ಫ] ನಗರಿಯಂಬ ರಂಗಸ್ವಾಮಿಗಿರಿಯಲ್ಲಿ ಪೂರ್ವದಲ್ಲಿ ರಾಮಯೋಗಿಸ್ವರ ಯಂಬವರು ತಪಸ್ಸು ಮಾಡಿಕೊಂಡು ಯಿರುತಾ ಯಿದ್ದಲ್ಲಿ, ಯೀ ರಂಗನಾಥಸ್ವಾಮಿ

ಲಕ್ಷ್ಮಿದೇವಿ ಸಹ ಲಿಂಗಾಕಾರದಲ್ಲಿ ಪ್ರಸನ್ನರಾಗಿದ್ದರಿಂದ. ಯೀ ಯೋಗೀಶ್ವರ ದೇವಸ್ಥಾನವನ್ನು ಕಟ್ಟಿಸಿದ್ದರು. ಕೆಲವು ಕಾಲದ ಮೇಲೆ ಯಿದರು ಮುಕ್ತರಾದರು. ಮೇಲೆ ಯಿವರು ಶಿಷ್ಯರು ಯೀ ಗೆರಿಯಲಿ ದೇವರ ಸನ್ನಿಧ್ಧಾನದಲ್ಲಿ ತಪಸ್ಸು ಮಾಡಿಕೊಂಡು ಯಿರಲಾಗಿ, ಯೀ ಗುಡ್ಡಕೆ ಕಿರಾತಕರು ಬಂದು ಸಏರಿಕೊಂಡು ಹಾದಿಮಾರ್ಗಗಳಲೋ ತಿರುಗುವ ಜನರಿಗೆ ಉಪದ್ರವಗಳ ಮಾಡುತ ಆದ್ಯಾನಯದಲ್ಲಿ ನಡೆಯುವಂತಾದು ಯುಕ್ತವಲ್ಲ ಯೆಂಬದಾಗಿ ಹೇಳಿದರಿಂದ ಯೀ ಕಿರಾತಕರು ತಪಸ್ವಿಗಳು ಹೇಳಿದಂತೆ ಮಾತು ಕೇಳಿ.ತಾವು ಅಲ್ಲಿ ಯೀ ಮೇರಿಗೆ ಜನರಿಗೆ ವುಪದ್ರವ ಆಗುವ ಕೆಲಸ ಮಾಡುವುದಿಲ್ಲ. ಯೀ ವರೆಗೆ ನಾವು ಮಾಡಿದ ಪಾಪ ಪರಿಹಾರವೇನು? ಯಂಬುದಾಗಿ ಕೇಳಿಕೊಂಡಲ್ಲಿ ಯಿವರು ಅಪ್ಪಣೆ ಕೊಟ್ಟದ್ದು ಯೀ ಗುಡ್ಡದ ಕೆರಿಗೆ ವಂದು ಕಟ್ಟಿ ಕಟ್ಟಿಸಿ. ನೀರು ನಿಂತು ಜನರಿಗೆ ದನಕರುಗಳಿಗೆ ಸಹಾ ಉಪಯೋಗಕ್ಕೆ ಬಂದರೆ ನಿಮ್ಮ ಪಾಪ ಪರಿಹಾರವಾಗುತ್ತದೆ ಯಂದು ಅಪ್ಪಣೆ ಕೊಟ್ಟು, ನಾವು ಯೀ ಕಟ್ಟೆ ಕಟ್ಟುವ ಕೆಲಸವನ್ನು ಮಾಡುತ್ತೇವೆ... ಮಳಲನ್ನು ಅಭಿಮಂತ್ರಿಸಿ ಕೊಡುತ್ತೇವೆ. ಯೀ ಮಳಲನ್ನು ಕಟ್ಟೆ ಯೇರಿ ಕಟ್ಟೆಯ ವೃದ್ಧಿಯಾಗಿತ್ತ ಯಿದೆ" ಯೆಂದು ಮಳಲು ಅಭಿಮಂತ್ರಿಸಿ ಕೊಟ್ಟದ್ದರಿಂದ ಯೀ ಕಿರಾತಕರು ಕಟ್ಟೆ ಕಟ್ಟುವುದಕ್ಕೆ ಪ್ರಾರಂಬಮಾಡುವದಕ್ಕೆ ಯೀ ಕಿರಾತಕರ ಕೈಯಲ್ಲಿ ದ್ರಾವ್ಯನುಕೂಲವಿಲ್ಲದರಿಂದ, ಕೆಲಸ ಸಾಂಗವಾಗಿ ಆಗಬೇಕೆಂದು ತಮ್ಮಲ್ಲಿ ಯಿದ್ದ ಹಣವನ್ನೂ ತೆಗೆದುಕೊಂಡು ನರಗುಂದದ [> ನೀಲವತಿ] ಪಟ್ಟಣಕ್ಕೆ ಹೋಗಿ ಅಲ್ಲಿ ವಬ್ಬ ಸಾಹುಕಾರನ್ನಲ್ಲಿ ನಾವು ವಂದು ಧರ್ಮದ ಕೆಲಸಕೆ ವಂದು ಕಟ್ಟೆ ಕಟ್ಟಿಸುತ್ತೇವೆ. ತಾವು ಹಣಾ ಕೊಟ್ಟಲ್ಲಿ ನಿಮ್ಮ ಹಣ. ಬಡ್ಡಿ ಸಹ ಕೂಡಲೇ ತಂದು ಕೊಡುತ್ತೇವೆ. ಆ ಪರಿಯಂತ್ರ ನಮ್ಮ ನಾಯಿಯನ್ನು ಅಡವು ಮಾಡುತ್ತೇವೆ.

ಯೆಂಬುದಾಗಿ ಯೀ ಕಿರಾತರು ಹೇಳಿಕೊಂಡುದರಿಂದಾ, ಆದೇ ಮೇರಿಗೆ ಯಿವರ ಮಾತಿನ ಮೇಲೆ ಯಿವರು ಕೊಟ್ಟವರ್‍ರು ಕೂಲಿಯೆಂದು ಹಾಶ್ಯಾ ಮಾಡಿದಲ್ಲಿ ಯೀ ನಾಯಿ ಗುಣಗಳು ನಿಮಗೆ ತಿಳದು ಯಿಲ್ಲಾ. ಪರೀಕ್ಷೆ ಮಾಡಿದಲ್ಲಿ ಯೀ ನಾಯಿ ಗುಣಗಳು ನಿಮಗೆ ತಿಳದು ಯಿಲ್ಲಾ. ಪರೀಕ್ಷೆ ಮಾಡಿದಲ್ಲಿ ಯಿದರ ಗುಣಾತಶಯಗಳು ನಿಮಗೆ ತಿಳಿಯುತ್ತಿತ್ತು ಬೇಕಾದಷ್ಟು ದ್ರವ್ಯವನ್ನು ಕೊಟ್ಟಂತಾದು ಯೀ ಕಿರಾತಕರು ತೆಗೆದುಕೊಂಡು ಬಂದು ಕಟ್ಟೆ ಕೆಲಾಸ ಆಗುಮಾಡಿಸಿದರು.

"ಆ ವರ್ತಕನು ಪಟ್ನದ ವ್ಯಪಾರಕ್ಕೆ ಹೋಗುವಾಗ ಮನೆಯಲ್ಲಿ ತನ್ನ ಹೆಂಡತಿಗೆ ಹೇಳಿ ನಾಯಿಗೆ ಅನ್ನ ಹಾಕ್ಕಿ ಅರಿಕೆ [>ಆರೈಕೆ]ಮಾಡಿಕೊಂಡು ಯಿರ್‍ರು ಯಂಬುದಾಗಿ ಹೇಳಿ ಹೋದದ್ದರಿಂದಾ. ಯೀ ವರ್ತಕನ ಹೆಂಡತಿಯೂ ಪರಪುರಷನ

ಸ್ನೇಹಮಾಡಿಕೊಂಡು ಯಿದ್ದಲ್ಲಿ, ಯೀ ನಾಯಿಯು ರಾತ್ರಿ ಕಾಲದಲ್ಲಿ ಪರಜನಾ ಮನಿಗೆ ಬರಗೊಡೆದೆ ಕಾದುಕೊಂಡು ಯಿರುತ್ತಾ ಯಿದ್ದಲ್ಲಿ ಯೀ ಮನ ಮನಯ ಯೆಂಜಲ ತಿಂದುಕೊಂಡು ರಾತ್ರಿ ಕಾಲಿಕ ಯೀ ವರ್ತಕನ ಮನೆಬಾಗಿಲಿಗೆ ಬಿದ್ದುಕೊಂಡು ಯಿರುತ್ತಾ ಯಿದ್ದಲ್ಲಿ ವಂದು ದಿವಸಾ ರಾತ್ರಿ ಕಾಲದಲು ವಬ್ಬ ಸಾವಕರನ ಮಗನು ಯೀ ಸಾವುಕಾರನ ಮನೆಗೆ ಬರುತಾ ಯಿದ್ದಲ್ಲಿ ಯೀ ನಾಯಿಯ [>ಯು] ಕಂಡು ಅ ಸಾವಕಾರನಾ ಕಡದುಕೊಂಡಿದ್ದರಿಂದಾ, ಸಾವಕಾರನ ಹೆಂಡತಿಯು ಆ ಸತ್ತಂಥಾ ಶವ ನೋಡಿ. ನ್ಯಾರೆಯಲ್ಲಿ ಯಿರುವ ಹಗೆದಲಿ ಹಾಕಿ ಮುಚ್ಚಿ ಬಿಟ್ಟಳು. ಯೀ ವರ್ತಮಾನ ವೂರವರಿಗೆ ತಿಳಿಯದೆಯಿತ್ತು.

ಆಮೇಲೆ ಪಟ್ನದ ವ್ಯಾಪಾರಕೆ ಹೋಗಿ ಯಿದ್ದ ಸಾವಕಾರನು ತನ್ನ ಮನಿಗೆ ಬಂದಲ್ಲಿ ಯೀ ನಾಯಿಯು ಒಂದು ಸಾವಕಾರನಾ ಕಾಲಮೇಲೆ ಬಿದ್ದದ್ದರಿಂದಾ, ಸಾವಕಾರನು ನಾಯಿ ಮೈಮೇಲೆ ಕೈ ಆಡಿಸಿ ತನ್ನ ಹೆಂಡತಿಗೆ ಕೇಳಿದಳು, ನಾನು ಪಟ್ನದ ವ್ಯಾಪಾರಕೆ ಹೋದ ಮೇಲೆ ಯೀ ನಾಯಿಗೆ ಅನ್ನಾ ಹಾಕಿ ಸಂರಕ್ಷಣೆ ಮಾಡಿದಿಯೋ ಯಿಲ್ಲವೋ? ಯಂಬದಾಗಿ ಕೇಳಿದಲ್ಲಿ ಆಕೆಯು ಹೇಳಿದಳು ನಿತ್ಯದಲ್ಲು ಅನ್ನಾ ಹಾಕುತ್ತಲೆ ಯಿತ್ತು. ಆ ನಾಯಿಯ ಮನೆಹೊಂದಿ ಯ ವರ್ತಕನ ಕಾಲಮೇಲೆ ಬಿದ್ದು ಶವಾ ಹೊಳಯಿದ್ದಾ ಸ್ಥಳಕ್ಕೆ ಹೋಗುತಾ ಬಂದು ಬಂದು ಯಿವರು ಕಾಲ ಮೇಲೆ ಬೀಳುತ್ತಾ ಯಿರಲಾಗಿ, ಯೀ ಸಾವಕಾರನು ನಾಯಿ ಯೀ ಪ್ರಕಾರ ಮಾಡುತದೆಯೆಂದು ಯೋಚನೆಮಾಡಿ. ಸಾವಕಾರನು ನಾಯಿ ಬೆನ್ನ ಹತ್ತಿ ಹೋದ್ದರಿಂದಾ. ಯೀ ನಾಯಿಉ[>ಯು]ಹಗೆಯನ್ನು ಕಾಲಿಂದಾ ತಿವಿತು. ಆ ಹಗೆಯಲಿ ಯೋನೋ ಯಿದ್ದಿತು ಯೆಂಬುದಾಗಿ ಸಾವಕಾರನು ಆ ಮುಚ್ಚಿದಂತಾ ಹಗೆಯನ್ನು ತೆಗಸಿ ಅದರಲ್ಲಿ ಶವಾ ಯಿದ್ದುದನ್ನು ನೋಡಿ, ಯಿದು ಯಿಲ್ಲಿ ಯಿರುವ ಬಗೆಯನ್ನು ಹೆಂಡತಿ ಕೇಳಿದಲ್ಲಿ. ಆಕೆಯ ಹೊ [>ಗೊ]ತ್ತು ಹೇಲದೇ ಹೋದಳು. ಯೀ ಸಮಾಚಾರ ಜನರು ಕೇಳಿ ಪುಕಾರ ಆದ್ದರಿಂದಾ. ಗೊತ್ತು ಹತ್ತಿದರಿಂದಾ ಯೀ ಸಾವಕಾರನು ತನ್ನ ಹೆಂಡತಿ ಪ್ರಾಣ ಕೊಂಡು ಬಿಟ್ಟ.

ಕಿರಾತಕ ಹೆಸರಿನಿಂದಾ ಬರದ ಕಾಗದಾವಿರಶ್ರೀ ನೀವು ನಮ್ಮಲ್ಲಿ ಅಡವು ಯಿಟ್ಟ ನಾಯಿಯ ಕಡೆಯಿಂದಾ ನಮ್ಮ ಹಣ, ಯಿದರ ಬರಸಹಾಕಿ [>ಬಟ್ಟಿ ಸಹಾ] ಪಡೆದರಿಂದಾ ನಿಮ್ಮ ನಾಯಿ ಹಿಂದಕೆ ಕಳ್ಸಿಯಿದೆ ಯೆಂಬುದಾಗಿ ಬರದು, ನಾಯಿಯ ಕೊರಳಿಲಿಲಕಟ್ಟಿ ಕಾಲುಬಿದ್ದಲ್ಲಿ [ಕಟ್ಟು ಬಿಟ್ಟಿಲ್ಲ] ಆ ನಾಯಿ ಮಾರ್ಗದಲ್ಲಿ ಬರುವಾಗ್ಯೆ ಕಿರಾತಕರು ಸಾರಕಾರಗಳ ಹಣವುಯಿದರ ಬಡ್ಡಿ ಸಹ ತೆಗೆದುಕೊಂಡು ಬರುವಾಗ್ಯೆ

ಮಾರ್ಗದಲ್ಲಿ ಯೀ ಬರುವಂತ ನಾಯಿನ್ನು ಕಂಡು ಸಾವುಕಾರನ ಮನೆಯಿಂದಾ ಓಡಿ ಬರುತಾ ಯಿದೆ ಯಂಬುದಾಗಿ, ಯಿದರ ಕೊರಳಲ್ಲಿ ಚೀಟಿ ನೋಡಿದೆ ಆ ನಾಯಿ ತಲೆ ಹೊಡೆದು ಬಿಟ್ಟು, ನಿಲ್ಲವತಿಪಟ್ಟಣಕ ಸಾವಕಾರನ ಬಳಿಗೆ ಹೋಗಿ ಹಣ ಬಟ್ಟಿ ಸಹ ಯಿಟ್ಟಲ್ಲಿ ಸಾವಕಾರನು ಹಣ ತೆಗೆದುಕೊಳ್ಳುವದು ಯಿಲ್ಲಾಯಂಬುದಾಗಿ ಸದರಿ ಬದರಿ ಮೇರಿಗೆ ಹೇಳಿದ್ದರಿಂದ ನಾಯಿಯ ಕೊರಳಲ್ಲಿ ಯಿರುವ ಚೀಟಿ ನೊಡದೆ ಜೀವಾ ಕೊಂದು ಬಿಟ್ಟೆವೆಂದು ಹೇಳಿದ್ದರಿಂದ ಸಾವಕಾರನ ಯೀ ಹಣವನ್ನು ತಾ ವಾಪಸ ಕೇಳಿದೆ ಹಿಂದಕೆ ಕೊಟ್ಟದರಿಂದಾ, ಯೀ ಕಿರಾತರು ಯೀ ನಾಯಿಯ ಕೊಂದ ಸ್ಥಳಕೆ ಬಂದು ಅದರ ಕೊರಳಲಿ ಯಿದ್ದ ಚೀಟಿ ನೊಡಿ, ಹಳಹಳಿ ಬಹಾಳ ಮಾಡಿ, ದುಃಖಿಸಿ ನಾಯಿ ಮಾಡಿದಂಥಾ ದ್ರವ್ಯವನ್ನು ನಾಯಿ ಹೆಸರಿನಿಂದ ದಾನಧರ್ಮಗಳ ಮಾಡಿ ಯಿರುವಂತಾ ಸಕುನವನ್ನು ಆಗ ಮಾಡಿಸಿದು ... ಣೆಗಲ್ಲು ದಳವಾಯಿ ವೀರರಾಜು ಮಹಾ ಅವ..ನು ದೊಡ್ಡದಾಗಿ ಕೆರಿ ಕಟ್ಟಿಸಿ ಶಿಲಾಪ್ರತಿಮೆಯನ್ನು ಮಾಡಿ ಯೀ ಕೆರಿ ಮೇಲೆ ಸ್ಥಾಪನೆ ಮಾಡಿಸಿ ಯಿದಾರೆ."[೧೨]

## ಕೈಫಿಯತ್ತುಗಳ ಮತ್ತು ಅದರ ಐತಿಹಾಸಿಕ ಅಂಶಗಳು

ಕರ್ನಲ್ ಮೆಕೆಂಝಿ ಅವರ ಸಂಗ್ರಹದಲ್ಲಿ ದೊರಕುವ ಕೈಫಿಯತ್ತುಗಳ ಐತಿಹಾಸಿಕ ಅಂಶಗಳನ್ನು ಕುರಿತ ವೈಜ್ಞಾನಿಕ ದೃಷ್ಟಿಕೋನದ ಚರ್ಚೆಯಾಗಿದೆ. ಈ ಕೈಫಿಯತ್ತುಗಳು, ಬಖೈರುಗಳು ಮತ್ತು ಮೌಖಿಕ ನೆಲೆಯ ಸಂಗ್ರಹಗಳು ಕರ್ನಾಟಕದ ಇತಿಹಾಸ ರಚನೆಗೆ ಹೇಗೆ ಸಹಾಯಕವಾಗಿವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಇದೇ ಸಂದರ್ಭದಲ್ಲಿ ಕರ್ನಲ್ ಮೆಕೆಂಝಿ ಅವರ ಕೈಫಿಯತ್ತುಗಳನ್ನು ಅಭ್ಯಾಸ ಮಾಡುವಾಗ ಎದುರಾಗುವ ಕೆಲವು ಸಾಂಧರ್ಬಿಕ ತೊಡಕುಗಳನ್ನು ಚರ್ಚಿಸಲಾಗಿದೆ. ಅವುಗಳಲ್ಲಿ ಭಾಷೆಗೆ ಸಂಬಂಧಿಸಿದ ಮತ್ತು ಅವುಗಳ ಮೂಲ ಮಾಹಿತಿಯ ಐತಿಹಾಸಿಕ ಪ್ರಜ್ಞೆಯನ್ನು ಕೈಫಿಯತ್ತುಗಳಲ್ಲಿ ನಿರೂಪಿಸಲಾಗಿರುವ ಮಾಹಿತಿಯ ವೈಜ್ಞಾನಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಆನಂತರ ಕರ್ನಲ್ ಕಾಲಿನ್ ಮೆಕೆಂಝಿ ಅವರ ಸಂಗ್ರಹದ ಕೈಫಿಯತ್ತುಗಳನ್ನು ಇತಿಹಾಸ ಸಂಶೋಧನಾ ಮಾರ್ಗವಾಗಿ ಉಪಯೋಗಿಸಿಕೊಳ್ಳುವ ವಿಧಾನಗಳು ಮತ್ತು ಅವುಗಳ ಅಧ್ಯಯನದಲ್ಲಿ ಅನುಸರಿಸಬೇಕಾದ ತುಲನಾತ್ಮಕ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ.

ಭಾರತೀಯ ಇತಿಹಾಸದ ಅಧ್ಯಯನದಲ್ಲಿ ಕೈಫಿಯತ್ತುಗಳಿಗೆ ವಿಶಿಷ್ಟ ಸ್ಥಾನವಿದೆ. ಇತಿಹಾಸ ಅಧ್ಯಯನಕ್ಕೆ ಹಲವು ವಿಧವಾದ ಆಧಾರಗಳನ್ನು ಅವಲಂಬಿಸಿದ್ದರೂ

ಕೈಫಿಯತ್ತುಗಳನ್ನು ಪರಿಗಣಿಸುವುದು ಇತಿಹಾಸ ರಚನೆಗೆ ಅತ್ಯಗತ್ಯವಾಗುತ್ತದೆ. ಈ ಸಂದರ್ಭದಲ್ಲಿ ಕೈಫಿಯತ್ತು ಎನ್ನುವ ಪದದ ಅರ್ಥ ಮತ್ತು ವಿವರಣೆ ಅದರಲ್ಲಿನ ಐತಿಹಾಸಿಕ ಅಂಶಗಳನ್ನು ಕುರಿತು ಚರ್ಚಿಸುವುದು ಅಗತ್ಯವಾಗಿದೆ.

ಕೈಫಿಯತ್ತು ಎಂದರೆ ವಿವರಣೆಗಳನ್ನೊಳಗೊಂಡ ದಾಖಲೆ, ಸ್ಪಷ್ಟವಾದ ಹೇಳಿಕೆ, ಆಜ್ಞಾಪತ್ರ ಎಂದು ಅರ್ಥ. ಕೈಫಿಯತ್ತು ಎಂಬ ಪದ ಅರಾಬಿಕ್-ಪರ್ಷಿಯನ್ ಭಾಷೆಯ ಮೂಲದಿಂದ ಕನ್ನಡ ಭಾಷೆಗೆ ಬಂದಿದೆ. ಕನ್ನಡದಲ್ಲಿ ಕೈಪಾವತಿ ಎಂಬ ತದ್ಭವವೂ ಬಳಕೆಯಲ್ಲಿದೆ. ಕರ್ನಲ್ ಮೆಕೆಂಝಿ ತಾನು ಸಂಗ್ರಹಿಸಿದ, ಅನೇಕ ಸ್ಥಳಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಕೈಫಿಯತ್ ಎಂದು ಕರೆದ. ಕನ್ನಡದ ಪರಿಭಾಷೆಯಲ್ಲಿ ಕೈಫಿಯತ್ ಎಂದರೆ ಸ್ಥಳಪುರಾಣ, ಐತಿಹ್ಯ, ಜಾನಪದ ಮತ್ತು ಇತಿಹಾಸ ವಿವರಗಳನ್ನೊಳಗೊಂಡಂತಹ ದಾಖಲೆ, ವಿವರ ಎನ್ನಬಹುದು. ಇವುಗಳನ್ನು ಮೆಕೆಂಝಿಗೆ ಸ್ಥಳೀಯ ಅಧಿಕಾರಿಗಳು, ಪಂಡಿತರು, ಶಾನುಭೋಗರು, ಪಟೇಲರು ಮೊದಲಾದವರು ಸ್ವತಃ ಬರೆದು ಕೊಟ್ಟರು. ೧೮೦೦ ರಿಂದ ೧೮೨೧ರ ಅವಧಿಯಲ್ಲಿ ಮೆಕೆಂಝಿ ಇವುಗಳನ್ನು ಸಂಗ್ರಹಿಸಿದನು.

ಕೈಫಿಯತ್ತುಗಳ ಅಧ್ಯಯನ ರಾಜಕೀಯ ಇತಿಹಾಸದ ದೃಷ್ಟಿಯಿಂದಲೂ ವಿಶಿಷ್ಟವಾಗಿದೆ. ಇದನ್ನು ಸಮರ್ಥಿಸಲು ಕೆಲವು ಕಾರಣಗಳನ್ನು ನೀಡಬಹುದು, ಮೊದಲನೆಯದಾಗಿ ಇಲ್ಲಿಯವರೆಗೆ ಕರ್ನಾಟಕದ ರಾಜಕೀಯ ಇತಿಹಾಸವು (ಆಧುನಿಕ ಪೂರ್ವಕಾಲ) ಹೆಚ್ಚಾಗಿ ಶಾಸನಗಳನ್ನೆ ಅವಲಂಬಿಸಿ ಬರೆದುವು; ರಾಜರ ಆಸ್ಥಾನಗಳಲ್ಲಿ ರಚಿಸಲ್ಪಟ್ಟ ಸಾಹಿತ್ಯ ಕೃತಿಗಳು ನಾಡಿನ ರಾಜಕೀಯ ಚರಿತ್ರೆಯನ್ನು ಅರಿತುಕೊಳ್ಳುವ ದಿಸೆಯಲ್ಲಿ ಹೆಚ್ಚು ಸಹಾಯಕವಾದುವಲ್ಲ. ಇದರಿಂದ ಇಲ್ಲಿಯವರೆಗೂ ನಡೆದಿರುವ ರಾಜಕೀಯ ಚರಿತ್ರೆಯ ವಿಸ್ತಾರದ ಸಂಶೋಧನೆಯಲ್ಲಿ ಬಹಳ ಸಂದೇಹಗಳು ತಲೆದೋರಿರುವುದು ಕಂಡುಬಂದಿದೆ. ರಾಜಕೀಯ ಇತಿಹಾಸವನ್ನು ತಿಳಿದುಕೊಳ್ಳಲು ಇತ್ತೀಚೆಗೆ ಹೊಸ ಸಾಕ್ಷ್ಯಾಧಾರ ಆಕರವೊಂದು ಬೆಳಕಿಗೆ ಬಂದಿದ್ದುದು ಅನೇಕ ವಿದ್ವಾಂಸರಿಗೆ ತಿಳಿದ ವಿಷಯ. ಆದಾಗ್ಯೂ ಈ ಹೊಸ ಆಕರವನ್ನು ರಾಜಕೀಯ ಚರಿತ್ರೆಯ ದೃಷ್ಟಿಯಿಂದ ಈವರೆಗೂ ಅಧ್ಯಯನ ಮಾಡಿರಲಿಲ್ಲ. ಕರ್ನಲ್ ಕಾಲಿನ್ ಮೆಕೆಂಝಿ ಈಸ್ಟ್ ಇಂಡಿಯಾ ಕಂಪನಿ ನೌಕರ ೧೭೯೯ ರಿಂದ ೧೮೨೧ರ ನಡುವೆ ಸಂಗ್ರಹಿಸಿದ ಕೈಫಿಯತ್ತುಗಳೇ ಈ ಹೊಸ ಆಕರಗಳು.

ಮೈಸೂರು ಪ್ರದೇಶದ ಇತಿಹಾಸ ವಿಶಿಷ್ಟ ರೀತಿಯಲ್ಲಿ ವಿಕಾಸಗೊಂಡಿರುವುದು ಈವರೆಗಿನ ಸಂಶೋಧನೆಗಳಿಂದ ಸ್ಪಷ್ಟವಾಗಿದೆ. ಈ ಪ್ರದೇಶ ವಿಜಯನಗರ ಸಾಮ್ರಾಜ್ಯದ (೧೩೩೬ ರಿಂದ ೧೫೬೫) ಹೃದಯದಂತಿತ್ತು. ಇಂತಹ ಸಾಮ್ರಾಜ್ಯದ ಬಗೆಗಿನ ಕೈಫಿಯತ್ತುಗಳು ಹಲವಾರು ವಿವರಗಳನ್ನು ನೀಡಿವೆ. ಅಂತಹ ವಿವರಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶ. ಕೈಫಿಯತ್ತುಗಳು ವಿಜಯನಗರಪೂರ್ವ ಕಾಲಘಟ್ಟದ ಬಗ್ಗೆ ಅನೇಕ ವಿಚಾರಗಳನ್ನು ತಿಳಿಸುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ವಿಜಯ ನಗರೋತ್ತರ ಕಾಲ, ಮೈಸೂರಿನ ಇತಿಹಾಸದ ಒಂದು ಸ್ವಾರಸ್ಯಕರ ರಾಜಕೀಯ ಘಟ್ಟ. ಸಣ್ಣ ಸಣ್ಣ ಪಾಳೆಯಪಟ್ಟುಗಳು ಸ್ವತಂತ್ರವಾಗಿ ಆಳುತ್ತಾ ಇದ್ದ ಕಾಲ; ಅದರ ಜೊತೆಗೆ ಮೈಸೂರಿನ ಒಡೆಯರು ರಾಜ್ಯ ಸ್ಥಾಪಿಸಿ ವಿಸ್ತರಿಸಿದ್ದು ಈ ಕಾಲದಲ್ಲೆ. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮೈಸೂರು ಸಂಸ್ಥಾನವನ್ನು ವಿಸ್ತರಿಸಲು ಪ್ರಯತ್ನಿಸಿದ್ದು ಸಹ ಈ ಕಾಲದಲ್ಲೇ. ಕೋಟೆ ಕೊತ್ತಲಗಳು ಸೇನಾ ಆಡಳಿತದ ವಿವರಗಳು ದಾಖಲಾಗಿರುವುದು ಈ ಕೈಫಿಯತ್ತುಗಳಲ್ಲಿ ಕಂಡುಬಂದಿವೆ. ಇತ್ತೀಚಿನ ದಿನಗಳಲ್ಲಿ ರಾಜಕೀಯೇತರ ವಿಷಯಗಳನ್ನು ವಿಸ್ತಾರವಾಗಿ ಅಧ್ಯಯನ ಮಾಡುವ ಕಾಲದಲ್ಲಿ ರಾಜಕೀಯ ಚರಿತ್ರೆಯನ್ನು ಶೋಧನೆ ಮಾಡುವಾಗ ಕೆಲವರಲ್ಲಿ ತಾತ್ಸಾರ ಮನೋಭಾವ ಉಂಟಾಗಬಹುದೆಂದೂ, ಅದನ್ನು ಹೋಗಲಾಡಿಸಲು ರಾಜಕೀಯ ಚರಿತ್ರೆಗೆ ಹೊಸ ಹೊಸ ಸಾಕ್ಷ್ಯಾಧಾರಗಳನ್ನೆಲ್ಲ ಬಳಸಿಕೊಳ್ಳಲಾಗುತ್ತಿದೆ.

ಭಾರತದಲ್ಲಿ ರಾಜಕೀಯ ಚರಿತ್ರೆಯ ಬಗ್ಗೆ ಸಾಕಷ್ಟು ಸಾಹಿತ್ಯಾಧಾರಗಳು ಮತ್ತು ಪ್ರಾಕ್ತನ ಶಾಸ್ತ್ರಾಧಾರಗಳನ್ನಾಧರಿಸಿ ಅಧ್ಯಯನ ನಡೆಸಿದ್ದರೇ ಹೊರತು ಕೈಫಿಯತ್ತುಗಳನ್ನು ಬಳಸಿ ಯಾರೊಬ್ಬರೂ ರಾಜಕೀಯ ಇತಿಹಾಸ ರಚಿಸಿರಲಿಲ್ಲ. ಕೈಫಿಯತ್ತುಗಳ ಬಗ್ಗೆ ಹಲವಾರು ಕೃತಿಗಳು ಬಂದಿದ್ದರೂ, ಈ ನೆಲೆಯ ಸಂಶೋಧನೆಯು ನಾಲ್ಕಾರು ವಿದ್ವಾಂಸರಿಂದ ಮಾತ್ರ ನಡೆದಿದೆ.

ಪ್ರಸ್ತುತ ಪ್ರಬಂಧದಲ್ಲಿ ಕೈಫಿಯತ್ತುಗಳಲ್ಲಿ ದೊರೆಯುವ ಮಾಹಿತಿಗಳನ್ನೇ ಪ್ರಧಾನವಾಗಿ ಬಳಸಿಕೊಳ್ಳಲಾಗಿದೆ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ನೌಕರನಾಗಿದ್ದ ಕರ್ನಲ್ ಮೆಕೆಂಝಿ, ೧೮ ಮತ್ತು ೧೯ನೇ ಶತಮಾನದ ಮಧ್ಯಭಾಗದಲ್ಲಿ ತಾನು ಸಂದರ್ಶಿಸಿದ ಸ್ಥಳಗಳಲ್ಲಿ ಪಂಡಿತರಿಂದ ಈ ಕೈಫಿಯತ್ತುಗಳನ್ನು ಬರೆಯಿಸಿದ್ದನು. ಈ ಕೈಫಿಯತ್ತು ಒಂದರ್ಥದಲ್ಲಿ ಸ್ಥಳ ತಾತ್ಕಾಲಿಕ ಸ್ಥಿತಿ–ಗತಿಗಳ ನೇರ ಬರಹಗಳೇ, ಪ್ರಾಚೀನ, ಮಧ್ಯಕಾಲೀನ ಹಾಗೂ ಸಮಕಾಲೀನ ಭೌಗೋಳಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಮೊದಲಾದ ಎಲ್ಲ ಕ್ಷೇತ್ರಗಳ ಬಗ್ಗೆ ಅನೇಕ

ವಿವರಗಳನ್ನು ಈ ಕೈಫಿಯತ್ತುಗಳು ಒದಗಿಸುತ್ತವೆ. ಕೈಫಿಯತ್ತುಗಳು ವಿದ್ವಾಂಸರಿಗೆ ಸಂಪೂರ್ಣವಾಗಿ ದೊರೆಯುವ ಮುನ್ನ, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯನ್ನು ಪುನರ್ ರಚಿಸಲು ಪ್ರಯತ್ನಪಟ್ಟ ಸಂಶೋಧಕರಿಗೆ ಪ್ರಧಾನವಾಗಿ ಮಾಹಿತಿ ದೊರೆಯುತ್ತಿದ್ದುದು ಶಾಸನಗಳಿಂದ ಮಾತ್ರ. ಶಾಸನಾಧಾರಗಳಿಗೆ ಪೂರಕವಾಗಿ ಸಾಹಿತ್ಯ ಕೃತಿಗಳು ಸಹಾಯ ಮಾಡುತ್ತಿದ್ದವಲ್ಲದೇ ವಿದೇಶಿ ಬರವಣಿಗೆಗಳು ಅಲ್ಲಲ್ಲಿ ಬೆಳಕು ಚೆಲ್ಲುತ್ತಿದ್ದವು. ಆದಾಗ್ಯೂ ಅವು ದೊರೆಯುತ್ತಿದ್ದ ಕರ್ನಾಟಕದ ಆಧುನಿಕ ಹಾಗೂ ಪೂರ್ವ ಕಾಲದ ಅನೇಕ ವಿಷಯಗಳು ಅಸಮರ್ಪಕವಾಗಿಯೇ ಉಳಿದುಕೊಂಡಿದ್ದವು. ಈಗ ಉಪಲಬ್ಧವಿರುವ ಕೈಫಿಯತ್ತುಗಳು ಇತರ ಆಕರಗಳು ಅಲಕ್ಷಿಸಿದ್ದ ಅನೇಕ ಅಮೂಲ್ಯ ಸಂಗತಿಗಳ ವಿವರಗಳನ್ನು ಅಧ್ಯಯನಕ್ಕೆ ಒದಗಿಸಿವೆ. ಇದರಿಂದ ವಿಜಯನಗರೋತ್ತರ ಕಾಲದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಕರ್ನಾಟಕವನ್ನು ಅರಿಯಲು ಸಾಧ್ಯವಾಗಿದೆ. ವಿಶ್ವಾಸನೀಯ ಸಾಕ್ಷ್ಯಾಧಾರಗಳ ನೆಲೆಯಲ್ಲಿ ಈಗ ಇತಿಹಾಸದ ವ್ಯಾಪ್ತಿಯು ವಿಸ್ತಾರಗೊಂಡು ಧಾರ್ಮಿಕ, ರಾಜಕೀಯ, ಸಾಮಾಜಿಕ, ವಾಣಿಜ್ಯ, ವ್ಯಾವಹಾರಿಕ ಆಯಾಮಗಳನ್ನು ಮೌಲೀಕರಣಕ್ಕೆ ಒಳಪಡಿಸಿದೆ. ಪರಿಣಾಮವಾಗಿ ಇತಿಹಾಸದಲ್ಲಿ ಗಟ್ಟಿತನ ಬಲಗೊಂಡಿದೆ, ಸ್ಥಿರಗೊಂಡಿದೆ, ನಂಬಿಕೆಗೆ ಹೆಚ್ಚು ಪಾತ್ರವಾಗಿದೆ.

ಮೈಸೂರು ಒಡೆಯರ ಇತಿಹಾಸವನ್ನು ಅಧ್ಯಯನ ಮಾಡಲು ಕೈಫಿಯತ್ತುಗಳು ಅತ್ಯಮೂಲ್ಯವಾದ ಆಧಾರಗಳಾಗಿವೆ. ರಾಜ ಒಡೆಯರ ಬಗ್ಗೆ ಇರುವ ಕೈಫಿಯತ್ತು ಈ ಸಂತತಿಯ ಮೂಲವನ್ನು ಈ ರೀತಿ ತಿಳಿಸುತ್ತದೆ.

ಮೈಸೂರು ಒಡೆಯರ ಬಗ್ಗೆ ಕೈಫಿಯತ್ತುಗಳಲ್ಲಿ ಇರುವಂತೆ ವಡೇರ್‍ರು ಹೆಸರು ಬಂದ ರೀತಿ, ರಾಜವಡೆರ್‍ರು ಬಗ್ಗೆ ಕೈಫಿಯತ್ತು ದ್ವಾರಕಿಯನ್ನು ಪರಸಂಸ್ಥಾನದ ದೊರೆಗಳು .....ಮಾಡಿ ದ್ವಾರಕಿ ತೆಗೆದುಕೊಂಡದ್ದರಿಂದ. ಆ ದ್ವಾರಕ ಅರಸುಗಳು ಹೈರಾಣು ಬಿದ್ದು ಯಿಲ್ಲಿಗೆ ಬಂದವರು. ಪಾಚಿ [>ರಾಜೆ] ಅರಸಿನವರು ತಮ್ಮ ವೈರಿ ಕೈಗೆ ಸೆರೆ ಸಿಕ್ಕಬಾರದು ಯಂದು, ತಾನು ತನ್ನ ಪ್ರಧಾನಿ ಮುಂತಾದವರು ೩೨ ಜನರನ್ನು ಕರದುಕೊಂಡು ದಕ್ಷಿಣಾಪ್ರಾಂತಕ್ಕೆ ಓಡಿ ಬಂದರು. ಆವಾಗ್ಗೆ ದಕ್ಷಿಣಪ್ರಾಂತ್ಯದಲ್ಲಿ ವಂದು ಗಡಿಗೆ ೩೩ ಹಳ್ಳಿಯಾಗಿ ಯಿತ್ತು. ಯೀ ಅರಸುಗಳು ದಕ್ಷಿಣಪ್ರಾಂತ್ಯಕ್ಕೆ ಬಂದ ಮೇಲೆ ಸಿಂಧುವಳಿಯೆಂಬ ಗ್ರಾಮಕ್ಕೆ ಬಂದು ಸೇರಿದರ್‍ರು. ಅವರು ಬಹಳ ಶ್ರಮದಿಂದಾ ಬಂದರು. ಯೀ ಹೊತ್ತು ವಂದು ರಾತ್ರಿ ಯಿದ್ದು. ಯಿವರ ಮೇಲೆ ಯಿಲ್ಲಿಯೂ ತಮ್ಮ ಕಾಲಕ್ಷೇಪದ ನಡಯುವದಿಲ್ಲಾಯಂದು ಅಲ್ಲಿಂದಾ ಹೊರಟು ಮುಂದಕೆ ಉಪ್ಪನಹಳ್ಳಿಗೆ

ಹೋದರು. ಯಿಲ್ಲಿ ವಂದು ರಾತ್ರಿ ಯಿದ್ದು. ಯಿವರ ಮೇಲೆ ಯಿಲ್ಲಿಯೂ ತಮ್ಮ ಕಾಲಕ್ಷೇಪವಾಗುವದಿಲ್ಲಯಂಬುದಾಗಿ ಅಲ್ಲಿಗೆ ಕಳಲೆಗೆ ಹೋದರು. ಅಲ್ಲಿ ಯಿರುವ ವೇಳೆಯಲ್ಲಿ ವಂದು ದಿವಸ ಬೇಟೆ ಸಲುವಾಗಿ ಮಹಿಸೂರು ಸಮೀಪದಲ್ಲಿ ಚಾಮುಂಡೇಶ್ವರಿ ಬೆಟ್ಟದ ಬಳಿಯಲ್ಲಿ ಹಾಲುಕೊಳಾ ಯಂಬುದರಲ್ಲಿ ವೃಕ್ಷದ ಕೆಳಗೆ ಬಳಲಿಕೆಯಿಂದಾ ಮಲಗಿಕೊಂಡು ಯಿರುವ ವೇಳೆಯಲ್ಲಿ, ಮಹಿಸೂರು ೩೩ ಹಳ್ಳಿ ಗಡಿಯನ್ನು ಅಳುತ್ತಿದ್ದ ಲಿಂಗವಂತ ವಡ್ರೇರು ಹೆಂಡತಿ ಮಕ್ಕಳು ಯೀ ಕೊಳಕ್ಕೆ ನೀರಿಗೆ ಬಂದಲ್ಲಿ ವೀರನಗೆರ್ರೆನಾಯಕಾ ಯಂಬವನು ಯೀ ವಡೆರ ಹೆಣ್ಣು ಬಹು ರಮಣೀಯವಾಗಿ ಯಿದ್ದ ಕಾರಣ. ತನ್ನ ವಶ ತಕ್ಕೋ .... ಯಂಬುದಾಗಿ ಯತ್ನ ಮಾಡಿಕೊಂಡು ಯಿದ್ದಲ್ಲಿ, ಯಿ ವಡೇರ ಮನೆ ಹೆಂಗಸೂರು ಕೊಳದ ಸಮೀಪದಲ್ಲಿ ಬಹಳವಾಗಿ ದುಃಖ ಪಡುತ್ತಿದ್ದಲ್ಲಿ. ಭೇಟೆಯಾಗಿದ್ದ ಅರಸುಗಳ ಕಂಡು ಯಿದು ಯಾಕೆ ಹೀಗೆ ದುಃಖ ಪಡುತಿ ಯಂಬುದಾಗಿ ಹೇಳಿದರು. ನೀಉ ಅಧೈರ್ಯ ಪಡುವ ಕೆಲಸವಿಲ್ಲ. ನಾವು ಬಂದು ಯೀ ಕಾರ್ಯವನ್ನು ಸಾಧ್ಯ ಮಾಡಿಕೊಳ್ಳುತ್ತ ಯಿದ್ದೇವೆ ಯಂಬುದಾಗಿ ಹೆಂಗಸರ ಸಂಗಡ ಹೇಳಿದರು.

ಆ ಮೇಲೆ ಅಂತಃಪುರಕ್ಕೆ ಕರೆದುಕೊಂಡು ಹೋಗಿ ರಹಸ್ಯವಾಗಿ ಅಲೋಚನೆಮಾಡಿ, ಅಂತಃಪುರದಲ್ಲಿ ಬಂದೋಬಸ್ತು ಮಾಡಿಕೊಂಡು. ವೀರನಗೆರ್ರಿನಾಯಕನಿಗೆ ಹೆಣ್ಣು ಕೊಡುತ್ತೇವೆ ಯಂದು ಅದೇ ಲಗ್ನದಲ್ಲೆ ನಿಶ್ಚಯಮಾಡಿ ವೀರನಗೆರ್ರೆನಾಯಕನಗೆ ನಿನ್ನ ಬಂಧುಬಳಗ ಸಹಾ ಕರದುಕೊಂಡು ಬನ್ನಿ ಯಂಬುದಾಗಿ ಹೇಳಿ ಕರತರಿಸಿ, ಅಂತಃಪುರದಲ್ಲಿ ಯರಡನೆ ಕೋಟಿ ಕಂದಕವನ್ನು ಮಾಡಿ ಸರ್ವವ[>ರ]ನ್ನು ಬನ್ನಿ;; ಯಂಬುದಾಗಿ ಹೇಳಿ ಕರತರಿಸಿ, ಮುಖ್ಯವಾದವನ್ನು ಛೇದನವನ್ನು ಮಾಡಿ, ನಾಯಕರ ವಂಶವನ್ನು ಪರಿಚ್ಛೇದವನ್ನು ಮಾಡಿ, ಅದೇ ಹೆಣ್ಣನ್ನು ರಾಜ ಅರಸಿನವರಿಗೆ ಅದೆ ಮೂಹೂರ್ತದಲ್ಲಿ ಧಾರಾಪ್ರಸ್ತವನ್ನು ಆಗುಮಾಡಿಸ್ತರು ಆ ವೇಳೆಯಲ್ಲಿ ಅ ವಡೇರು ಅರಸಿನವರ ಕೇಳಿಕೊಂಡರು. ನಮ್ಮ ಹೆಸರು ವಡೇರು ನಡಿಶಿಕೊಡಬೇಕೆಂಬುದಾಗಿ ಕೇಳಿಕೊಂಡದ್ದರಿಂದ. ಅರಸುಗಳು ಹೇಳಿದ್ದು ಸಂಸ್ಥಾನಗವೂ ನಿಮ್ಮದು ದೊರೆತನವೂ ನಿಮ್ಮದು. ನೀಉ ಹೇಳಿದ ಹಾಗೆ ಕೇಳುತ್ತೇವೆಯಂಬುದಾಗಿ ಅರಸುಗಳೂ ಹೇಳಿದರು. ಆ ವಡ್ರೇರು ಹೇಳಿದ್ದು ನಿಮ್ಮ ವಂಶದಲ್ಲಿ ಗಂಡು ಹುಟ್ಟಿದರೆ ಅದಕ್ಕೆ ಹೆಸರು ವಡೇರ್‍ರು ಯಂಬುದಾಗಿ ವಡೇರ್‍ರ ಹೆಸರು ನಡಶಿ ಕೊಡಬೇಕು ಯಂಬುದಾಗಿ ಆರಸುಗಳು ಹೇಳಿದರು. ಅ ವಡ್ರೇರು ಹೆಸರು ಯಂಬ ಹೆಸರು ಉಂಟಾಯಿತು ಯಿದೆ ರಾಜವಡೆರಿಗೆ ಅಲ್ಲಿ ಮಹಿಸೂರ್‍ರು ರಾಜ್ಯಭಾರಕ್ಕೆ ಪಟ್ಟಾಭಿಷೇಕ

ಮಡಿ, ಸಲಿವಾಹನ ಶಕ ೧೫೩೧ ಸೌಮ್ಯ ಸಂವತ್ಸರ ಕಾರ್ತಿಕ ಶು ೫ ಮಂಗಳವಾರ ರಾಜವಡೆರು ಅತಿ ಪ್ರಾಬಲ್ಯಕ್ಕೆ ಬಂದು, ಫವುಜುಗಳ ತಯ್ಯಾರು ಮಾಡಿಕೊಂಡು ದಕ್ಷಿಣಭಾಗ ಶೀಮೆ ಯೊಹೊತ್ತು ಸಾಧ್ಯ ಮಾಡಿಕೊಂಡು, ಯೀ ನಗರಾಪುರಿ ಪಟ್ಟಣಕ್ಕೆ ಬಂದು ಮುತ್ತಿಗೆ ಹಾಕಿಕೊಂಡು, ಭುಜಂಗರಾಯರು ಯಂಬವನ್ನು ಸಂಹಾರ ಮಾಡಿಬಿಟ್ಟು, ಯೀ ಪಟ್ಟಣವನ್ನು ಠಾಣ್ಯಹಾಕಿಕೊಂಡು, ಯೀ ನಗರಾಪುರಿಪಟ್ಟಣವನ್ನು ಪ್ರಾಕು ಯಿದ್ದ ೩೩ ಹಳ್ಳಿಗೆ ಸೇರಿಸಿಕೊಂಡು ವಂದು ತಾಲೂಕಿನ ಹಾಗೆ ಮಾಡಿ ಮಹಿಸೂರಿಗೆ ಶೇರಿಸಿಕೊಂಡು ಆಳಿದ ವರುಷ ೭ ತಿಂಗಳು ೧ ದಿನ ೫.

## ರಾಜವಡೆಯರು–ನಂಜರಾಜ–ಶ್ರೀರಂಗಮ್ಮಳ ಶಾಪ ಹಾಗೂ ವಂಶಾವಳಿ ಕೈಫಿಯತ್ತಿನಲ್ಲಿ

೬೫ ಯಿವರ ಮಕ್ಕಳು ನಂಜರಾಜವಡೆರ್ರು ಶಕ ೯೧೬ನೇ ಜಯ ಸಂ॥ಲ್ಲು ಸಕ ೯೮೦ನೇ ಹೇವಿಳಂಬ ಸಂವತ್ಸರದ ವರಿಗೆ ....ವೈದ್ಯೇಶ್ವರ ಸ್ವಾಮಿಯವರ ಗುಡಿ ಮುಂದೆ ತಮ್ಮ ಪ್ರತಿಷ್ಟೆಯನ್ನು ...ಆಳಿದ ವರುಷಾ ೬೫.

....ಜಿವ ...ನಂದ ಸಂವತ್ಸರದಾರಭ್ಯ ಶಕ ೧೫೫೫ನೆ ಅಂಗೀರಸ ಸಂವತ್ಸರದವರಿಗೆ ಆಳಿದ ವರುಷಾ.

ಅವರ ದಿವಸದಲ್ಲಿ ಶ್ರೀರಂಗಪಟ್ಟಣವನ್ನು ಶ್ರೀರಂಗನಾಯಕರನ್ನು ಆಳುತ್ತ ಯಿರುವಲ್ಲಿ ಅವರಿಗೆ .....ನಾಲ್ಕು ೪ ಯಂಬ ರೋಗವಾಗಲಾಗಿ ಯೇನು ಉಪಚಾರ ಮಾಡಿದರೂ ವಾಸಿಯಾಗಲಿಲ್ಲವಾದ ಕಾರಣ ಗಜಾರಣ್ಯಕ್ಷೇತ್ರ ಮಹಾತ್ಮೆ ವೈದ್ಯೇಶ್ವರ ಮಾಹತ್ಮೆಯನ್ನು ಕೇಳಿ, ಅಲ್ಲಿಗೂ ಯೀ ಅರಸುಗಳಿಗೆ ಮಾತ್ರ ಭಾವವಾಗಿಯಿದ್ದ ಕಾರಣ ಆ ಶ್ರೀರಂಗರಾಯನು ಯೀ ಕ್ಷೇತ್ರವನ್ನು ಕುರ್ರಿತು ಬಂದಂಥವನಾಗಿ, ಯೀ ಕ್ಷೇತ್ರದಲ್ಲಿ ವೈದ್ಯೇಶ್ವರಸ್ವಾಮಿಯವರ ಸೇವೆಯನ್ನು ಮಾಡಿಕೊಂಡು ಯಿರಲಾಗಿ. ಕೆಲಉ ದಿವಸ ವಾಸವನ್ನು ಮಾಡಿದ ತರುವಾಯ ಆ ರೋಗ ವಾಸಿಯಾದಂತಾದದು ಅಯಿತು. ಆ ತರುವಾಯ ಅವರಿಗೆ ಪುತ್ರಸಂತಾನ ಯಿಲ್ಲದರಿಂದ ವೈರಾಗ್ಯಭಾವವಾಗಿ ಯೀ ಕ್ಷೇತ್ರವನ್ನು ಬಿಟ್ಟು ಹೋಗಲಾರದೆ ಯಿರುತ್ತಾ ಅವಸಾನಕಾಲ ಪ್ರಾಪ್ತವಾಗಲಾಗಿ ಅಲ್ಲಿ ಮೈಸೂರು ಅರಸುಗಳಿಗೂ ಯೀ ರಾಯರಿಗೂ ಮಿತ್ರಭಾವವಾಗಿಯದ್ದ ಕಾರಣ ಪತ್ನಿಯರಾದಂಥಾ ಶ್ರೀರಂಗಮ್ಮನ ಬಳಿಗೆ ಬುದ್ದಿ .... ನಿರೂಪದ ....ಬರಶಿ ಕಳಿಸಿದುದು. ಮೈಸೂರು ಚಾಮರಾಜ ವಡೆಯರಿಗೆ ಕರೆಕಳುಹಿಸಿ. ಆ ಸಂಸ್ಥಾನವನ್ನು ಅವರ ವಶಕ್ಕೆ ಕೊಟ್ಟು ನೀನು ಶೀಘ್ರ..... ಬರುವನು ಯಂಬುದಾಗಿ ಬರಶಿಕಳುಹಿಸಿಸಂಸ್ಥಾನವನ್ನು ಚಾಮರಾಜ ವಡೆರಿಗ ಎವಹಿಸಿ ಪಟ್ಟಣದ ಸಂಸ್ಥಾನವನ್ನು ಕೊಟ್ಟಂಥಾ... ದಾನ ದತ್ತಿಯನ್ನು ಕುರಿತು

ಹೊರತು ಹೋರಕು ...ಲ್ಲಿ ಆ ರಂಗಮ್ಮನವರು [>ರು] ಅಮೋಘವಾದಂಥಾ ಮೂಗುತಿಯನನು ಯಿಟ್ಟಕೊಂಡು ಯಿದ್ದಲ್ಲಿ,ಯೀ ಮೈಸೂರು ಅರಸು ಆದಂಥಾವನು ಮೂಗುತಿಯನ್ನು ನಮಗೆ ಕೊಡು ಯಂಬುದಾಗಿ ಪೀಡಿಸಿದ ಕಾರಣ. ಕೊಡದೆ ಬಹು ಕೋಪಯುಕ್ತಳಾಗಿ ಹೊರಟು ಬಂದಂಥಳವಾಗಿ, ಯಿಲ್ಲಿ ಶ್ರೀರಂಗರಾಯರ್‍ರು ಸ್ವರ್ಗಸ್ಥರಾದರು. ಪತ್ನಿಯಾದ ರಂಗಮ್ಮನವರು ಕೆಲಉ ದಿವಸ ಯೀ ಕ್ಷೇತ್ರದಲ್ಲಿ ವಾಸವನ್ನು ಮಾಡಿಕೊಂಡು ಯಿದ್ದಲ್ಲಿ ಯೀ ಮೂಗುತ್ತಿ ನಿಮಿತ್ಯವಾಗಿ ತಳಕಾಡು ಅರಸುಗಳ ಬಳಿಗೆ ಮೈಸೂರು ಅರಸು ಚಾಮರಾಜವಡೆಯರ್‍ರು ಶ್ರೀರಂಗಮ್ಮನವರನು ತಮ್ಮ ಸಂಸ್ಥಾನಕೆ ಕಳುಹಿಸಿಕೊಡಿ ಎಂಬುದಾಗಿ ಬರೆದು ಕಳುಹಿಸಿಯಿದ್ದಲ್ಲಿ ಯಿವರು ಕಳುಹಿಸದೆ ದಿಕ್ಕಾರವನು ಮಾಡಿದಂತಾವರಾದರು. ಆದುದರಿಂದ ಆ ಸಂಸ್ಥಾನದ ....ತ್ತಿ ಬಂದು ಯೀ ಸಂಸ್ಥಾನವನು ಸಾಧಿಸಿದರು. ತಳಕಾಡು ಅರಸುಗಳು [>ಳ] ಪರಿಚಿತರ[>ಪರಾಜಿತರ] ಮಾಡಿದರು. ಯಿಷ್ಟರಲ್ಲಿ ಶ್ರೀರಂಗಮ್ಮನವರು ನಮ್ಮ ಮೂಗುತ್ತಿ ನಿಮಿತ್ಯ ಮಾನಭಂಗ ಮಾಡುತ್ತಾರೆ ರೆಂಬದಾಗಿ ತಿಳಿದು  ಬಹುಕೋಪ ಬಂದಂಥವಳಾಗಿ ನಮ್ಮ ನಿಮಿತ್ಯ ತಳಕಾಡು ಅರಸುಗಳು ಸಂಸ್ಥಾನ ಬಿಟ್ಟು ಪರಾಜಿತರ ಕಲ್ಲಾಯಿ ಸಂಸ್ಥಾನ ಅವರ ವತ[>ವಶ]ಕೆ ಆಯಿತು ಯಂಬುದಾಗಿ ಕೋಪಯುಕ್ತಳಾಗಿ ರಾತ್ರೆಕಾಲದಲ್ಲು ನದೀ ತೀರಕ್ಕೆ ಹೋಗಿ, ನಾನು ಮಹಾಪತಿವೃತೆಯಾಗಿದ್ದರೆ ತಳಕಾಡು ಸಂಸ್ಥಾನ ಮರಳು ಬೆಳೆದು ಹೋಗಲಿ, ಮೈಸೂರು ಸಂಸ್ಥಾನದವರಿಗೆ ಮಕ್ಕಳು ಆಗಬೇಡಾ ನಾನು ಯಲ್ಲಿ ಪ್ರವೇಶವ ಮಾಡುತ್ತಾ ಯಿದ್ದೇನೋ ಆ ಸ್ಥಳವು ಮಡವು ಆಗಿ ಈ ಮೂಗುತಿಯು ಸಿಕ್ಕಬೇಡ ಯಂಬುದಾಗಿ ಶಾಪವನ್ನು ಕೊಟ್ಟಂಥವಳಾಗಿ ಕಾವೇರಿ ಪ್ರವೇಶವನ್ನು ಮಾಡಿದಂಥವಳಾದಳು. ತರುವಾಯ ಮೈಸೂರು ಅರಸರು ಈ ಸವಸ್ಥಾನ ಸೇರಿಶಿಕೊಂಡು ಶಾಲಿವಾಹನ ಶಕ ವರ್ಷಂಗಳು ೧೫೫೬ನೇ ಸಂದ ವರ್ತಮಾನವಾದ ಶ್ರೀಮುಖ ಸಂವತ್ಸರದಾರಭ್ಯ ಶಕ ೧೩೨೬ನೇ ರುಧಿರೋದ್ಗಾರು ಸಂವತ್ಸರ ವರಿಗೆ ಆಳಿದಂಥಾ ವರುಷಂಗಳು ೧೨೦ಕ್ಕೆ ವಿವರವಿರುವುದು.

ವರುಷ – ತಿಂಗಳು

| | | | |
|---|---|---|---|
| ೦ | – | ೬ | ಚಾಮರಾಜ ವಡೆಯರು ಆಳಿಕೆ |
| ೨೫ | – | ೦ | ಕಂಠೀರವ ನರಸರಾಜ ವಡೆಯರು ಆಳಿಕೆ ವರುಷಾ |
| ೫ | – | ೦ | ದೊಡ್ಡ ದೇವರಾಜ ವಡೆಯರ್‍ರು ವರುಷ |
| ೩೨ | – | ೦ | ಚಿಕ್ಕ ದೇವರಾಜ ವಡೆಯರ್‍ರು ವರುಷ |
| ೩ | – | ೦ | ಮುಹು ಅರಸು ವರುಷ–೩ |

೧೦ – ೦ ಚಾಮರಾಜ ವಡೆಯಿರ್ರು
೩೫ – ೦ ಕೃಷ್ಣರಾಜ ವಡೆಯರು
೧೧ – ೦ ಚಿಕ್ಕ ಕೃಷ್ಣರಾಜ ವಡೆಯರು
೨೬ – ೦ ದೊಡ್ಡ ನವಾಬ ಹೈದರಲಿಖಾನ ಬಾಹದರವರು
೧೬ – ೦ ಟೀಪುಸುಲತಾನ ಪಾದಷಾಹಾ
೬ – ೦ ಯಿಂಗ್ರೇಜಿ ಬಾಹದರ ಕಡೆ ಚಿಕ್ಕ ಶ್ರೀ ಕೃಷ್ಣರಾಜ ವಡೆಯರು

ಮೈಸೂರಿನ ಇತಿಹಾಸಕ್ಕೆ ಹಲವಾರು ಲಿಖಿತ ಆಧಾರಗಳಿದ್ದರೂ ಕೂಡ ಕೈಫಿಯತ್ತುಗಳು ನೀಡುವ ಮಾಹಿತಿಯು ಅಧಿಕೃತವಾಗಿಯೂ ಸ್ಪಷ್ಟವಾಗಿಯೂ ಇರುವುದರಿಂದ ಇತಿಹಾಸದ ಅಧ್ಯಯನಕ್ಕೆ ಅವು ಮುಖ್ಯ ಆಧಾರವಾಗಿ ನಿಲ್ಲುತ್ತದೆ.”[೧೨೫]

ಮೈಸೂರು ರಾಜ್ಯದ ಸಮಕಾಲೀನ ರಾಜವಂಶವಾದ ಕೆಳದಿಯ ನಾಯಕರ ಇತಿಹಾಸವನ್ನು ಅಧ್ಯಯನ ಮಾಡಲು ಕೈಫಿಯತ್ತುಗಳು ನೀಡುವ ಮಾಹಿತಿ ಉಪಯುಕ್ತವಾಗಿದೆ. ವಿಜಯನಗರದ ಆಶ್ರಿತ ಅರಸರಾಗಿದ್ದ ಕೆಳದಿ ನಾಯಕರು ಶಿವಮೊಗ್ಗ ಸಮೀಪದ ಕೆಳದಿಯಲ್ಲಿ ಬಲಿಷ್ಟವಾದ ಸಂಸ್ಥಾನವನ್ನು ಸ್ಥಾಪಿಸಿಕೊಂಡು ವಿಜಯನಗರ ಪತನಾನಂತರ ಸ್ವಾತಂತ್ರ ರಾಜ್ಯವಾಗಿ ಮುಂದುವರೆದರು. ಸುಮಾರು ೨೫೦ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ ಕೆಳದಿ ರಾಜ್ಯವು ಹಿಂದೂ ಧರ್ಮ ಮತ್ತು ಸಂಸ್ಕೃತಿಗಳನ್ನು ರಕ್ಷಿಸಿ ಪೋಷಿಸಿ ವಿಜಯನಗರದ ಆದರ್ಶಗಳನ್ನು ಮುಂದುವರೆಸಿತು.

**ಕೆಳದಿ ನಾಯಕರು (೧೪೯೯–೧೭೬೮)**

ವಿಜಯನಗರ ಸಾಮ್ರಾಟರು ವೈಭವದಿಂದ ಆಳುತ್ತಿದ್ದ ಕಾಲದಲ್ಲಿ ಅವರ ಸಾಮಂತರು ಹಲವು ಸಣ್ಣಪುಟ್ಟ ಪಾಳೆಪಟ್ಟುಗಳು, ಸ್ಥಳೀಯ ನಾಯಕರ ನೇತೃತ್ವದಲ್ಲಿ ಅಸ್ತಿತ್ವದಲ್ಲಿದ್ದವು. ಕರ್ನಾಟಕದಲ್ಲಿ ಇವರು ನಾಯಕರು ಅಥವಾ ಪಾಳೆಯಗಾರರೆಂದು ಪ್ರಸಿದ್ಧರಾಗಿದ್ದಾರೆ. ಇವರಲ್ಲಿ ಕೆಳದಿಯ ಮತ್ತು ಚಿತ್ರದುರ್ಗದ ನಾಯಕರು ಪ್ರಮುಖರು. ವಿಜಯನಗರದ ಪರಂಪರೆಯನ್ನು ಮುಂದುವರಿಸಿದ್ದ ಇವರು ಕರ್ನಾಟಕದ ಇತಿಹಾದಲ್ಲಿ ತಮ್ಮದೇ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಶಿವಮೊಗ್ಗೆಯ ಸಮೀಪದ ಕೆಳದಿ ವಿಜಯನಗರ ಸಾಮ್ರಾಜ್ಯದ ಒಂದು ಸಂಸ್ಥಾನವಾಗಿತ್ತು. ಇದು ವಿಜಯನಗರದ ಪತನದ ನಂತರ ಸ್ವತಂತ್ರ ರಾಜ್ಯವಾಗಿ ತಲೆ ಎತ್ತಿತು. ಸುಮಾರು ೨೫೦ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದು (೧೪೯೯–೧೭೬೩) ಹಿಂದೂ ಧರ್ಮ ಮತ್ತು ಸಂಸ್ಕೃತಿಗಳನ್ನು ರಕ್ಷಿಸಿ,

ಪೋಷಿಸಿ ವಿಜಯನಗರದ ಆದರ್ಶಗಳನ್ನು ಮುಂದುವರಿಸಿತು. ಕೆಳದಿಯ ಅರಸರು ಬಿಜಾಪುರದ ಸುಲ್ತಾನರನ್ನೂ ಗೋವದ ಪೋರ್ಚುಗೀಸರನ್ನೂ ಸಮರ್ಥರಾಗಿ ಎದುರಿಸಿದರು. ಕೆಳದಿ ರಾಜ್ಯ ಶಿವಮೊಗ್ಗ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕಣ್ಣಾನೂರು, ಕೊಡಗು, ಹಾಸನ, ತುಮಕೂರು, ಚಿತ್ರದುರ್ಗ, ಧಾರವಾಡ ಹಾಗೂ ಉತ್ತರಕನ್ನಡ ಜಿಲ್ಲೆಗಳಿಗೆ ವ್ಯಾಪಿಸಿತ್ತು.

**ರಾಜಕೀಯ ಇತಿಹಾಸ**

ಕೆಳದಿ ಸಂಸ್ಥಾನದ ಸ್ಥಾಪಕನು ಚೌಡಪ್ಪ ನಾಯಕ. ಈತ ವಿಜಯನಗರ ಸಾಮ್ರಾಜ್ಯದ ಪೂರ್ವ ಗಡಿಯ ಮೇಲೆ ದಾಳಿಗೈದು ಬೇಡರನ್ನು ಮುಸ್ಲಿಮರನ್ನು ಹಿಮ್ಮೆಟ್ಟಿಸಿ ಕೃಷ್ಣದೇವರಾಯನ ಮನ್ನಣೆಗೆ ಪಾತ್ರನಾದ. ಕೃಷ್ಣದೇವರಾಯ ಈತನಿಗೆ ಚಂದ್ರಗುತ್ತಿ, ಕೆಳದಿ, ಇಕ್ಕೇರಿ ರಾಜ್ಯಗಳಲ್ಲಿ ಜಹಗೀರು ಕೊಟ್ಟನು. ಚೌಡಪ್ಪ ನಾಯಕನ ಮಗ ಸದಾಶಿವ ನಾಯಕನು ೧೫೧೪ ರಲ್ಲಿ ಪಟ್ಟವೇರಿದ. ವಿಜಯನಗರದ ದಂಡಯಾತ್ರೆಗಳಲ್ಲಿ ಭಾಗವಹಿಸಿ, ಚಂದ್ರಗುತ್ತಿ, ಮಂಗಳೂರು ಬಾರಕೂರುಗಳ ಪ್ರಾಂತ್ಯಾಧಿಕಾರಿಯಾಗಿ ನೇಮಕಗೊಂಡನು. ರಾಮರಾಯ ಈತನ ಪರಾಕ್ರಮವನ್ನು ಮೆಚ್ಚಿ ಕೋಟೆ ಕೋಲಾಹಲ ಎಂಬ ಬಿರುದು ನೀಡಿದ. ಸದಾಶಿವ ನಾಯಕ ಕೆಳದಿಯ ಶ್ರೀರಾಮೇಶ್ವರ ದೇವಾಲಯವನ್ನು ಕಟ್ಟಿಸಿದ. ಈತನ ಕಾಲದಲ್ಲಿ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ಬದಲಿಸಲಾಯಿತು.”[೧೨೬] ಸದಾಶಿವ ನಾಯಕನ ಮಗ ದೊಡ್ಡ ಸಂಕಣ್ಣ ನಾಯಕ ೧೫೪೬ ರಲ್ಲಿ ಪಟ್ಟವನ್ನೇರಿದ. ಈತ ಉಡುಗಣಿಯ ಪಾಳೆಯಗಾರ ವಿರುಪಣ್ಣನನ್ನು ಸೋಲಿಸಿ ಉಡುಗಣಿ ಕೋಟೆ ಮತ್ತು ಉಂಬೂರುಗಳನ್ನು ವಶಪಡಿಸಿಕೊಂಡ. ಆದರೆ ರಾಮರಾಯನ ಆದೇಶದಂತೆ ಅವುಗಳನ್ನು ವಿರುಪಣ್ಣನಿಗೆ ಹಿಂತಿರುಗಿಸಿದ. ರಾಮರಾಯ ಈತನಿಗೆ ಭುಜಕೀರ್ತಿ ಬಿರುದನ್ನಿತ್ತನು. ದೊಡ್ಡ ಸಂಕಣ್ಣ ನಾಯಕನು ಕಾಶೀಯಾತ್ರೆಗೆ ಹೋಗಿದ್ದಾಗ ದೆಹಲಿಯನ್ನು ಸಂದರ್ಶಿಸಿ ಅಲ್ಲಿಯ ಹೆಸರಾಂತ ಅಂಕುಷ ಖಾನ್‌ನನ್ನು ಮಲ್ಲಯುದ್ಧದಲ್ಲಿ ಸೋಲಿಸಿ ಮುಘಲ ಬಾದಶಹನಿಂದ ವಿಶೇಷ ಬಹುಮಾನವನ್ನು ಪಡೆದ. ಈತ ಕೆಳದಿಯಲ್ಲಿ ವೀರಭದ್ರೇಶ್ವರ ದೇವಾಲಯವನ್ನೂ ಇಕ್ಕೇರಿಯಲ್ಲಿ ಅಘೋರೇಶ್ವರ ದೇವಾಲಯವನ್ನೂ ಕಟ್ಟಿಸಿದ.”[೧೨೭]

ದೊಡ್ಡ ಸಂಕಣ್ಣನ ತಮ್ಮ ಚಿಕ್ಕ ಸಂಕಣ್ಣ ನಾಯಕ ಪಟ್ಟವೇರಿದ್ದು ೧೫೫೭ ರಲ್ಲಿ. ಈತ ತಾಳೀಕೋಟೆಯ ಕದನದಲ್ಲಿ ರಾಮರಾಯನ ಪರವಾಗಿ ಹೋರಾಡಿದ. ವಿಜಯನಗರದ ಅವಸಾನವನ್ನು ಕಂಡು ಮಮ್ಮಲ ಮರುಗಿದ. ಈತ ಮತ್ತೊಮ್ಮೆ

ಕರ್ನಾಟಕದಲ್ಲಿ ಅಂತಹ ಸಾಮ್ರಾಜ್ಯವನ್ನು ಕಟ್ಟುವ ಕನಸನ್ನು ಕಂಡ. ಆದರೆ ಅಷ್ಟರಲ್ಲೇ ತನ್ನ ಅಣ್ಣನ ಮಗ ರಾಮಾರಾಯನಿಂದ ಹತನಾದ. ರಾಮರಾಯನ ಹನ್ನೊಂದು ವರ್ಷಗಳ ಆಳ್ವಿಕೆ ಸುಖಪ್ರದವಾಗಿರಲಿಲ್ಲ.

**ಕೈಫಿಯತ್ತುಗಳಲ್ಲಿ ದಾಖಲಾಗಿರುವಂತೆ** : ಕೆಳದಿ ನಾಯಕರು–ರಾಜ್ಯಾಧಿಕಾರ ಬಂದ ಮೂಲ (ಐತಿಹ್ಯ)

ಚವುಡಗೊಂಡ–ಭದ್ರಗೊಂಡ, ಕೈಫಿಯತ್ತುಗಳಲ್ಲಿ ವಿವರಣೆ:

**ನಗರದ ದೊರೆತನ ಆಳಿದ(ವ)ರು**

ಕೆಳದಿಹಳ್ಳಿ ಬೈಲಗ್ರಾಮದಲ್ಲಿದ್ದ ಬಸಪ್ಪನ ಮಗ ಚೌಡ, ಭದ್ರಪ್ಪನೆಂಬ ಇಬ್ಬರು ಮಕ್ಕಳು, ಇರುವಲ್ಲಿ ಈಶ್ವರನನುಜ್ಞೆಯಾಗಿ ನಿಕ್ಷೇಪ. ನಾಗರಮುರಿಯೆಂಬ ಕತ್ತಿ ಸಹಾ ಸಿಕ್ಕಿದುದರಿಂದ, ಈತನು ಹೀಗೆ ಇರಲಾಗಿ, ರಾಯರ ಸಂಸ್ಥಾನಕ್ಕೆ ಅರುಕೆಯಾಗಿ. ಆಗ್ಗೆ ಇವರನ್ನು ಕರೆಯಿಸಿ ಅಲ್ಲಿ ಇವರಿಗೆ ಬಹುಮಾನವಂ ಮಾಡಿ. ಈ ರಾಜ್ಯಕ್ಕೆ ದೊರೆಯನ್ನಾಗಿ(ಗಿ)ಸಿಕೊಂಡು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ ೧೪೨೨ನೇ ವರ್ತಮಾನಕ್ಕೆ ಸಲ್ಲುವ ಸಿದ್ದಾರ್ಥಿ ಸಂವತ್ಸರ ಮಾಘ ಶುದ್ಧ ೩ರಲ್ಲಿ ಚೌಡಪ್ಪನಿಗೆ ಪಟ್ಟಾಭಿಷೇಕವಾಗಿ, ಇಕ್ಕೇರಿಮೊದಲಾದ ಎಂಟು ಮಾಗಣಿಯನ್ನು ಆಳಿಕೊಂಡು, ಇಕ್ಕೇರಿಯಲ್ಲಿ ಕೋಟೆ ಅರಮನೆ ಸಹ ಕಟ್ಟಿಕೊಮಡು, ಈ ಮಾಘ ಶುಇಧ ೩ ಆರಭ್ಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ॥ ೨ರ ವರೆಗೆ ಚರ್ಷ ೧೩, ತಿಂಗಳು ೭ ಪರಿಯಂತರ ರಾಜ್ಯವನವನ್ನಾಳಿದನು.

೨ನೆಯ ದೊರೆ. ಈ ತರುವಾಯ ಚೌಡಪ್ಪನಾಯಕರ ಮಗ ಸದಾಶಿವನಾಯಕರಿಗೆ ಇಕ್ಕೇರಿಯರೆ ಮನೆಯಲ್ಲಿ ಪಟ್ಟವಾದದ್ದು. ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೩ ಆರಭ್ಯ ವಿಶ್ವಾವಸು ಸಂವತ್ಸರ ವೈಶಾಖ ಶು॥ ೪ರ ವರೆಗೆ ವರ್ಷ ೩೧. ತಿಂಗಳು ೯ ಪರಿಯಂತರಕ್ಕು ದೊರೆತನ ಮಾಡಿ, ಸ್ವಾಮಿ. ಕಾರ್ಯದ ಮೇಲೆ ಜಗುಪಾಳ್ಯ ಎಂಬ ಸ್ಥಳದಲ್ಲಿ ಈಶ್ವರಾಧೀನವಾದನು.

೩ನೆಯ ದೊರೆ ಈ ಸದಾಶಿವರಾಯನಾಯಕ ಮಗ ದೊಡ್ಡ ಸಂಕಣ್ಣನಾಯಕನಗೆ ಪಟ್ಟವಾಗಿದ್ದು ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ ಆರಭ್ಯ ಕಾಳಯುಕ್ತಿ ಸಂವತ್ಸರದ ಆಶ್ವಯುಜ ಶುದ್ಧ ೪ರವರೆಗೆ ವರುಷ ೧೩, ತಿಂಗಳೂ ೫

ಪರಿಯಂತರ ತಮ್ಮ ತಮದೆ ಆಳಿದ ರಾಜ್ಯ ಯಾವತನ್ನೂ ಪರಿಪಾಲನೆ ಮಾಡಿಕೊಂಡು ಸುಖದಿಂದಿದ್ದನು.

೪ನೆಯ ದೊರೆತನ ಸ[+ಂಕ]ಣ್ಣನಾಯಕರ ತಮ್ಮ ಚಿಕ್ಕಸಂಕಣ್ಣನಾಯಕರಿಗೆ ಪಟ್ಟವಾದುದು ಕಾಳಯಿಕ್ರಿ ಸಂವತ್ಸರದ ಆಶ್ವಯುಜ ಶು॥ ೫ ಆರಭ್ಯ ಪ್ರಮಾದಿ ಸಂಚತ್ಸರದ ಕಾರ್ತಿಕ ಶ॥ ೪ರ ವರೆಗೆ ವರುಷ ೧೨. ತಿಂಗಳು ೧ ಪರಿಯಂತರ ತಮ್ಮ ಅಣ್ಣನಾಳಿದ ರಾಜ್ಯದ ದೊರತನವನ್ನು ಸುಖದಿಂದ ಮಾಡಿದನು.

ಚಿಕ್ಕ ಸಂಕಣ್ಣನಾಯಕರ ಅಣ್ಣ ದೊಡ್ಡ ಸಂಕಣ್ಣನಾಯಕರ ಮಗ ರಾಜರಾಜನಾಯಕ ಎಂಬುವನಿಗೆ ಪಟ್ಟವಾಗಿದ್ದು ಪ್ರಮಾದಿ ಸಂವತ್ಸರದ ವರೆಗೆ ವರ್ಷ ೧೨, ತಿಂಗಳು ೧ ಪರಿಯಂತರ ತಮ್ಮ ಚಿಕ್ಕಯ್ಯನಾಳಿದಂತಹ ಸೀಮೆಯ ದೊರೆತನವನ್ನು (ಪ್ರಜಾ ಪರಿಪಾಲನೆ) ಮಾಡಿಕೊಂಡು ಇದ್ದು ಗೇರುಸೊಪ್ಪೆ ಎಂಬ ಬಳಿಯಲ್ಲಿ ದೇವಾಧಿನರಾದರು.

ಈ ರಮರಾಜನಾಯಕನ ತಮ್ಮನದ ಹಿರೇವೆಂಕಟಪ್ಪನಾಯಕರಿಗೆ ಪಟ್ಟವಾದುದು. ಚಿತ್ರಭಾನು ಸಂವತ್ಸರದ ಮಾರ್ಗಶಿರ ಶು.॥ ೫ ಆರಭ್ಯ ಶುಕ್ಲ ಸಂವತ್ಸರದ ಕಾರ್ತಿಕ ಬಹುಳ ೩ರ ವರೆಗೆ ವರ್ಷ ೪೬ ತಿಮಗಳು ೧೧ ದಿನ ೨೫ ಪರಿಯಂತ್ರಕ್ಕೂ ರಾಜ್ಯವನವನಾಳಿಕೊಂಡು ದೈವಾಧೀನವಾಗಿ.

ಈ ವೆಂಕಟಪ್ಪನಾಯಕನಮುಮ್ಮಗ (ಭದ್ರಪ್ಪನಾಯಕರ ಮಗ) ವೀರಭದ್ರಪ್ಪನಾಯಕನಿಗೆ ಯಡೇರಿಯ ಅರಮನೆಯಲ್ಲಿಪಟ್ಟವಾದುದ್ದು ಶುಕ್ಲ ಸಂವತ್ಸರದ ಮಾರ್ಗಶಿರ ಶದ್ಧ ೧ ಆರಭ್ಯ ಪಾರ್ಥಿವ ಸಂವತ್ಸರ ಮಾರ್ಗಶಿರ ಶು॥ ೧೧ ಪರಿಯಂತರ ವರ್ಷ ೧೬ ತಿಂಗಳು ೧೧ರ ವರೆಗೆ ರಾಜ್ಯ ಪರಿಪಾಲನೆ ಮಾಡಿ ತನ್ನೂರಿನಲ್ಲಿ ನಿಂತನು."[೧೨೮]

ಅನಂತರದಲಿ ಸದಾಶಿವರಾಯ ನಾಯಕರು ಯಂಬ ಹೆಸರು ಪಡದು ತಮ್ಮ ಸ್ಥಳಕ್ಕೆ ಬಂದು, ಯಿಲ್ಲಿ ಸುತ್ತು ಮುತ್ತ ಗಉಡ ಪಾಳ್ಯಾಗಾರರು ಯಿದ್ದದವರನ ಮುರಿಯುವ ಬಗ್ಗೆ ತಾವು ಕುದುರಿ ಮಂದಿ ಕಟ್ಟಿಕೊಂಡು. ಪ್ರಬಲವಾಗಿ ಚತುರಂಗ ಬಲ ಸಮೇತನಾಗಿ ಮಲ್ಲನಗೌಡ, ಕಾನಲೆ ಪುಟ್ಟೆ ಗೌಡ, ನಲ್ಲೂರ ಪುಟ್ಟೆಗೌಡ, ಸುರಗುಪ್ಪಿ ಪುಟ್ಟೆಗಉಡ, ಮಾಲವಿ ಪುಟ್ಟೆಗವುಡ, ಅಂಡಿಗೆ ಪಾಳ್ಯಾಗಾರ ವೀರಣ್ಣ ವಡೆರು ॥೫॥ ಬೃದ್ರಿ ಮುಪ್ಪಿನ ಗಉಡರು, ಮಂಚಾಲೆ ಪುಟೆಗ ಉಡನ ॥ ೭ ॥ ಯಿಕ್ಕೇರಿ ಮಲ್ಲನ

ಗಉಡ, ಶಿರ್ರವಂತಿ ಪಾಳ್ಯಾಗಾರ ನಾರು, ಯಲಗಳಲ್ಲಿ ಪುಟೆಗಉಡ, ಪುಲ್ಲೂರು ಪುಟೆಗಉಡ, ಯೀ ಮೊದಲಾದ ಗಉಡ ಪಾಳ್ಯಗಾರನಹೊಡದು ಶೀಮೆ ಯಾವತ್ತು ಸ್ವಾಧೀನ ಮಾಡಿಕೊಂಡು ಕೆಳದಿ ವಳಗೆ ಯಿದ್ದುಕೊಂಡು ಶಾಲಿವಾಹನ ಶಖ ೧೪೭೭ ವಿಶೌವಸು ಸಂ।ಲ್ಲು ಸೆಕ ೧೪೮೩ ದುರ್ಮುಖಿ ಸಂವತ್ಸರ ವರೆಗೆ ವರುಷ ೧೬ ಸುಖದಲ್ಲಿ ಯಿರುವ ಕಾಲದಲ್ಲಿ ವೊಂದಾನೊಂದು ದಿವಸದಲಲಿ ಸವಾರಿಗೆ ಹೋದ ಕಾರಣ ಯಿವರ ಸಂಗಡಾ ಗುರಿಕಾರರು ಮುಂತಾದವರು ಯಿದ್ದಲ್ಲಿ. ಯಿಕ್ಕೇರಿ ಯಿರುವ ಸ್ಥಳದಲ್ಲಿ ಅಡವಿಯಾಗಿ ಮಹಾರಮಣೀಯವಾಗಿ ಆದೆ. ಯಿಲ್ಲಿ ಕೋಟೆಯನ್ನು ಕಟ್ಟಿಕೋ ಯಂಬುದಾಗಿ ಹೇಳುವಲ್ಲಿ ಸಂಗಡ ಯಿದ್ದವರು. ಹೇಳಿದ್ದು: ಯಿದ್ದು ಗಂಡು ಭೂಮಿ ಯಿಲ್ಲಿ ಮೊಲವು ನಾಯಿಯ ಮೇಲೆ ಬಿತ್ತಯಂಬುದಾಗಿ ಕೇಳಿದಲ್ಲಿ. ಮೊಲದ ಮೇಲೆ ನಾಯಿ ಬಿದ್ದ ಕಾರಣ ನಾಯಿನ ಮೊಲ ಬಂದು ಕಚ್ಚಿತು ಯೀ ವರ್ತಮಾನವನ್ನು ಕೇಳಿ, ಯಿದು ಗಂಡು ಭೂಮಿಯೇ ಸರಿಯಂದು ತಿಳದು. ಯಿಲ್ಲಿ ಕೋಟೆ ಕಟ್ಟಿಸಬೇಕು ಯಂಬದಾಗಿ ಯೋಚನೆ ಮಾಡಿ, ಅಲ್ಲಿ ಜೋಯಿಸರನಾ ಕರಶಿ, ಮುಹೂರ್ತದಲ್ಲಿ ಹಳೆ ಯಿಕ್ಕೇರಿ ಭೂಮಿವಳಗೆ ಯಕ್ಕೇರಿ ಕೋಟೆಯನ್ನು ಕಟ್ಟಿಶಿ, ಯಿಲ್ಲೆ ಮೊಲದ ಕೋಟೆಯಂಬುದಾಗಿ ವಂದು ಕೋಟೆಯನ್ನು ಮಾಡ್ಸಿ ಆ ಬಳಿಯಲ್ಲಿ ಪಟ್ಟದಕಲ್ಲು ಗದ್ದಿಗೆ ಹಾಕಿಶಿ ಯಿದೆ. ದಾರ್ರೆಮಂಟಪ ಮಾಡಿದರು. ಯಿದು ಗಂಡು ಭೂಮಿಯಂದು ಯೀ ಪ್ರಕಾರ ಮಾಡಿದರು."[೧೨೯]

**ಕೆಳದಿ ಹಿರ್ರೆ ಸಂಕಣ್ಣ ನಾಯಕ**

**ಚಿಕ್ಕ ಸಂಕಣ್ಣ ನಾಯಕ ........ ಕೈಫಿಯತ್ತುಗಳಲ್ಲಿ** : ಯೀ ಸದಾಶಿವರಾಯನಾಯಕರ ಮಗ ಹಿರ್ರೆ ಸಂಕಣ್ಣನಾಯಕರ್‍ರು, ಚಿಕ್ಕಸಂಕಣ್ಣನಾಯಕರು ಯಂಬುದಾಗಿ ಯಿಬ್ಬರು ಮಕ್ಕಳು ಯಿದ್ದರು. ವಳಗೆ ಹಿರೆ ಸಂಕಣ್ಣನಾಯಕರು ರಾಜ್ಯಭಾರ ಮಾಡುವ ಕಾಲದಲ್ಲಿ ಯಡವ ಮುರಾರಿಯಂಬ ಹೊಲೇರು (ಯೀ ಅರಶಿನ ಆಚಿಗೆ ಬಂದಂತಾ ಐಶ್ವರ್ಯಕೆ ಪ್ರಾಣಕೊಟ್ಟವರು) ಮನೆ ವಳಗೆ ನಾಗರಮುರಿಯಂಬ ಕತ್ತಿಯಿತ್ತು. ಯಿವರ ಮಕ್ಕಳು ಯೀಕತ್ತಿ ಯಿಟ್ಟುಕೊಂಡು. ಮಾಂಸ ಹೂ [>ಒ]ಣಗಿ ಹಾಕಿದ್ದಾರೆ [>ದ್ದ] ರೆ ಅದಕ್ಕೆ ಯೀ ಕತ್ತಿಯನ್ನು ಕತ್ತಿಯನ್ನು ಕಾವಲುಯಿಟ್ಟು ಯಿದ್ದರೆ, ಮಾಂಸ ತೆಗೆದುಕೊಂಡು ಹೋಗುವ ಬಗ್ಯೆ ಕಾಗಿ ಬಂದರೆ, ಯೀ ಕತ್ತಿಯು ತನ್ನಹ ... ಕೊತಾನೆ ಯದ್ದು ಕೂತು ಕಾಗಿ ಹೊಡಿಯುವದು. ಯಿದನ್ನು ಒಂದು ದಿವ್ಸಾ ನೋಡಿ ಯೀ ಸಂಕಣನಾಯಕರ್‍ರು, ಯೀ ಕತ್ತಿಯನ್ನು ಯಡವ ಮುರಾರ್‍ರಿ ಮಗನಿಗೆ ಯಿನಾಮ ಕೊಟ್ಟು ತೆಗೆದುಕೊಂಡನು. ಅನಂತರ. ಯಡವ ಮುರಾರಿಯ ಕತ್ತಿಯನ್ನು ಕೂಡ

ತೆಗೆದುಕೊಂಡು ಭೂ ಪ್ರದಕ್ಷಿಣೆ ಮಾಡುವುದಕ್ಕೆ ಹೊರಟು ಹೋಗಿ ಹಿರ್ರಲಿಕ್ಕೆ, ಕಾಶಿರಾಮೇಶ್ವರ ಮಧ್ಯ ಭೂಮಿ ಯಾವತ್ತು ಸಂಚಾರ ಮಾಡುವುದಕ್ಕೆ ಹೊರಟು ಹೋಗಿ ಅಲ್ಲಿ ಅಘೋರವೀರಭದ್ರದೇವರಿಗೆ ನೋಡಿ ೩೨ ಆಯುಧಾ ಧರಿಸಿದಂತಾ ವೀರಭದ್ರನಾ ಪಟಾ ಬರಶಿಕೊಂಡು ಅಲ್ಲಿಂದಾ ಪುನಹಾ ಯಿಕ್ಕೇರಿಗೆ ಬಂದು. ಯಿಲ್ಲಿ ಅಘೋರ ವೀರಭದ್ರದೇವರ ಮೂರ್ತಿಯನ್ನು ಮುವತ್ತು ಯರಡು ಹಸ್ತಕ್ಕೆ ಮುವತ್ತು ಯರಡು ಆಯುಧ ವಿಶಿಷ್ಟವಾಗಿ ಶಿಲಪಿಶ್ಯಾಗ(>ಶಿಲ್ಪಶಾಸ್ತ್ರ] ಮೇರಿಗೆ ಮೂರ್ತಿ ಶಾಡಿಶಿ. ದೇವಸ್ಥಾನವನ್ನು ಕಟ್ಟಿಶಿ. ಯಿಕ್ಕೇರಿ ಪೂರ್ವಮಧ್ಯದಲ್ಲಿ ಸುಮೂರ್ಹದಲ್ಲಿ ಪ್ರತಿಷ್ಟೆಯನ್ನು ಮಾಡಿ. ನಿತ್ಯೋತ್ಸವ ಮೊದಲಾದವುಗಳ ಜರಗುವ ಬಗ್ಯೆ ಅನೇಕ ದ್ರವ್ಯಗಳು ವೆಚ್ಚಮಾಡಿ. ಪ್ರತಿ ಸಂ॥ ಲ್ಲು ಶ್ರಾವಣ ಶು೧೦ ದಿವಸ ವರುಷೋತ್ಸವ ಆಗುವ ಹಾಗೆ ನೇಮಕಾಮಾಡಿ. ಆ ದೇವಸ್ಥಾನಕ್ಕೆ ತೆರಾ ಆಗುವದಕ್ಕೆ ೧೦೦೦೧. ...ಕೊಡುತ ಯಿದ್ದರು. ಯಿದ್ದರು. ಯೀ ಮೇರಿಗೆ ಕೆಲವು ದಿವಸ ರಾಜ್ಯಭಾರವನ್ನು ಮಾಡಿ ಯಿದ್ದರು. ಶಕ ೧೪೮೩ನೇ ದುರ್ಮುಖಿ ಸಂವತ್ಸರ ಲಾಗಾಯಿತು ಶಕ ೧೪೯೪ನೇ ಆಂಗೀರಸ ಸಂ. ವರಿಗೆ ವರುಷ ೧೧ ಆಳಿದರು. ಅನಂತರ ಹಿರ್‍ರೆ ಸಂಕಣ್ಣನಾಯಕರ್‍ರು ಮಗ ರಾಮರಾಜುನಾಯಕರ್‍ರು ಆಳಿದ್ದು ವರುಷ ೧೦,ಶಕ ೧೪೮೩ನೇ ಅಂಗೀರಸ ಸಂ. ಲಗಾಯಿತು ಶಕ ೧೫೦೪ನೆ ಚಿತ್ರಭಾನು ಸಂ. ವರಿಗೆ. ಅನಂತರ ಯೀ ರಾಮಜಾಜನಾಯಕರ್‍ರ ಮಗ ವೀರವಡೇರ್‍ರು ಆಳಿದ್ದು ಶಕ ೧೫೦೪ನೇ ಚಿತ್ರಭಾನು ಸಂ. ವೈಶಾಖ ಲಾಗಾಯಿತು ಕಾರ್ತಿಕ ಮಾಸದ ವರೆಗೆ ಆಳಿದ್ದು ತಿಂಗಳು೭.

ಅನಂತರದಲ್ಲಿ ಯೀ ರಾಮರಾಜನಾಯಕರ ತಮ್ಮ ಹಿರೆವೆಂಕಟಪ್ಪ ವೀರವಡೇರ ಚಿಕ್ಕಪ್ಪ ರಾಜ್ಯಭಾರ ಮಾಡುವ ಕಾಲದಲ್ಲಿ ವರುಷ ೪೭ ಯಿಕ್ಕೇರಿ ವಳಗೆ ಅಘೋರ ವೀರಭದ್ರದೇವರುವಿಗ್ರಹಾ ಮಾಳಿಗೆ ಮೇಲೆ ಹಲಗೆ ತೆಗೆದುಕೊಂಡು ಹೋಗಿ ಗಂಗೆಕೆರೆಯಲ್ಲು ಬಿದ್ದದೆ ಯಂಬುದಾಗಿ ಹೇಳುತ್ತಾರೆ. ಅನಂತರದಲ್ಲಿ ಯೀ ಗುಡಿಯನ್ನು ಹಾಳುಬಿದ್ದು ಯಿರಬಾರದು ಯಂದು ಯಿಕ್ಕೇರಿ ಪಟ್ಟಣದ ನೀಲಮ್ಮಂಗು ತರ್‍ರವೆಂದು ವಿದ್ವಾಂಸರುನವಾನಸಿದರಿಂದಾ ಅನೇಕ ಶಾಂತಿಗಳು ಕೊಡಿಸಿ ಮತ್ತು ವೆಂಕಟಪ್ಪನಾಯಕರು ಅಘೋರೇಶ್ವರಯಂಬುದಾಗಿ ಲಿಂಗಪ್ರತಿಷ್ಟೆ ಮಾಡಿದರು. ಯೀ ಲಿಂಗದ ಯೆದುರಿಗೆ ಬಿಳೆಕಲ್ಲಯಿಂದಾ ಬಸವೇಶ್ವರನ ಮಾಡಿಯಿಟ್ಟು ಯಿದ್ದಾನೆ. ಯೀಶ್ವರನ ಯಡ್ಡದ ಭಾಗಕ್ಕೆ ಪಾರ್ವತಿ ಅಮ್ಮಾನವರ ಗಡಿಯನ್ನು ಕಟ್ಟಿಸಿ ಪ್ರತಿಷ್ಟೆಮಾಡಿ ಯಿದ್ದಾರೆ."[೧೩೦]

**ಸಂಕಣ್ಣನಾಯಕ** : ಆಮೇಲೆ ಬಿದನೂರು ಶೀಮೆಯಲ್ಲಿ ವಬ್ಬ ಪಾಳೆಗಾರನು ಹೊನ್ನೆಕಂಬಳೀ ಯಂಬವನು ಯಿಲ್ಲಗೆ ಬಂದು. ಶೀಮೆ ತನ್ನ ಸ್ವಾಧೀನವ ಮಾಡಿಕೊಂಡ್ಡು, ಸ್ವಲ್ಪ ದಿವಸ ಆಳಿದನು. ಯಿವನಿಗೆ ಸಂತಾನವಿಲ್ಲದ್ದರಿಂದಾ ತನ್ನ ಪುರೋಹಿತನಾದ ಶಂಕರನಾರಾಯಣಭಟ್ಟಗೆ ವಸ್ತಾರೆ ಬೆಲ್ಲೂರು ಸಹಾ ಕೂಡಿಯಿರುವ ನಗರದ ಶೀಮೆಯನ್ನು ಕೊಟ್ಟನು. ಆ ಶಂಕರನಾರಾಯಣಭಟ್ಟನು ೪೦ ವರುಷ ಪರಿಯಂತ್ರಾ ಆಳಿದನು. ಯೀತಗೆ ಯಿಬರು ಮಕಳು. ಅವರಿಗೆ ಯೀ ಶೀಮೆ ಪೂರ್ವೋತ್ತರಾಯೇನು ತಿಳಿಯದ್ದಿರಿಂದ್ದಾ ಯೀ ಮಕ್ಕಳ ಅದೃಷ್ಟವನ್ನು ಶೋಧಿಸಿ ನೊಡಬೇಕೆಂದ್ದು ಪರಮಾನ್ನವನ್ನೂ ಮಾಡಿಶಿ. ಅದರಲ್ಲಿ ತನ್ನ ಮುದ್ರೆವುಂಗರವನ್ನು ಹಾಕಿ. ತನ್ನ ಬಂಧುಗಳ ಮಕಳಿಗೆ ಸಹಾ ಹಂಚಿಕೊಡಬೇಕುಯಂದು ತನ್ನ ಮಕ್ಕಳು ರಾಜ್ಯಕೆ ಅರಹತರು. ಅದರಿದರಿಂದ್ದಾ ಯೀ ಮೆರೆ ಮಾಡಿದಲ್ಲಿ ಯೀವುಂಗರ ಶಂಕರನಾರಾಯಣಭಟ್ಟಗೆ ಬಂತ್ತೂ. ಅವಾಗ ಯೀ ರಾಜ್ಯವಂನ್ನೂ ಅಳುವದಕೆ ತನ್ನ ಮಕ್ಕಳಿಗೆ ಅದೃಷ್ಟವಿಲ್ಲಾ ಯಂದ್ದು ತಿಳಿದುಕೊಂಡ್ಡು ಯೀ ಶೀಮೆಯನ್ನು ಯಿಕ್ಕೆರಿಯವರಿಗೆ ಕೊಟ್ಟರೆ ತನ್ನ ಮಕ್ಕಳಿಗೆ ಯಿವರು ಜೀವಂತ್ತರಾಗಿ ಯಿರುವ ಪರಿಯಂತ್ರಾ ಸಂರಕ್ಷಣೆ ಮಾಡುತ್ತಾರೆ ಯಂದ್ದು ತಿಳಿಕೊಂಡ್ಡು, ಸಂಕಂಣನಾಯಕನು ಯೀತನ ಮಕಳಿಗೆ ನಗರದ ಶೀಮೆ ಪವುರೊಹಿತನವಂನ್ನು ಕೊಟ್ಟನು. ಅಮೇಲೆ ಯೀ ಶಂಕರನಾರಾಯಣಭಟ್ಟನು ಪುರೋಹಿತನವಂನ್ನು ಮಕ್ಕಳಿಗೆ ವಹಿಶಿಕೊಟ್ಟು ಮೃತನಾದನು. ಸಂಕಂಣನಾಯಕನು ಬಿದನೂರು ಸಂಸ್ಥಾನ ಸಹಿತವಾಗಿ ಕೆಲವು ದಿವಸ ಪ್ರಭುತ್ವ ಮಾಡುವ ಕಾಲದಲ್ಲಿ ವೈಗುರು[>ಐಗೂರು] ವೆಂಕಟಾದ್ರಿಯ ನಾಯಕನು ಯೀ ಶೀಮೆಯನ್ನು ತನ್ನ ಸ್ವಾಧೀನ ಮಾಡಿಕೊಂಡು, ಬೇಲೂರು ಶೀಮೆ ಹೊಳ್ಳ ಪ್ರಭುತ್ವಾ ಮಾಡಿದೂ: ಬೇಲೂರು, ಸಕ್ಕರೆಪಟಣ, ಕೊಂಡೂರು, ಚನ್ನರಾಯಪಟ್ಟಣ, ಹಾಸನಾ, ಮಹಾರಾಜಿದುರ್ಗ, ಅರಕಲಗೂಡು, ಕಿಕ್ಕೆರಿ, ಗ್ರಾಮ."[೧೩೧]

**ವೆಂಕಟಪ್ಪ ನಾಯಕ** : ಯೀ ವೆಂಕಟಪ್ಪ ನಾಯಕರ ಗೆರುಸೊಪ್ಪೆ ಪಟ್ಟಣದ ಅರಸು ಬೈರರಸವಡೇರ್ರು ಯಂಬುದಾಗಿ ಯಿದ್ದರು. ಯೀತನ ಹೆಂಡತಿ ಚನ್ನಮ್ಮಾಯಿ ಯಿವರು ಜಯಿನರ್ರು. ರಾಜ್ಯವಾಳಿ ಭೈರಾರಸ ವೊಡೇಯರು ಹೋದ ಮೇಲೆಯೀತನ ಹೆಂಡತಿ ಚನ್ನಮ್ಮಾಯಿನವರಿಗೆ ಬೈರಾದೇವಿಯಂಬ ಹೆಸರುನಂದಾ ರಾಜ್ಯ ಮಾಡುತ್ತಾ ಯಿರ್ರಲಿಕ್ಕೆ ಯಿವರನ ಹೊಡದು ವೆಂಕಟ್ಟಪನಯಕರು ಗೆದುಕೊಂಡರು. ಅನಂತರ ಯೀ ರಾಜ್ಯಸಹಿತವಾಗಿ ಆಳಿದರು ಯಿದಕ್ಕೆ ಶಕವರುಷಗಳು ೧೫೦೪ನೇ ಚಿತ್ರಭಾನು ಸಂವತ್ಸರ ಲಾಗಾಯಿತು ಶಕ ೧೫೫೧ನೆ ಶುಕ್ಲ ಸಂ ವರಿಗೆ ವರುಷ ೪೭.೬೦

**ಶಿವಪ್ಪನಾಯಕ :** ಗಂಡು ಸಂತಾನ ಇಲ್ಲದೆ ಹೋದ ಕಾರಣ ಸದಾಶಿವರಾಯರು ತನ್ನ ಮೊಮ್ಮಗನಾದ ಭದ್ರಪ್ಪನಾಯಕನ ಮ[+ಗ]ನಾದ ಶಿವಪ್ಪನಾಯಕನು ಹೊಳೆಹೊನ್ನೂರು ಶೀಮೆಗೆ ಪ್ರಭುತ್ವವನ್ನು ಮಾಡಿದ್ದನು. ತಾರಕಣಸಂವ್ಸರದ ಮಾರ್ಗಶಿರ ಶುದ್ಧ ೧೪ ಆರಭ್ಯ ಸರ್ವಜಿತು ಸಂವತ್ಸರ ಮಾರ್ಗಶಿರ ಶುದ್ಧ ಪ್ರತಿಪದ ೧ ವರಿವಿಗೆ ವರುಷ ೧೧ ದಿವಸ ೧೭ ಪರಿಯಂತ್ರ ಪ್ರಥಮದಲ್ಲಿ ಆಳಿದ್ದನು. ಆ ಕಾಲದಲ್ಲಿ ಬಿಜಾಪುರದ ಶಾಹಾರ ಕಡೆಯಿಂದ ಅಹಂಮ್ಮದಖಾನ ಮಹಮ್ಮದುಖಾನರು ಫೌಜು ಸಹಾ ಬಂದು ಹೊಳೆಹೊನ್ನೂರ ಶೀಮೆ ಸ್ವಾಧೀನಮಾಡಿಕ್ಕೊಂಡು ರಾಮಾಜಿವಂತ ಭೀಮಾಜಿಪಂತನು ಶಾಲಿವಾಹನ ಶಕೆ ೧೫೭೦ ಸರ್ವಧಾರಿ ಸಂವತ್ಸರಭ್ಯ ಮನ್ಮಥ ಸಂವತ್ಸರ ವರೆಗೆ ಅವರು ಪ್ರಬುತ್ವ ಮಡಿದರು. ವರುಷ ೭.

ಪುನಹ ಶಕ ೧೫೭೭ನೆ ದುರ್ಮುಖ ಸಂವತ್ಸರದಲ್ಲಿ ಶಿವಪ್ಪನಾಯಕರು ದಂಡು ತೆಗೆದುಕ್ಕೊಂಡು ಬಂದು ಹೊಳೆಹೊನ್ನೂರು ಠಾಣಾ ಹಾಕಿಕ್ಕೊಂಡು ಠಾಣೆಗೆ ಶಿವಪ್ಪನಾಯಕನ ಮಗ ಕರೆಭದ್ರಪ್ಪನಾಯಕನ ಇಟ್ಟು ಗಂಜರಾಜಯಂಬ ಪಿರಂಗಿಯನ್ನು ಹಲಉ ಮಂದಿ ಸಾ ಯಿಟ್ಟಿದ್ದರಿಂದ ಈ ಕಿಲ್ಲೆದಾರನ್ನು ಹಜರಾ ಮದಿನ ಮನೆ ಉಗ್ರಾಣ ಕುಪ್ಪದಗಚ್ಚು ಸಹಾ ಕಟ್ಟಿಶಿ ಪಶ್ಚಿಮ ದಿಕ್ಕಿನ ಕೋಟೆಗೋಡೆಯನ್ನು ಬಂದೋಬಸ್ತಾಗಿ ಕಟ್ಟಿಸಿ, ಪಟ್ಟಣತ್ತವನ್ನು ಕಟ್ಟಿಸಿದನು. ಆ ಕಾಲದಲ್ಲಿ ಪಾರಪತ್ವದ ಬಗ್ಗೆ ಅರಳಿಕಪ್ಪದ ನರಸಣಂನ್ನ ಸಮೇತರಾಗಿ ಮೊಕರೂರು ಮಾಡ್ಸಿ ಇಟ್ಟನು. ಸನ್ ೧೫೮೮ನೆ ಪರಾಭವ ಸಂವತ್ಸರದ ವರಿವಿಗೆ ವರುಷ ೧೧ ಪ್ರಭುತ್ವ ಮಾಡಿದನು. ಈ ಹನ್ನೊಂದು ವರುಷದಲ್ಲಿ ಈ ದೇಶವನ್ನು ಕಾಯಿದೆ ಮೇರಿಗೆ ಶಿಸ್ತು ಕಟ್ಟಿದನು. ತರುವಾಯ ಶಿವಪ್ಪನಾಯಕನ ಮಗ ಭದ್ರಪ್ಪನಾಯಕನು ಪ್ರಭುತ್ವದಲ್ಲಿ ವಿಜಾಪುರದ ಬಾದಶಾಹನ ಕಡೆ ಇಂದ ಮುರ್ಜು ಮುಚಕ್ಕಿನ ಜಬಿಬಿಖಾನ ಕವಾಯತ್ಮ ದಿನ ದರಗಾಕುಲ್ಲಿಖಾನ ಸಾ ಬಂದು ಈ ಕಿಲ್ಲೆಗೆ ದಿನ ಹದಿನೈದು ಮುತ್ತಿಗೆ ಹಾಕಿ ಕಿಲ್ಲೆಯನ್ನು ಠಾಣೆ ಹಾಕಿದನು. ಪ್ಲವಂಗ ಸಂವತ್ಸರದಾರಭ್ಯ ಶಕ ೧೬೪೫ ಶುಭಕೃತು ಸಂವತ್ಸರ ವರಿವಿಗೆ ಮುಸಲಮಾನರು ಇದರ ಕಡೆಯವರು ಉಮತ್ತಿಗೆ ಕಿಲ್ಲೆಗೆ ಇದ್ದು. ವಿಜಾಪುರದ ಶುಬೆ ಶಿರಿಯಾ ಶುಭೆದಾರ ಸಾಲುಳಿದ ವರುಷ ೫೭ ವಿವರ: ವುಜಾಪುರದ ಕೆಳಗೆ ಅಬ್ದುಲ್‌ಖಾನೆಂಬುವನೂ ಕೆಲ್ಲೆರ ಕನಕ್ಕೆ ಶೀಮೆಗೆ ಸಾಮುಭಿ ಸರದಾರನಾಗಿ ಇದ್ದನ್ನು ಅವಾಗ. ಈ ಶೀಮೆ ಶೇಭಾನಯೆಂಬ ಜಾಹಗೀರುದಾನಗೆ ನಡೆಯುತ್ತಾ ಇತ್ತು. ಯಾರನ್ನ ವೊಬ್ಬಣದ ಇರುತ್ತಿದ್ದನು. ಇವನ್ನ ಯಾಪಿಲರ ಕಡೆಯಿಂದ ಹಣ ವಸೂಲು ಮಾಡಿಕ್ಕೊಂಬವನು. ಈ ಮೇರಿಗೆ ಅಳಿದನುಭವಿಸಿದನು ವರುಷ ೩.೦ ಆ ಮೇಲೆ ತಿಯರ್‌ಖಾನ್ ಎಂಬುವನು

ವಿಜಾಪುರದ ಸುಬೇದಾರನ ಮಾಡಿಕ್ಕೊಂಡು ಬಂದುನ್ನು. ಈತನ್ನು ಬರದೆ ಇದ್ದ ಮುಂಚಿತವಾಗಿ ಮೇಲೆ ಬರದಿರುವ ಸರ [+ ತಿಯರ್] ಖಾನನೂ ಮೃತನಾದನು.

ಯೀ ಶಿವಪ್ಪ ನಾಯಕನು ಯಿಬರು ಮಕ್ಕಳು ಬದ್ರಪನಾಯಕ ೧. ಸೋಮಶೇಖನಾಯಕ ೧. ಹಿರೆಮಗ ಬದ್ರಪ್ಪನಾಯಕನೂ ಪಟಾದಿಕಾರಿಯಾಗಿ ಬೆಲೂರು ವಸ್ತಾರೆ ಸ್ವಾಧೀನ ಮಾಡಿಕೊಂಡು ಬಿದನೂರಿಗೆ ಶೆರಿಸಿಕೊಂಡು ಯೀತನು ಕಾಲವಾಗುವ ತನಕಾ ಅಳುತ್ತಾ ಯಿದಲ್ಲಿ ಮೈಸೂರವರು ಯರಡು ಮೂರಾರ್ತ್ತೆ ದಂಡು ತೆಗೆದುಕೊಂಡು ಬಂದಲ್ಲಿ ಅವರನ ಹೊಡದು ವೊಡಿಶಿ. ವಸ್ತಾರೆ ಕಿಲ್ಲೆಯಲ್ಲಿ ೩ ಸಾವಿರ ಮಂದೀಯಿಟ್ಟು, ಕಿಲ್ಲೆಯನ್ನು ಮರಹಂಮ್ಮತ್ತು ಮಾಡಿಶಿದನು. ಯೀತನು ಪರಂಧಾಮಕೆ ಹೊದ ಮೇಲೆ ಯೀತನ ತಮ್ಮ ಸೊಮಶೆಖರನಾಯಕನೂ ಮಸಾಲೆಯಲ್ಲಿ ಕೊಡಿಸಿ ಹಾಕಿಶಿ, ಯೀತನಗೆ ಹುಚು ಬರುವ ಹಾಗೆ ಮಾಡಿಶಿದರು. ಅದ್ದರಿಂದ್ದಾ ಯೀತಗೆ ಹುಚು ಸೊಮಶೆಖರನಾಯಕಾ ಯಂಬದಾಗಿ ಹೆಸರು ಅಯಿತ್ತು. ಆ ಕಾಲದಲ್ಲಿ ಮೈಸೂರು ದೇವರಾಜವಡೆಯರು ಪುನಹಾ ದಂಡು ತೆಗೆದುಕೊಂಡು ಬಂದ್ದು, ಯಿವರ ಶೀಮೆಯಲ್ಲಿ ಗಡೀ ಕಿಲ್ಲೆಗಳು ಠಾಣೆ ಹಾಕಿಕೊಂಡು ತಮ್ಮ ಸ್ವಜನರನ ವಸ್ತಾರೆಯಲ್ಲಿ ಯಿಟ್ಟು, ಮದ್ದು ಗುಂಡು ವಗೈರಾ ಕಾರಬಾಕೀ[ರೀ] ಸಹಾಯಿಟ್ಟು ಬಂದೋಬಸ್ತು ಮಾಡಿಯಿದಲ್ಲಿ. ನಗರದಲ್ಲಿ ಸೊಮಶೆಖರನಾಯಕನ ಕೃತ್ತಿಮದಿಂದಾ ಮಾಡಿ ಕೊಂದು ಹಾಕಿಶಿದರು."[೧೩]

**ಸೋಮಶೇಖರ ನಾಯಕ**

ಬೂದಿ ಬಸಪ್ಪನಾಯಕನ ಮಗ ವೀರಭದ್ರನಾಯಕ ಸೋಮಶೇಖರ ನಾಯಕನು ಯಿಬ್ಬರು. ಯಿದರ ವಳಗೆ ಸೋಮಶೇಖರನಾಯಕರಿಗೆ ಪಟ್ಟವಾಯಿತು. ಯೀತನು ರಾಜ್ಯಭಾರ ಮಾಡುವ ಕಾಲಕ್ಕೆ ಯೀತನ ಮಾವ ನಿರ್ವಾಣಯ್ಯನು ಯಂಬುವನು ಶೃಂಗೇರಿಯಲ್ಲಿ ಮಠವನ್ನು ಕಟ್ಟಿಸಿದ್ದರಿಂದ, ಶೃಂಗೇರಿಸ್ವಾಮಿಗಳಿಗೂ ಜಂಗಮರಿಗೂ ನ್ಯಾಯಬಂದದರಿಂದ. ಯೀ ಶೃಂಗೇರಿಸ್ವಾಮಿಗಳು ಯಿಲ್ಲಿ ಮಠವನ್ನು ಕಟ್ಟಿಸಬೇಡಿ. ಯಿದು ಕಟ್ಟಿದರೂ. ಕಿತ್ತಿ ಹಾಕಿ ಬಿಡುತ್ತೇವೆ. ಯಂಬುದಾಗಿ ಹೇಳಿ ಪುನಾಹಾದ ಬಾಜೇರಾಯರಿಗೆ ಹೇಳಿಕಳುಹಿಸಿ,ಯಿಲ್ಲಿ ಜಂಗಮರ ಉಪದ್ರವ ಬಹಳವಾಗಿ ಯಿದೆ. ಯವರಿಗೆ ಯಿಕ್ಕೇರಿಯವರ ಬಲವಿದೆ ಯಂಬದಾಗಿ ಹೇಳಿದರಿಂದಾ. ಆ ಕ್ಷಣವೇ ಬಾಜೀರಾಯರು ಬಂದು, ಫ ಉಜು ಸಹಾ ತೆಗೆದುಕೊಂಡು ಬಂದು ಮೇಲೆ ಸೋಮಶೇಖರನಾಯಕರು ಸಲ್ಲಾ ಮಾಡಿಕೊಂಡು ಶೃಂಗೇರಿ ವಳಗೆ ತಮ್ಮ ಮಠ ಕೀಳುತ್ತ ಯಿದ್ದೇವೆ ಯಂಬದಾಗಿ ಹೇಳಿ, ಚೇಲುತಾಯಿ ಮೂರು ಲಕ್ಷ ವರಹಾ

ನಿಗದಿಮಾಡಿ ಕೊಡುತ್ತೇವೆ ಯಂಬುದಾಗಿ ಹೇಳಿ ಯೀ ವರಾಹವನ್ನು ಕೊಟ್ಟು, ಯೀ ಬಾಜೀರಾಯರಿಗೆ ಕೊಡಬೇಕಾದರೆ ಶೃಂಗೇರಿಮಠದವರಿಗೆ ಅನೇಕ ಧನವನ್ನು ಕೊಟ್ಟು ಸಮಾಧಾನ ಮಾಡಿಕೊಂಡು ಯಿರುವ ಯೀ ಬಾಜೀರಾಯನವರು ದಂಡು ಕಟ್ಟಿಕೊಂಡು ಪರಾಭವ ಸಂ॥ದಲ್ಲಿ ಹಿಂದಕೆ ಹೋದರು. ಶೃಂಗೇರಿಯವರು ತಮ್ಮ ಸ್ಥಳದಲ್ಲಿ ಯಿದ್ದು[>ದ್ದ] ಜಂಗಮರ ಮಠವನ್ನು ಅಲ್ಲಿ ಯಿರುವ ಭೂಮಿ ವಳಗಣ ಮಣ್ಣನ್ನು ಸಹಿತವಾಗಿ ಕಿತ್ತು ಹಾಕಿದನು. ಆ ಕಾಲದಲ್ಲಿ ಸೋಮಶೇಖರನಯಕನು ತನ್ನ ರಾಜ್ಯದ ಮೇಲೆ ವರಹಾ ೧ಕ್ಕೆ ೯೧।೦ ಚವಲ ಪಗಡಿ ಮಾಡಿ ಶಿಸ್ತಿಗೆ ಕೂಡಿದರು.

ಬಿದರೂರ ಅರ್ಸು ಸೋಮಶೇಖರನಾಯಕರು ತಮ್ಮ ಕಡೆ ಸುಭೇದಾರು ಲೋವಿ ನಿಂಗಣ್ಣ ದಂಡು ಸಹಾ ತೆಗೆದುಕೊಂಡು ಬಂದು, ಯೀ ಕೋಟೆಗೆ ಮೂರ್‍ರು ತಿಂಗಳು ಮುತ್ತಿಗೆ ಹಾಕಿ. ಯೀ ಕೋಟೆಯನ್ನು ಕಾವಲು ಮೇಲೆ ತೆಗದುಕೊಂಡು ೧೬೬೨ನೆಯ ರ ಉದ್ರಿ ಸಂ. ಲಾಗಾಯಿತು ಶಕ ವರುಷ ೧೬೮೪ನೆಯ ಚಿತ್ರಭಾನು ಸಂವತ್ಸರ ವರಿಗೆ ವರುಷ ೨೨ ಆಳಿದರು.[೧೩೩]

**ಚನ್ನಮ್ಮಾಜಿ (ಸೋಮಶೇಖರನ ಹೆಂಡತಿ) :** ಚನ್ನಮ್ಮಾಜಿಯು ಪ್ರಭುತ್ವಕ್ಕೆ ಪುತ್ರ ಸಂತಾನ ವಿಲದ್ದರಿಂದಾ ಮರಿಯಪ್ಪಶೆಟ್ಟಿ ಮಗನನ್ನು ಸಾಕು ತೆಗೆದುಕೊಂಡು ಹಳಬರು ಸಾಮಾದಿಕರನ್ನು ತೆಗೆದು ಹಾಕಿಶಿ, ಹೊಸ ಸಾಮೂದಿಕರನ್ನ ನೇಮಕಾ ಮಾಡಿಶಿ, ಅಯಂಮ ಕೆಲಸಕ್ಕೆ ಯಿಟ್ಟು ೨೫ ಸಾವಿರ ಕುಂವೀಯವರ ಹಳೆ ಪಯಿಕೀ ಕೊಟ್ಟು ತಾ[> ಕಾ] ಸರಕೊಂಡು ತಿಮ್ಮಣ್ಣನಾಯಕ, ತೊಳಪಾಡು ಬೊಮ್ಮರಸಯ್ಯನ ಸಹಾ ಕಳುಹಿಶಿ, ಯೀವುತಕ ನೀರು ವಸ್ತಾರೆ ಪರಿಯಂತ್ರಕ್ಕೂ ಬರುವ ಬಾರು ವಸ್ತಾರಿಗೆ ದಕ್ಷಿಣ ದಿಕ್ಕಿನಲ್ಲಿ ಬೈಲು ಹೊಲದಲ್ಲಿ ಅಡಿತಿನ ತೆವರೆಂಬ ಸ್ಥಳದಲ್ಲಿ ವಂದು ಹರದಾರೀ ಮೇಲೆ ಯಿಳುಕೊಂಡರು. ಮೈಸೂರವರ ಕಡೆಯಿಂದಾ ವಸ್ತಾರೆ ಕೊಟೆಯಲ್ಲಿ ಯಿದ ತಿಮ್ಮಣ್ಣ ದಳವಾಯಿಯು ಮೂರು ದಿವಸ ಪರಿಯಂತ್ರಾ ಬಹಳ ಯುದ್ಧವನ್ನು ಮೆಯಿಸೂರವರ ಮಂದೀ ಸಂಗಡ ಮಾಡಿ ಯಡೆಹಳ್ಳಿ ಬದಿಯಲ್ಲಿ ಅರ್ಧ ಹರದಾರಿ ಮೇಲೆ ದೇಹ ಬಿಟ್ಟನು. ಮೈಸೂರವರ ಮಂದಿಕಿಂತಾ ಯೀ ಬಿದರೂರವರ ಮಂದಿ ಹೆರಾಳವಾದ ಕಾರಣ ಯೀ ಮೈಸೂರವರ ಸಯಿನ್ಯವು ಪೆಟ್ಟು ಬಿದ್ದು ಪರಾಜಿತವಾಗಿ ವೊಡಿಹೊದರು. ಆಮೇಲೆ ಯೀ ಬಿದರೂರವರು ಯೀ ವಸ್ತಾರೆ ತೆಗೆದುಕೊಂಡು, ಯೀ ಕೋಟೆಯಲ್ಲಿ ತಮ್ಮಕಡೆ ಮಂದೀ ಕೆಲವು ಯಿಟ್ಟು ಬಂದೋಬಸ್ತು ಮಾಡಿ ಹೋದರು.

ಆ ಮೇಲೆ ಕೆಲವು ದಿವಸವಾಗುವುದು ದೊಡ್ಡದೇವರಾವಡೆಯರ ಮಗ ಕೃಷ್ಣರಾಜವಡೆಯ ಮಂದಿ ತೆಗೆದುಕೊಂಡು, ಯೀ ಕೋಟೆಗೆ ಮುತ್ತಿಗೆ ಹಾಕಿ ಯುದ್ಧ ಮಾಡಿದರು. ಯೀ ವಸ್ತಾರೆ ಕಿಲ್ಲೆದಲ್ಲಿ ಯಿದವರಿಗೆ ಬಿದರೂರವರ ಕಡೆಯವರು ಕುಮಕು ಬಾರದೆ ಹೊದ ಕಾರಣ. ಆ ಕಿಲ್ಲೆದಲ್ಲಿ ಯಿದವರು ಮೈಸೂರವರ ಕಡೆಯಂದ್ದಾ ಬಹಳ ಘೂ[>ಘಾ]ಶಿ ಆಗಿ, ಹತಸೆಷವಾದರು. ತಮ್ಮ ಕಡೆ ಕೆಲವು ಮಂದಿ ಯೀ ಗಡಿಯಲ್ಲಿ ಯಿಟ್ಟು, ಬಂದೋಬಸ್ತು ಮಾಡಿ, ಕೃಷ್ಣರಾಜವಡೆರು ಯೀ ವಸ್ತಾರೆಯನ್ನೂ ಮೈಸೂರು ಸಂಸ್ಥಾನಕೆ ಶೆರಿಶಿ ಕೆಲವು ದಿವಸ ಆಳಿದ್ದು, ಆ ಸಮಯದಲ್ಲಿ ಚೆನ್ನಮ್ಮಾಜಿ ದೇಹ ಬಿಟ್ಟಳು.[೧೩೪]

**ಚನ್ನಮ್ಮಾಜಿಯ ಸಾಕುಮಗ ಬಸಪ್ಪನಾಯಕ ಕೈಫಿಯತ್ತುಗಳಲ್ಲಿರುವಂತೆ.**

ಆಕೆ ಆದ ತರುವಾಯ ಸಾಕು ಮಗ ಬಸಪ್ಪನಾಯಕ ಸ್ವತಂತ್ರ ಪ್ರಭುತ್ವಾ ಮಾಡುತ್ತಾ ಬಂದು. ಆತನ ಕಾಲದಲ್ಲಿ ಮತ್ತು ಬಹಳವಾಗಿ ದಂಡು ತೆಗೆದುಕೊಂಡು ಬಂದು, ಮೈಸೂರವರ ಕಡೆಯವರ ಸಂಗಡ, ಯುದ್ಧಮಾಡಿ, ವಸ್ತಾರೆ, ಕಿಲ್ಲೆಂದಾ ಅವರನ ಪರಾಜಿತವಾಗು ಹಾಗೆ ಮಾಡಿಶಿ, ಕಿಲ್ಲೆ ಸ್ವಾಧೀನ ಮಾಡಿಕೊಂಡು, ಮುಂದೆ ಶ್ರೀರಂಗಪಟ್ಟಣದ ತನಕಾ ಹೊಗಿ, ರಾಜ್ಯ ಸಾಧಿಸಬೆಕುಯಂಬ ಅಭಿಲಾಷೆಯಿಂದ್ದಾ ದಂಡು ಸಹಿತವಾಗಿ ಯಿಳುಕೊಂಡು ಯಿದು, ಯೀ ಸಮಾಚಾರ ತಿಳಿದು ಮೈಸೂರು ಕೃಷ್ಣರಾಜವಡೆರು ತಮ್ಮ ದಂಡು ಶಿಧಾ ಮಾಡಿಕೊಂಡು ಬೇಲೂರು ಗಡಿಯಲ್ಲಿ ಯೀ ಬಿದರೂರವರ ಸಂಗಡ ಸಲ್ಲಾ ಮಾಡಿಕೊಳುವ ಸಂವಿಧಾನದಲ್ಲಿ ಯಿದ್ದು, ತಮ್ಮ ಕಡೆಯಿಂದ್ದಾ ಪ್ರಹ್ಲಾದಪಂಡಿತನ ಹೆಜಬಗೆ ಬಿದರೂರು ಅರಶಿನುಳಿಗೆ ವಸ್ತಾರಿಗೆ ಕಳುಹಿಸಿವಾಗ್ಯೆ ಯೆನೆಂತ್ತಯಾದರೆ ಮೈಸೂರವರು ಬಿದರೂರವರು ದಂಡೆತ್ತಿ ಸ್ವಾರಮಾಡುವದ್ದರಿಂದ್ದಾ ಯೀ ಭಾಗದಲ್ಲಿ ಯಿರೊ ಶೀಮೆಗಳು ಅನೇಕ ಕಾಲದ ಯಿಂದಾ ನಿರ್ಮೂಲವಾಗುವದಾಗಿ ಆಯಿತ್ತು. ಯಿದರಿಂದ್ದಾ ರೈತರೆಲ್ಲರು ಅನೇಕ ಲುಕಸಾಲು[>ನು] ಪಡೆದರು. ಅದುಕೊಸ್ತರವಾಗಿ ಉಭಯತ್ತರೂ ಸಲ್ಲಾ ಮಾಡಿಕೊಳಬೇಕೆಂದ್ದೂ, ಅವರು ನಿರೀಕ್ಷಿಸುತ್ತಾರೆ. ಯಿದು ಹೊರ್ತು ಸಾಮಾನೀಕರಿಗೆ ಅರ್ಥವ್ರಯಮಾಡಿದರು. ಆಗ ಅವರು ತಮ್ಮ ಧಣೇರಿಗೆ ಹೆಳಿ ಆಲೊಚನೆ ಮಾಡಿ ಯೀ ಕರ್ತರಿಗೆ ವಂದ್ದು ತಹಾ ಮಾಡಿಶಿ, ವಸ್ತಾರೆ ಬಿದರೂರವರಿಗೆ ಕೊಡಿಶಿ, ಬೇಲೂರು ಮೈಸೂರವರಿಗೆ ಕೊಡಿಶಿ ಕಂಚಿನ ಕಲ್ಲುದುರ್ಗ ಗಡಿ ಗೊತ್ತುಮಾಡಿ, ಯಿದು ವಸ್ತಾರೆ ಬೇಲೂರಿಗೆ ಮಧ್ಯಸ್ತಳವಾದ ಕಾರಣ ಗೊತ್ತುಮಾಡಿ, ಯಿ ಭಾಷಾಪತ್ರಗಳು ವುಭಯತ್ತರಿಗೂ ಹುಟಿಶಿಕೊಟರು.[೧೩೫]

**ಕೆಳದಿ ಬಸಪ್ಪನಾಯಕನ ಹೆಂಡತಿ ವೀರಮ್ಮಾಜಿ** : ಬೆಂಕಿಪುರದ ಬಸಪ್ಪನಾಯಕರ ಪತ್ನಿಯಾದ ವೀರಮ್ಮಾಜಿಯು ತಮ್ಮ ಸೋದರಮಾವನಾದರಿಂದ ಪಟ್ಟಣಸೆಟ್ಟಿ ಚೆನ್ನವೀರಪ್ಪನ ಮಕ್ಕಳು ನಾಯಕ (ನಾಲಕು?) ಮಂದಿಯಲ್ಲಿ ಹಿರೀ (ಕಿರೀ?) ಮಗ ಬುದ್ಧಿಶಾಲಿಯಾದ ಕಾರಣ ಆತನಂ ತೆಗೆದುಕೊಂಡು ಸೋಮಶೇಖರನಾಯಕನೆಂದು ಆ ಹುಡುಗನಿಗೆ ಹೆಸರಿಟ್ಟು ಅವನಿಗೆ ಪಟ್ಟಾಭಿಷೇಕ ಮಾಡಿ ಸಣ್ಣವನಾದುದರಿಂದ ವೀರಮ್ಮಾಜಿಯವರು ರಾಜ್ಯಪರಿಪಾಲನೆ ಮಾಡಿದರು. ಈಶ್ವರ ಸಂವತ್ಸರದ ಶ್ರಾವಣ ಶುದ್ಧ॥ ೩ ಆರಭ್ಯ ಚಿತ್ರಭಾನು ಸಂವತ್ಸರದ ಪುಷ್ಯಮಾಸದ ವರೆಗೆ ವರ್ಷ ೫ ತಿಂಗಳು ೬, ದಿನ ೩ರ ವರೆಗೆ (ಸೋಮಶೇಖರನಾಯಕನು) ರಾಜ್ಯವಾಳಿದನು.

೧೬, ಅಂತು ಹದಿನಾರು, ಈ ಪ್ರಕಾರ ಚಿತ್ರಭಾನು ಸಂವತ್ಸರದ ವರೆಗೆ ನಗರದ ದೊರೆಗಳು ಧರ್ಮದಿಂದ ರಾಜ್ಯಪರಿಪಾಲನೆ ಮಡಿಕೊಂಡು ಬಂದರು.

ಆ ಸಮಯದಲ್ಲಿ ಚಿತ್ರದುರ್ಗ ಪಾಳೇಗಾರಂನ ಕೂಡಿಕೊಂಡು ಬಹದರನು ಬಂದು ಬಿದನೂರು ತೆಗೆದುಕೊಂಡು ಚಿತ್ರಭಾನು ಸಂವತ್ಸರದ ಮಾಘಮಾಸದ ವರಿಗೇ.ಯೀಕೆಯು ಚಿತ್ರಭಾನು ಸಂವತ್ಸರದ ವರಿಗೇ ಆಳಿದಳೂ. ಯೀಕೆಯೇ ಯೀ ನಗರದ ಸಂಸ್ತಾನಕ್ಕೆ ಆಖೈರಾಯ್ತು. ಆ ಬಳಿಕ ಹೈದರಲ್ಲಿಖಾನನು ವೀರಂಮಾಜಿಯವರಂನು ಕೈಸೆರೆ ಹಿಡಿದು, ಮಧ್ಗಿರಿಯೊಳಗೆ ಯಿಟ್ಟಿದ್ರು. ಬಿದನೂರಿಗೆ ಯಿದಕ್ಕೆ ಪೂರ್ವದ ಅರಸುಗಳ ಅಭಿಪ್ರಾಯವನ್ನು ತಿಳಿದು ಹೈದರನಗರಾಯೆಂಬ ಹೆಸರಿಟ್ಟನು. ಚಿತ್ರಭಾನು ಸಂ॥ ದಾರಭ್ಯ ಶುಭಕೃತು ಸಂ॥ ವರಿಗೆ ವರ್ಷ ೨೧ ಆಳಿದನು. ತದನಂತ್ತರ ಯೀತನ ಮಗ ಟೀಪುಸುಲ್ತಾನನೆಂಬಾತನು ಪೌ[>ಚೌ] ಥಾಯಿ ಅನಿಸಿಕೊಂಡು ಸಿದ್ಧಾರ್ಥಿ ಸಂ॥ ರದ ಚೈತ್ರ ೩೦ ವರಿಗೆ ಆಳಿದರು.[೧೩೬]

ವ್ಯಯ ಸಂವತ್ಸರದ ಆರಭ್ಯ ಚಿತ್ರಭಾನು ಸ್ಂವತ್ಸರದ ಮಾಘ ಶು ೨ ಪರಿಯಂತ್ರಾ ವಸ್ತಾರೆ ಬಿದರೂರು ಸಂಸ್ಥಾನದ ದೊರಿಗಳ ಅಧಿಕಾರದ ವಳಗೆ, ಬಸಪ್ಪನಾಯಕ ಮೊದಲು ಮಾಡಿ ಸೊಮಶೆಖರನಾಯಕನು ಬಿದರೂರು ಸಂಸ್ಥಾನಕೆ ಲಭೆ ಆದ ರಾಣಿ ವೀರಮ್ಮಾಜಿ ಸಾಕು ತೆಗೆದುಕೊಂಡು ಮಗ, ಯಿವನ ಪರಿಯಂತ್ರಕ್ಕೂ ಯೆನು ತೊಂದರೆ ಡಾಂಬರವಿಲ್ಲದೆ ಯೀ ವುಭಯ ಪಕ್ಷದವರು ತಮಹಾಲು ನಿರ್ಮಲವಾಗಿ ಯಿರುವ ಸಮಯದಲ್ಲಿ, ಯೀ ಬಿದರೂರು ಸಮಸ್ಥಾನದವರು ತಂಮ್ಮಾ ಕಡೆಯಿದ್ದಾ ಯೀ ವಸ್ತಾರೆ ಕೊಟೆಯಲ್ಲಿ ಮದ್ದುಗುಂಡು ಸಾಮಾನು ಸರಂಜಾಮೆ ಸುದಾ ಯಿಟ್ಟು, ಯೀ ಕೊಟೆಯಲ್ಲಿ ಯೀ ಬಿದರೂರವರಿಗೆ ಕಡೆಗಡಿಯಾದ ಕಾರಣ

ದುರಸ್ತುಮಾಡ್ಸಿ, ಸರ್ವದಾ ಮತ್ತೇನು ಅವಿವೇಕಗಳು ಬಾರದ ಹಾಗೆ ದ್ರಿಷ್ಟಿಯಲ್ಲಿಯಿಟ್ಟು ಯಿರುತ್ತಿದ್ದರು. ಯಿ ವಸ್ತಾರೆ ಯೀ ಬಿದರೂರವರ ವಳಗೆ ದಾಖಲು ಆದಮೇಲೆ, ಸಂಸ್ಥಾನದ ರಾಜ್ಯಭಾರಾ ಮಾಡಿದವರು ವಿವರಾ ಕೆಳಗೆ ಬರದ ಪ್ರಕಾರಕ್ಕೆ ವ್ಯಯ ಸಂವತ್ಸರದಾರಭ್ಯ ಚಿತ್ರಭಾನು ಸಂವತ್ಸರದ ವರಿಗೆ:

ಬಸಪ್ಪನಾಯಕ ೧೦ ವರುಷ, ಸೋಮಶೆಖರನಾಯಕ ೨೪, ಬೂದಿ ಬಸಪ್ಪನಾಯಕ ೧೫, ಚನ್ನಬಸಪ್ಪನಾಯಕ ೨, ಸೊಮಶೆಖರ ವೀರಮ್ಮಾಜಿ ಸಾಕುಮಗ ವರುಷ ೫, ಯೀ ಮೆರಿಗೆ ಅಂತ್ತೂ ಜನ ೫ ಕೆ ಆಳಿದ ವರುಷ ೫೬.

ಚಿತ್ರಭಾನು ಸಂವತ್ಸರದ ಮಾಘ ಬ ೨ಲ್ಲೂ ಹೈದರಲ್ಲಿಖಾನಗೆ ಬರಾಜನ ವೇಷಧಾರಿ ಸಂಗಡ ಹತರು ತೆಗದುಕೊಂಡು ಬಂದು, ಯೀಗ್ಯೆ ಬರಾಜ ಮೇಲೆ ಬರದ ೩ ನದಲ್ಲಿ ನಾಲ್ಕನೆಯವನು ಯೀತನು ವೀರಮ್ಮಾಜಿಯು ತನ್ನ ಪ್ರಾಣಕೆ ತಂದದರಿಂದಾ, ಚಿತ್ರಗಲ್ಲು ಪಾಳೆಗಾರನ ಹತ್ರೆ ಕೆ [> ಹೈ] ದರನ ಸಹಾ ಸೇರಿಕೊಂಡವನು. ಯಿವನ ಹೆಸರಲ್ಲಿ ಬಿದರೂರಿಗೆ ಬರುವ ಮಾರ್ಗದಲ್ಲಿ ಸುಲಭವಾಗಿ ಗಡಿಗಳೆಲ್ಲಾ ಠಾಣೆ ಹಾಕಿಕೊಳ್ಳುತ್ತಾ ಬಂದರು. ವೀರಮ್ಮಾಜಿಯು ದುಷ್ಟಚರಿತ್ರೆಯಿಂದಾ ಬಹದರು ಮೆದಕರೆನಾಯಕನ ಸಂಗಡ ಫವುಜು ತೆಗದುಕೊಂಡು ಬರುವದಕ ಮೊದಲೆ ಯೀ ಸಂಸ್ಥಾನದಲ್ಲಿ ಬಹಳ ತೊಂದರೆ ಆಗಿ, ಅಸ್ವಾರಸ್ಯವಾಗಿ ಯಿತ್ತು. ಹೀಂಗ್ಗೆ ಯಿರುವಲ್ಲಿ ಬಹದರವರ ಫವುಜು ಬಂದ ವರ್ತಮಾನ ತಿಳದು, ಅರಮನೆಗೆ ಬೆಂಕೀ ಹಾಕಿ ಕೆಲವು ಖಜಾನೆ ತೆಗೆದುಕೊಂಡು ಬಲಾಳರಾಯದುರ್ಗ ವೊಡಿಹೊದಳು. ಆಮೆಲೆ ಯೀ ಬಹದರನು ಬಿದರೂರೂ ಠಾಣೆ ಹಾಕಿದ ದಾಳೀ ಇಟ್ಟು ಲೂಟಿಮಾಡಿಶಿದ. ಆಮೇಲೆ ಬಿದರೂರು. ಸ್ವಾಧೀನ ಮಡಿಕೊಂಡ ಬಳಿಕ ಕಾರಶಹಯಂಬ ತನ್ನ ಗುರುವನನು ವೀರಮ್ಮಾಜಿ ಬಳಿಗೆ ಕಳುಹಿಸಿ, ವಡಂಬಡಿಕೆಯಿಂದ ಕರಕೊಂಡು ಬರಬೇಕೆಂದು ಕಳುಹಿಶಿದಲ್ಲಿ ಆತ ಹೋಗಿ ಯೀ ವೀರಮ್ಮಾಜಿಯನ್ನು ಬಹದರನ ದರ್ಶನಕೆ ಕೊಡಿಯಾಲಕೆ ಕರಕೊಂಡು ಬಂದ್ದರು.[೧೩೭]

ಅನಂತರದಲ್ಲಿ ಯಿವನ ಹೆಂಡತಿ ವೀರಮ್ಮಾಜಿಯವರು ಆಳಿದ್ದು ಚಿತ್ರಬಾನು ಸಂ ಮಾರ್ಗಶಿರ ಶು॥ ೨ ಆದಿತ್ಯವಾರ ಪರಿಯಂತ್ರಕು ವರುಷಾ ೧ಕೆ ಮರಾಟೆಯವರಿಗೆ ೧೨ ಲಕ್ಷ ರೂಪಾಯಿ ಕೊಟ್ಟುಕೊಂಡು ರಾಜ್ಯವನಾಳಿದರು, ಯಿ ಪ್ರಕಾರ ಚಿತ್ರಭಾನು ಸಂ।ವರಿಗೆ ಆಳಿದರು. ಆಗ್ಯೆ ಕಂದ ರಾಜಪ್ಪಯ.... ಮಗ ಕುತುಕ ..... ಚಿತ್ರಭಾನು ಸಂ। ಆಳುತಿರುವಾಗೆ ಸ್ತಳಕೆ ಆಳ್ಲು....?.. ಬಂದು ಬಿದರ್ರೂರ ತೆಗೆದುಕೊಂಡು

ವೀರಮ್ಮಾಜಿಯವರನ್ನು ಕೈಸೆರೆ ಹಿಡಿದು. ಮದ್ದಗಿರಿ ವಳಗೆ ಯಿಟ್ಟರು. ಯೀ ಬಿದರೂರ್‍ರಿಗೆ ಹೈದರ ನಗರಯಂಬ ಹೆಸರು ಯಿಟ್ಟರು. ಈ ಚಿತ್ರಭಾನು ಸಂ।ಆರಭ್ಯ.[೧೩೮]

**ಕೊನೆ ಟಿಪ್ಪಣಿಗಳು**

೧. ಕಲಬುರ್ಗಿ.ಎಂ.ಎಂ, ಕರ್ನಾಟಕ ಕೈಫಿಯತ್ತುಗಳು, ಪು. xii

೨. ರಾ.ಗ.ಅಜಿಬಾಳ, ಕರ್ನಲ್ ಮೆಕೆಂಝಿ, ಪು. ೧೦

೩. ಅದೇ, ಪು. ೧೧

೪. ಕಲಬುರ್ಗಿ.ಎಂ.ಎಂ, ಕರ್ನಾಟಕ ಕೈಫಿಯತ್ತುಗಳ ಗ್ರಂಥದಲ್ಲಿ ಪ್ರಸ್ತಾಪಿಸಿರುವ ಕೈಫಿಯತ್ತುಗಳ ಪಟ್ಟಿ ಹಾಗೂ ವಿಲ್ಸನ್ ಹೆಚ್.ಹೆಚ್.ಮೆಕೆಂಝಿ ಕಲಕ್ಷನ್‌ನಲ್ಲಿ ಎರಡು ಗ್ರಂಥಗಳಲ್ಲಿ ಬರುವ ಕೈಫಿಯತ್ತುಗಳ ಪಟ್ಟಿ ನೀಡಲಾಗಿದೆ.

೫. ಕಲಬುರ್ಗಿ.ಎಂ.ಎಂ., ಕರ್ನಾಟಕ ಕೈಫಿಯತ್ತುಗಳು, ಪು. xi

೬. ಅದೇ., ಪು. xii

೭. ಮುತ್ತಣ್ಣ ಐ.ನ, ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯ ಮೇಲೆ ಪಾಶ್ಚಿಮಾತ್ಯರ ಪ್ರಭಾವ, ಪು. ೧೧೭

೮. ಶ್ರೀನಿವಾಸ ಹಾವನೂರು, ಪು. ೨೧೧

೯. ಬ್ಲೇಕ್., ಪು.೨೧

೧೦. ಕಲಬುರ್ಗಿ ಎಂ.ಎಂ, ಕರ್ನಾಟಕ ಕೈಫಿಯತ್ತುಗಳು. ಪು. xxvii

೧೧. ವಿಲ್ಸನ್ ಹೆಚ್.ಹೆಚ್, – ಮೆಕೆಂಝಿ ಕಲೆಕ್ಷನ್, ಪು. ೪೦

೧೨. ಕಲಬುರ್ಗಿ ಎಂ.ಎಂ, – ಕರ್ನಾಟಕದ ಕೈಫಿಯತ್ತುಗಳು. ಪು. xxvii

೧೩. ಅದೇ, ಪು. xxix

೧೪. ಅದೇ, ಪು. xxviii

೧೫. ಅದೇ, ಪು. xxiv

೧೬. ಅದೇ, ಪು. xxiv

೧೭. ಅದೇ, ಪು. xxv

೧೮. ಅದೇ, ಪು. xxv

೧೯. ಅದೇ, ಪು. xxix

೨೦. ಅದೇ, ಪು. xxix

೨೧. ವಿಲ್ಸನ್ ಹೆಚ್.ಹೆಚ್. ಮೆಕೆಂಝಿ ಕಲೆಕ್ಷನ್, ಪು. ೫೨

೨೨. ಜೆನ್ನಿಫರ್, ಪು.

೨೩. ವಿಲ್ಸನ್ ಹೆಚ್.ಹೆಚ್. ಮೆಕೆಂಝಿ ಕೆಲಕ್ಷನ್, ಪು. ೭೬

೨೪. ಅದೇ, ಪು. ೮೨

೨೫. ಕಲಬುರ್ಗಿ – ಕರ್ನಾಟಕ ಕೈಫಿಯತ್ತುಗಳು, ಪು. ೬೮

೨೬. ಅದೇ, ಪು. xxx

೨೭. ಹಾವನೂರು – ಅರುಣೋದಯ, ಪು. ೫೨೧

೨೮. ಪುಟ್ಟಸ್ವಾಮಿ ಬಿ.ಎಸ್., – ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ, ಪು.ಥ

೨೯. ಅದೇ., – ಪು. xi

೩೦. ಶ್ರೀನಿವಾಸ ಹಾವನೂರು, – ಪು.೧೧೬–೧೧೭

೩೧. ದೇವರಕೊಂಡಾರೆಡ್ಡಿ, ಇತಿಹಾಸ ದರ್ಶನ, ಆನೇಕಲ್ ಪಾಳೇಗಾರ ಕೈಫಿಯತ್ತು, ಒಂದು ಚಾರಿತ್ರಿಕ ಪರಿಶೀಲನೆ, ಪು. ೧೩೦

೩೨. ಗ್ರೋವರ್ ಅಂಡ್ ಗ್ರೋವರ್, ಪು.೨೧೭

೩೩. ಪುಟ್ಟಸ್ವಾಮಿ.ಬಿ.ಎಸ್. ಕೈಫಿಯತ್ತು ಕಂಡ ಮೈಸೂರು ಪ್ರದೇಶದ ರಾಜಕೀಯ ಚರಿತ್ರೆ, ಪು.೪೬

೩೪. ಅದೇ, ಪು. ೪೭

೩೫. ಜೆನ್ನಿಫರ್, ಪು. ೮೬

೩೬. ಅದೇ, ಪು. ೮೮

೩೭. ಹಾವನೂರು, ಪು. ೩೨

೩೮. ಬಿ.ಎನ್. ಸಣ್ಣಯ್ಯ, ದೇವಚಂದ್ರ ರಾಜಾವಳಿ ಕಥಾಸಾರ, ಪು. ೦೪

೩೯. ಡೇವಿಡ್.ಎಂ. ಬ್ಲೇಕ್, ಕಾರ್ನಲ್ ಮೆಕೆಂಝಿ ಕಲೆಕ್ಟರ್ ಎಕ್ಸಾರ್ಡಿನರಿ, ಪು. ೧೩೮

೪೦. ಪುಟ್ಟಸ್ವಾಮಿ.ಬಿ.ಎಸ್. ಕೈಫಿಯತ್ತುಕಂಡ ಮೈಸೂರು ಪ್ರದೇಶದ ರಾಜಕೀಯ ಚರಿತ್ರೆ, ಪು. ೨೮

೪೧. ಶ್ರೀನಿವಾಸ್ ಎಂ.ವಿ., – 'ಸ್ಥಳೀಯ ಇತಿಹಾಸದ ಸಮಸ್ಯೆಗಳು' ಹರಿತಿಸಿರಿ, ಪು. ೧೪೭

೪೨. ಎಂ.ವಿ. ಶ್ರೀನಿವಾಸ್ (ಸಂ.) ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪು. ೧೯೧

೪೩. ಅದೇ, ಪು. ೫೬

೪೪. ಕಲ್ಬುರ್ಗಿ.ಎಂ.ಎಂ., ಕರ್ನಾಟಕ ಕೈಫಿಯತ್ತು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೧೯೯೪, ಪು. ೯೬

೪೫. ಅದೇ, ಪು. ೧೧೮

೪೬. ಪುಟ್ಟಸ್ವಾಮಿ.ಬಿ.ಎಸ್., ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಮನೋಜ್ ಪಬ್ಲಿಕೇಷನ್, ಬೆಂಗಳೂರು, ೨೦೧೨, ಪು. ೯೯–೧೦೦

೪೭. ಅದೇ,, ಪು. ೧೦೦

೪೮. ಅದೇ,, ಪು. ೧೦೦-೧೦೧

೪೯. ಅದೇ, ಪು. ೧೦೧-೧೦೨

೫೦. ಕಲ್ಬುರ್ಗಿ.ಎಂ.ಎಂ, ಕರ್ನಾಟಕದ ಕೈಫಿಯತ್ತುಗಳು, ಹೊಳೆಹೊನ್ನೂರು ಕೈಫಿಯತ್ತು, ಪು.ಸಂ. ೨೨೦

೫೧. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಪು.ಸಂ. ೧೦೧

೫೨. ಪುಟ್ಟಸ್ವಾಮಿ.ಬಿ.ಎಸ್., ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಮನೋಜ್ ಪಬ್ಲಿಕೇಷನ್, ಬೆಂಗಳೂರು, ೨೦೧೨, ಪು. ೧೦೨

೫೩. ಅದೇ, ೧೦೨-೧೦೩

೫೪. ಅದೇ, ೨೦೧೨, ಪು. ೧೦೩

೫೫. ಅದೇ, ಪು. ೧೦೩-೧೦೪

೫೬. ಅದೇ, ಪು. ೧೦೪

೫೭. ಅದೇ, ಪು. ೧೦೪-೧೦೫

೫೮. ಅದೇ, ಪು. ೧೦೫

೫೯. ಅದೇ, ಪು. ೧೦೫-೧೦೬

೬೦. ಅದೇ, ೨೦೧೨, ಪು. ೧೬೦

೬೧. ಅದೇ, ಪು. ೧೦೭

೬೨. ಅದೇ, ಪು. ೧೦೭

೬೩. ಅದೇ, ಪು. ೧೦೮

೬೪. ಅದೇ, ಪು. ೧೦೯

೬೫. ಅದೇ, ಪು. ೧೦೯-೧೧೦

೬೬. ಅದೇ, ಪು. ೧೧೪

೬೭. ಅದೇ, ಪು. ೧೧೪-೧೧೫

೬೮. ಅದೇ, ಪು. ೧೧೫

೬೯. ಅದೇ, ಪು. ೧೧೫

೭೦. ಅದೇ, ಪು. ೧೧೬

೭೧. ಅದೇ, ಪು. ೧೧೬

೭೨. ಅದೇ, ಪು. ೧೧೬-೧೧೭

೭೩. ಅದೇ, ಪು. ೧೧೭

೭೪. ಅದೇ, ಪು. ೧೧೭

೭೫. ಅದೇ, ಪು. ೧೧೮

೭೬. ಅದೇ, ಪು. ೧೧೮

೭೭. ಅದೇ, ಪು. ೧೧೯-೧೨೦

೭೮. ಅದೇ, ಪು. ೧೨೦

೭೯. ಅದೇ, ಪು. ೧೨೦-೧೨೨

೮೦. ಅದೇ, ಪು. ೧೨೨

೮೧. ಅದೇ, ಪು. ೧೨೩

೮೨. ಅದೇ, ಪು. ೧೨೩

೮೩ ಅದೇ, ಪು. ೧೨೩-೧೨೬

೮೪. ಅದೇ, ಪು. ೧೨೯-೧೩೦

೮೫. ಅದೇ, ಪು. ೧೩೩-೧೩೫

೮೬. ಅದೇ, ಪು. ೧೩೭

೮೭ ಅದೇ, ಪು. ೧೩೭-೧೩೯

೮೮. ಅದೇ, ಪು. ೧೩೮-೧೩೯

೮೯. ಅದೇ, ಪು. ೧೩೯-೧೪೦

೯೦. ಅದೇ, ಪು. ೧೪೦

೯೧. ಅದೇ, ಪು. ೧೪೦-೧೪೨

೯೨. ಅದೇ, ಪು. ೧೪೨

೯೩. ಅದೇ, ಪು. ೧೪೭-೧೪೯

೯೪. ಅದೇ, ಪು. ೧೪೮

೯೫. ಅದೇ, ಪು. ೧೪೯-೧೫೦

೯೬. ಅದೇ, ಪು. ೧೫೦-೧೫೧

೯೭. ಅದೇ, ಪು. ೧೫೧

೯೮. ಅದೇ, ಪು. ೧೫೩-೧೫೪

೯೯. ಅದೇ, ಪು. ೧೫೪-೧೫೫

೧೦೦. ಅದೇ, ಪು. ೧೫೫

೧೦೧. ಅದೇ, ಪು. ೧೫೫-೧೫೭

೧೦೨. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೫೬-೧೫೭

೧೦೩. ಅದೇ, ಪು. ೧೫೮-೧೫೯

೧೦೪. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೫೯–೧೬೦

೧೦೫. ಅದೇ,, ಪು. ೧೬೧

೧೦೬. ಅದೇ, ಪು. ೧೬೨–೧೬೩

೧೦೭. ಅದೇ, ಪು. ೧೬೩

೧೦೮. ಅದೇ, ಪು. ೧೭೦

೧೦೯. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೭೦–೧೭೩

೧೧೦. ಅದೇ, ಪು. ೧೭೩

೧೧೧. ಅದೇ, ಪು. ೧೭೩–೧೭೪

೧೧೨. ಅದೇ, ಪು. ೧೭೪–೧೭೫

೧೧೩. ಅದೇ, ಪು. ೧೭೫–೧೭೬

೧೧೪. ಅದೇ, ಪು. ೧೭೬

೧೧೫. ಅದೇ, ಪು. ೧೭೭–೧೮೦

೧೧೬. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೮೦

೧೧೭. ಅದೇ, ಪು. ೧೮೦

೧೧೮. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೮೧–೧೮೨

೧೧೯. ಅದೇ, ಪು. ೧೮೨–೧೮೩

೧೨೦. ಅದೇ,ಪು. ೧೮೩–೧೮೫

೧೨೧. ಅದೇ,ಪು. ೧೯೦

೧೨೨. ಅದೇ, ಪು. ೧೯೦

೧೨೩. ಅದೇ, ಪು. ೧೯೧

೧೨೪. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೯೧–೧೯೩

೧೨೫. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೩೫–೧೩೭

೧೨೬. ಅದೇ,

೧೨೭. ಅದೇ, ಪು. ೧೪೩–೧೪೪

೧೨೮. ಅದೇ, ಪು. ೧೪೭–೧೪೮

೧೨೯. ಅದೇ,ಪು. ೧೪೮–೧೪೯

೧೩೦. ಅದೇ, ಪು. ೧೪೯–೧೫೦

೧೩೧. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೫೦–೧೫೧

೧೩೨. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೫೧–೧೫೩

೧೩೩. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೫೩–೧೫೪

೧೩೪. ಅದೇ,೨೦೧೨, ಪು. ೧೫೪–೧೫೫

೧೩೫. ಅದೇ,೨೦೧೨, ಪು. ೧೫೫

೧೩೬. ಅದೇ,೨೦೧೨, ಪು. ೧೫೫–೧೫೭

೧೩೭. ಪುಟ್ಟಸ್ವಾಮಿ.ಬಿ.ಎಸ್, ಕರ್ನಲ್ ಮೆಕೆಂಝಿ ಮತ್ತು ಕೈಫಿಯತ್ತುಗಳು, ಬೆಂಗಳೂರು, ೨೦೧೨, ಪು. ೧೫೭

೧೩೮. ಅದೇ, ಪು. ೧೫೭

## ಅಧ್ಯಾಯ-೪

# ಕರ್ನಲ್ ಮೆಕೆಂಝಿಯ ಇತರೆ ಸಂಗ್ರಹಗಳು

ಕರ್ನಲ್ ಮೆಕೆಂಝಿಯವರ ಸಂಗ್ರಹ ಪ್ರಾಯಶಃ ಜಗತ್ತಿನ ಅತ್ಯಂತ ದೊಡ್ಡ ಐತಿಹಾಸಿಕ ಆಧಾರಗಳ ಸಂಗ್ರಹವಾಗಿದೆ. ಅದರಲ್ಲಿನ ವೈಶಿಷ್ಯತೆ ಮತ್ತು ವೈವಿಧ್ಯತೆ ಎಂತಹವರನ್ನು ಬೆರಗುಗೊಳಿಸುವಂತಹುದು. ಕರ್ನಲ್ ಮೆಕೆಂಝಿಯವರ ಸಂಗ್ರಹದಲ್ಲಿ ಹಸ್ತಪ್ರತಿಗಳು, ಶಾಸನಗಳು, ನಕ್ಷೆಗಳು, ನಾಣ್ಯಗಳು, ಚಿತ್ರಗಳು, ರೇಖಾಚಿತ್ರಗಳು, ವಿಗ್ರಹಗಳು, ಭೂಪಟಗಳು, ಲೋಹಮೂರ್ತಿಗಳು, ಆಭರಣಗಳು, ಗೃಹೋಪಯೋಗಿ ವಸ್ತುಗಳು ಇತ್ಯಾದಿ ವಸ್ತುಗಳು ಪ್ರಮುಖವಾದವು.[೧] ಕರ್ನಲ್ ಮೆಕೆಂಝಿಯವರ ಸಂಗ್ರಹಗಳನ್ನು ವಿವರಿಸುವಾಗ ಅವರು ಕೈಗೊಂಡ ಸಂಗ್ರಹ ಕಾರ್ಯದ ಹಿನ್ನೆಲೆಯನ್ನು ಅವಲೋಕಿಸಲಾಗಿದೆ. ಕರ್ನಲ್ ಮೆಕೆಂಝಿಯವರ ಸಂಗ್ರಹ ಕಾರ್ಯದ ಮುಖ್ಯ ಉದ್ದೇಶ ಅವರ ಕಾರ್ಯವೈಖರಿ ಮತ್ತು ಅವರ ಜೀವನದ ಗುರಿ ಇವುಗಳನ್ನು ಇಲ್ಲಿ ಗಮನಕ್ಕೆ ತೆಗೆದುಕೊಳ್ಳಬೇಕಾಗಿದೆ. ಇವುಗಳನ್ನೆಲ್ಲಾ ನಿರ್ದಿಷ್ಟ ಉದ್ದೇಶಕ್ಕಾಗಿ ಮತ್ತು ಸಂಶೋಧನೆ ಹಾಗೂ ಅಧ್ಯಯನದ ಉದ್ದೇಶಕ್ಕಾಗಿ ಸಂಗ್ರಹಿಸಿದ್ದಲ್ಲ. ಕರ್ನಲ್ ಮೆಕೆಂಝಿ ಈ ರೀತಿಯ ವಸ್ತುಗಳನ್ನು ಸಂಗ್ರಹಿಸುವ ವೇಳೆಗಾಗಲೇ ವಿದೇಶಿ ಸಂಗ್ರಹಕಾರರು, ವರ್ತಕರು, ಇತಿಹಾಸ ಆಸಕ್ತರು, ಅನೇಕ ವಸ್ತುಗಳನ್ನು ಸಂಗ್ರಹಿಸಿದ್ದರು. ಆದರೆ ಅವರು ಕರ್ನಲ್ ಮೆಕೆಂಝಿ ಕೈಗೊಂಡಷ್ಟು ವ್ಯಾಪಕವಾದ ಫಲಪ್ರದವಾದ ಸಂಗ್ರಹ ಕಾರ್ಯವನ್ನು ಮಾಡಿರಲಿಲ್ಲ.[೨] ೧೬ನೇ ಶತಮಾನದಲ್ಲಿ ಭಾರತಕ್ಕೆ ಬಂದ ಯೂರೋಪಿಯನ್ ವಸಾಹತು ನಿರ್ಮಾಪಕರಿಗೆ ವ್ಯಾಪಾರಿ ದೃಷ್ಟಿ ಮಾತ್ರ ಇದ್ದುದು ಸ್ಪಷ್ಟವಾದ ವಿಷಯ.[೩] ಆ ಅವಧಿಯಲ್ಲಿ ಭಾರತಕ್ಕೆ ಬಂದ ಬ್ರಿಟೀಷರು ಭಾರತದಲ್ಲಿ ಸಿಗುತ್ತಿದ್ದ ಅಮೂಲ್ಯ ವಸ್ತುಗಳನ್ನು ತಮ್ಮ ದೇಶಕ್ಕೆ ಕೊಂಡೊಯ್ದು ಅಧಿಕ ಲಾಭವನ್ನು ಗಳಿಸುವ ಗುರಿಯನ್ನು ಹೊಂದಿದ್ದರು. ಮರ್ಕಂಟೈಲ್ ನೀತಿ ಅಂದಿನ ಯೂರೋಪಿಯನ್ನರ ವಿದೇಶಿ ನೀತಿಗೆ ಹಾಗೂ ವ್ಯಾಪಾರ ನೀತಿಗೆ ಮುಖ್ಯ ಆಧಾರವಾಗಿದ್ದಿತು. ಕಾಲಕ್ರಮೇಣ ವ್ಯಾಪಾರದಿಂದ ರಾಜಕೀಯ ಕ್ಷೇತ್ರಕ್ಕೆ ತಮ್ಮ ಕಾರ್ಯಕ್ಷೇತ್ರವನ್ನು ಬದಲಾಯಿಸಿಕೊಂಡ ಯೂರೋಪಿಯನ್ ವಸಾಹತುಗಾರರು ರಾಜ್ಯ ನಿರ್ಮಾಣದ ಕಡೆ ಗಮನವನ್ನು ನೀಡಿದರು.[೪] ಭಾರತ ದೇಶದ ವಿವಿಧ ಭಾಗಗಳಲ್ಲಿ ಬ್ರಿಟೀಷ್, ಫ್ರೆಂಚ್, ಪೋರ್ಚುಗೀಸ್ ಮತ್ತು ಡಚ್ ಮೊದಲಾದ ವಿದೇಶಿಯರು ದೇಶೀಯ ಸಂಸ್ಥಾನಗಳನ್ನು ಗೆದ್ದುಕೊಂಡು ಸಾಮ್ರಾಜ್ಯ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡರು.[೫] ಭಾರತದ ವಿವಿಧ ಭಾಗಗಳಲ್ಲಿ ಸೈನ್ಯ ಕಾರ್ಯಾಚರಣೆ ನಡೆಸಿ ದೇಶೀಯ ರಾಜರುಗಳನ್ನು ಸೋಲಿಸಿ ವಸಾಹತುಗಳನ್ನು ಸ್ಥಾಪಿಸುವ

ಕಾರ್ಯದಲ್ಲಿ ತೊಡಗಿದ್ದ ವಿದೇಶಿಯರಿಗೆ ಈ ದೇಶದ ಇತಿಹಾಸ ಭೂಗೋಳ ಸಂಸ್ಕೃತಿ ಇವುಗಳ ಪರಿಚಯ ಅತ್ಯಗತ್ಯವಾಗಿ ಬೇಕಾಗಿದ್ದಿತು. ಆದುದರಿಂದ ಭಾರತದ ಬಗ್ಗೆ, ಅದರ ಭಾಷೆ ಇತಿಹಾಸ ಸಂಸ್ಕೃತಿ ಮತ್ತು ಭೂಗೋಳವನ್ನು ಅರ್ಥಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ಈ ಕಾರಣದಿಂದ ಬ್ರಿಟೀಷರು ಭಾರತೀಯ ಇತಿಹಾಸ, ಧರ್ಮ, ಸಂಸ್ಕೃತಿಗಳನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಕೈಗೊಂಡರು.[೬]

ಈ ಪ್ರಯತ್ನದಲ್ಲಿ ಕರ್ನಲ್ ಮೆಕೆಂಝಿ ಅನೇಕ ಸಮಸ್ಯೆಗಳನ್ನು ಎದುರಿಸಿದನು. ತದನಂತರ ಸ್ಥಳೀಯ ಭಾಷೆಯನ್ನು ಸ್ಥಳೀಯರಿಂದಲೇ ಅರ್ಥೈಸಿಕೊಂಡು ತನ್ನ ಭೂ ಸಮೀಕ್ಷೆ ಕಾರ್ಯದೊಂದಿಗೆ ಅನೇಕ ಇತಿಹಾಸದ ಆಕರಗಳನ್ನು ಸಂಗ್ರಹಿಸಿದನು. ಅವುಗಳನ್ನು ಈ ಮುಂದಿನಂತೆ ವಿಶ್ಲೇಷಿಸಬಹುದು..

## ೪.೧ ಹಸ್ತಪ್ರತಿಗಳು ಮತ್ತು ಶಾಸನಗಳು

ಹಸ್ತಪ್ರತಿಗಳು ಇತಿಹಾಸದ ಅಧ್ಯಯನಕ್ಕೆ ಉಪಯುಕ್ತ ಆಕರಗಳಾಗಿದ್ದವು. ಅವುಗಳನ್ನು ಸಂರಕ್ಷಿಸಿಸಿ ದೀರ್ಘಕಾಲ ಇರುವಂತೆ ನೋಡಿಕೊಳ್ಳುವುದು ಕಷ್ಟಕರವಾದುದು. ಹಸ್ತಪ್ರತಿಗಳಲ್ಲಿನ ಬರವಣಿಗೆ ಕೂಡ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿರುತ್ತದೆ. ಲಿಪಿಯ ಬೆಳವಣಿಗೆಯ ಪರಿಣಾಮವಾಗಿ ಕಾಲದಿಂದ ಕಾಲಕ್ಕೆ ಬರವಣಿಗೆಯು ಬದಲಾಗುತ್ತಾ ಬಂದಿರುವುದನ್ನು ಕಾಣಬಹುದು. ಇದಲ್ಲದೆ ಲಿಪಿಕಾರನ ವೈಯಕ್ತಿಕ ಶೈಲಿ, ಬರವಣಿಗೆಯ ರೀತಿ ಮತ್ತು ಬರವಣಿಗೆಯ ವಸ್ತುಗಳನ್ನು ಆಧರಿಸಿ ಅವುಗಳ ಬಾಳಿಕೆಯನ್ನು ಉಪಯುಕ್ತತೆಯನ್ನು ನಿರ್ಧರಿಸಲಾಗುತ್ತದೆ.[೭]

ಕರ್ನಲ್ ಮೆಕೆಂಝಿಯ ಸಂಗ್ರಹದಲ್ಲಿ ಅತ್ಯಂತ ಅಮೂಲ್ಯ ಹಸ್ತಪ್ರತಿಗಳು ಹಾಗೂ ಇನ್ನಿತರ ಪ್ರಾಚ್ಯವಸ್ತುಗಳನ್ನು, ಆಕರಗಳನ್ನು ಒಳಗೊಂಡಿವೆ. ಕರ್ನಲ್ ಮೆಕೆಂಝಿ ಶಾಸನಗಳು ಹಾಗೂ ಇತರ ಆಕರಗಳ ಸಂಗ್ರಹದ ಪಟ್ಟಿ ಈ ರೀತಿಯಾಗಿ ಉಲ್ಲೇಖಿಸಬಹುದು. ೨೫ ಮೂರು ಸಾವಿರ ಶಾಸನಗಳು, ಬರ್ಮೀ ಹಾಗೂಜಾಪಾನೀ ಸೇರಿ ಹದಿಮೂರು ಭಾಷೆಯಲ್ಲಿರುವ ಒಂದು ಸಾವಿರದ ಐದುನೂರ ಅರವತ್ತೈದು ಹಸ್ತಪ್ರತಿಗಳು, ಎಂಟು ಸಾವಿರದ ಎಪ್ಪತ್ತಾರು ದಕ್ಷಿಣ ಭಾರತದ ಶಾಸನಗಳ ನಕಲುಗಳು, ಎರಡು ಸಾವಿರದ ಆರುನೂರ ಮೂವತ್ತು ಚಿತ್ರಗಳು, ಎಪ್ಪತ್ತೆಂಟು ಭೂಪಟಗಳು, ಆರು ಸಾವಿರದ ಎರಡುನೂರ ಹದಿನೆಂಟು ವಿವಿಧ ಕಾಲಕ್ಕೆ ಸೇರಿದ ದೇಶೀಯ, ವಿದೇಶೀಯ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳು, ಒಂದು ನೂರ ಅರವತ್ತು ಬೆಳ್ಳಿ, ಕಂಚು, ಹಿತ್ತಾಳೆ ಹಾಗೂ ತಾಮ್ರದ ಲೋಹಮೂರ್ತಿಗಳು, ಕೈಫಿಯತ್ತು, ಬಖೈರು, ರಾಜರ ವಂಶಾವಳಿ

ಮುಂತಾದವುಗಳನ್ನೊಳಗೊಂಡ ಶಿಲಾಮೂರ್ತಿಗಳು, ಅಮರಾವತಿಯಲ್ಲಿನ ಹಳಗನ್ನಡ ಶಿಲಾಶಾಸನ, ತಾಮ್ರಶಾಸನಗಳು, ಹಳೇ ಕಾಲದ ತೂಕದ ಬಟ್ಟುಗಳು, ಮಣಿ, ಉಂಗುರ, ಉಂಡಿಗೆ, ಡಾಬು ಮೊದಲಾದವುಗನ್ನು ಒಳಗೊಂಡಿದೆ. ಅಲ್ಲದೆ ೧೮೨೩ ಹಾಗೂ ೧೮೩೫ರಲ್ಲಿ ಇಂಗ್ಲೆಂಡಿಗೆ ಸಾಗಿಸಲಾದ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಕನ್ನಡ ಗ್ರಂಥಗಳು ಈ ಕೆಳಕಂಡಂತಿವೆ. ಪೌರಾಣಿಕ ಹಾಗು ಕವಿ ಕೃತಿಗಳು – ನಲವತ್ತೆಂಟು ಹಸ್ತಪ್ರತಿಗಳು, ಕಥೆ, ಕವನ ಮುಂತಾದವುಗಳನ್ನು ಒಳಗೊಂಡ ಹದಿನೆಂಟು ಹಸ್ತಪ್ರತಿಗಳು, ಆತ್ಮಚರಿತ್ರೆ ಹಾಗೂ ಕೈಫಿಯತ್ತುಗಳು  ಹದಿನೇಳು ಹಸ್ತಪ್ರತಿಗಳು, ತತ್ವಜ್ಞಾನ ಹಾಗೂ ಜ್ಯೋತಿಶ್ಯಾಸ್ತ್ರಗಳಿಗೆ ಸಂಬಂಧಿಸಿದ ಹದಿನಾರು ಹಸ್ತಪ್ರತಿಗಳು ಪ್ರಮುಖವಾದವು.

ಕರ್ನಲ್ ಮೆಕೆಂಝಿ ಸಂಗ್ರಹದಲ್ಲಿಯ ಹಸ್ತಪ್ರತಿಗಳ ವಿವರಗಳೆಂದರೆ[೮] ಹಳಗನ್ನಡ ಸಂಬಂಧಿಸಿದ ನಲವತ್ತೆಂಟು ಗ್ರಂಥಗಳು, ಜೈನಶಾಸ್ತ್ರ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಇಪ್ಪತ್ತೊಂದು ಹಸ್ತಪ್ರತಿಗಳು, ಕಥೆ, ಕವನ, ನೀತಿ, ಧರ್ಮಕ್ಕೆ ಸಂಬಂಧಿಸಿದ ಹದಿನೆಂಟು ಹಸ್ತಪ್ರತಿಗಳು, ಸ್ಥಳ, ಪುರಾಣ, ಜೀವನ ಚರಿತ್ರೆಗಳಿಗೆ ಸಂಬಂಧಿಸಿದಂತೆ ಹದಿನೇಳು ಹಸ್ತಪ್ರತಿಗಳು, ವ್ಯಾಕರಣ, ಜ್ಯೋತಿಷ್ಯ, ವೈದ್ಯಕ್ಕೆ ಸಂಬಂಧಿಸಿದ ಹದಿನಾರು ಹಸ್ತಪ್ರತಿಗಳೂ, ಕಡತಗಳಲ್ಲಿ ಚರಿತ್ರೆ, ಕೈಗಾರಿಕೆ, ವಂಶಾವಳಿಗೆ ಸಂಬಂಧಿಸಿದ ಮೂವತ್ತೇರಡು ಹಸ್ತಪ್ರತಿಗಳನ್ನು ಒಳಗೊಂಡಿವೆ. ಇವುಗಳಲ್ಲದೆ ಇನ್ನೂ ಕೆಲವು ಇತಿಹಾಸ, ಸಂಸ್ಕೃತಿಗೆ ಸಂಬಂಧಪಟ್ಟ ವಿಷಯಗಳು ಈ ರೀತಿ ಇವೆ. ಹಳೇ ಮೈಸೂರಿನ ಸ್ಥಳ ಪುರಾಣ, ಚರಿತ್ರೆ ಮುಂತಾದವು ಇಪ್ಪತ್ತು ಸಂಪುಟಗಳಲ್ಲಿ, ಪಶ್ಚಿಮ ತೀರಕ್ಕೆ ಸಂಪುಟಗಳಲ್ಲಿ ಸಂಬಂಧಪಟ್ಟ ವಿಷಯ, ಕನ್ನಡ ಶಾಸನಗಳ ನಕಲುಗಳು ಇಪ್ಪತ್ತೆಂಟು ಬೃಹತ್ ಸಂಪುಟಗಳಲ್ಲಿ, ಸ್ಥಳಪುರಾಣ, ಚರಿತ್ರೆ ಮುಂತಾದವುಗಳು ಇಂಗ್ಲೀಷ್ ಭಾಷೆಗೆ ತರ್ಜುಮೆಗೊಂಡವು ಹದಿನಾಲ್ಕು ಸಂಪುಟ. ಇವು ಸದ್ಯ ಲಂಡನ್ ಮ್ಯೂಸಿಯಂನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಲಭ್ಯವಿವೆ.[೯]

ಕರ್ನಲ್ ಮೆಕೆಂಝಿ ತನ್ನ ಸಂಗ್ರಹಕಾರ್ಯದೊಂದಿಗೆ ಅನೇಕ ಹಸ್ತಪ್ರತಿಗಳನ್ನು ಆಂಗ್ಲಭಾಷೆಗೆ ತರ್ಜುಮೆ ಮಾಡುವ ಕೆಲಸವನ್ನು ಮಾಡುತ್ತಿದ್ದ. ಕೆಲವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಿ ಬರೆದು ಪ್ರತಿ ಮಾಡಿಸಿದ. ಕೆಲವು ಹಸ್ತಪ್ರತಿಗಳ ಕೊನೆಯಲ್ಲಿ ಇಂಗ್ಲೀಷ್ ಭಾಷಾಂತರ ನೀಡಿ ಓದುಗರಿಗೆ ಅಧ್ಯಯನಕಾರರಿಗೆ ಅನುಕೂಲ ಮಾಡಿಕೊಟ್ಟಿದ್ದಾನೆ. ಈತನ ಸಂಗ್ರಹದ ಕೆಲಸ ಮುಖ್ಯವಾಗಿ ದಕ್ಷಿಣ ಭಾರತದಲ್ಲಿಯೇ ನಡೆದದ್ದರಿಂದ ಹೆಚ್ಚಿನ ಸಂಗ್ರಹಗಳು ಮದ್ರಾಸ್ ಪ್ರಾಂತ್ಯ ಆಂಧ್ರ, ಕೇರಳ ವಿಶೇಷವಾಗಿ ದಕ್ಷಿಣ ಕರ್ನಾಟಕದ

ಹಳೇ ಮೈಸೂರು ಅಥವಾ ಮೈಸೂರು ಸಂಸ್ಥಾನ ಮೊದಲಾದ ಪ್ರಾಂತ್ಯಗಳಿಗೆ ಸಂಬಂಧಪಟ್ಟಿವೆ.[೧೦]

ಕರ್ನಲ್ ಮೆಕೆಂಝಿಯ ಮರಣಾನಂತರ ಅವನ ಅಪೂರ್ವ ಸಂಗ್ರಹಗಳನ್ನು ಅವನ ಪತ್ನಿಯಿಂದ ಈಸ್ಟ್ ಇಂಡಿಯಾ ಕಂಪನಿಯವರು ಹತ್ತು ಸಾವಿರ ಪೌಂಡುಗಳಿಗೆ ಕೊಂಡುಕೊಂಡರು.[೧೧] ೧೮೨೩ ರಿಂದ ೧೮೨೫ ರವರೆಗಿನ ಮೂರು ವರ್ಷಗಳ ಅವಧಿಯಲ್ಲಿ ಮೂರು ಕಂತುಗಳಲ್ಲಿ ಸಂಸ್ಕೃತ, ಪರ್ಷಿಯನ್, ಅರೆಬಿಕ್, ಜಾಪನೀಸ್ ಹಾಗು ಬರ್ಮೀಯ ಹಸ್ತಪ್ರತಿಗಳನ್ನೂ ಇತರೆ ಬೆಲೆಬಾಳುವ ವಸ್ತುಗಳನ್ನು ಲಂಡನ್ನಿಗೆ ಸಾಗಿಸಿದರು.[೧೨]

ಕರ್ನಲ್ ಮೆಕೆಂಝಿ ಇತಿಹಾಸ ಸಮಾಜ ಜೀವನ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ದಾಖಲೆಗಳನ್ನು ಸಂಗ್ರಹಿಸುತ್ತಾ ಹೋದ ಅವನ ಸಂಗ್ರಹ ವಸ್ತುರೂಪ ಮತ್ತು ಲಿಖಿತರೂಪ ಸಂಗ್ರಹಗಳೆಂದು ವಿದ್ವಾಂಸರಾದ ಶ್ರೀನಿವಾಸ ಹಾವನೂರ ತಿಳಿಸುತ್ತಾರೆ.[೧೩] ಆತನ ಸಂಗ್ರಹದ ಮಹತ್ವದ ಸಾಮಾಗ್ರಿಗಳೆಂದರೆ ದಾಖಲೆಗಳು. ಅವುಗಳನ್ನು ಈ ರೀತಿಯಲ್ಲಿ ವಿಂಗಡಿಸಬಹುದು. ಹಳೆಯ ಕಾಗದ ಪತ್ರಗಳು : ಅವರಿವರ ಮನೆಯಲ್ಲಿ ದೊರೆತಿದ್ದಾಗಿದ್ದವು, ಅಲ್ಲದೆ ಜನಗಳು ಕನ್ನಡದಲ್ಲಿ ಹೇಳಿದ್ದರ ಇಂಗ್ಲೀಷ್ ಅನುವಾದಗಳು ಇಲ್ಲದೆ ಸಾರ ಸಂಗ್ರಹಗಳಾಗಿವೆ, ಕೈಫಿಯತ್ತುಗಳು ಕರ್ನಲ್ ಮೆಕೆಂಝಿಯ ಲಿಖಿತ ದಾಖಲೆಗಳಲ್ಲಿ ಸುಮಾರು ೨೦೦೦ದಷ್ಟು ಹಸ್ತಪ್ರತಿಗಳು ಸೇರಿವೆ. ಇವು ಕನ್ನಡ, ತೆಲುಗು, ತಮಿಲು ಭಾಷೆಗಳಲ್ಲದೆ ಜಾವಾನೀಸ್ ಭಾಷೆಯ ಹಸ್ತಪ್ರತಿಗಳು ಇವೆ. ಸುಮಾರು ಇನ್ನೂರು ಕನ್ನಡ ಕಾವ್ಯಗಳ ಹಸ್ತಪ್ರತಿಗಳನ್ನು ಇವರ ಸಂಗ್ರಹ ಒಳಗೊಂಡಿದೆ.[೧೪] ಸಾಹಿತ್ಯವಲ್ಲದೆ ಸೂಫಿಶಾಸ್ತ್ರ, ವೈದ್ಯಶಾಸ್ತ್ರ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಹಸ್ತಪ್ರತಿಗಳು ಸೇರಿವೆ. ಕರ್ನಲ್ ಮೆಕೆಂಝಿ ಒಂದು ಸಾವಿರಕ್ಕೂ ಅಧಿಕ ಸಂಖ್ಯೆಗಳ ದಕ್ಷಿಣ ಭಾರತದ ಶಿಲಾಶಾಸನಗಳನ್ನು ಕಲೆಹಾಕಿದ್ದಾನೆ. ಇಂತಹ ಶಾಸನಗಳಲ್ಲಿ ನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಮಾಹಿತಿಗಳಿರುವುದನ್ನು ಗುರುತಿಸಿ ಅವುಗಳನ್ನು ಜೋಪಾನವಾಗಿ ಸಂಗ್ರಹಿಸಿದ ಕೀರ್ತಿ ಕರ್ನಲ್ ಮೆಕೆಂಝಿಗೆ ಸಲ್ಲುತ್ತದೆ.

ಮೈಸೂರಿನಲ್ಲಿ ಶಾಸನಗಳನ್ನು ಸಂಗ್ರಹಿಸುವುದಕ್ಕೆ ಎಂಬತ್ತು ವರ್ಷಗಳ ಮುನ್ನವೇ ಯಾವುದೇ ಸೌಲಭ್ಯಗಳಿಲ್ಲದೆ ಸಂಗ್ರಹಿಸಿರುವುದು ಗಮನಾರ್ಹವಾದ ಸಂಗತಿ. ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಮತ್ತು ಬರೆಯಿಸಿದ ನಕ್ಷೆಗಳು ಚಿತ್ರಗಳೂ ಕೂಡ ನಮ್ಮ ನಾಡಿನ ಸಂಸ್ಕೃತಿಯನ್ನು ಅರಿತುಕೊಳ್ಳಲು ಸಹಾಯಕವಾಗಿವೆ. ದಕ್ಷಿಣ ಭಾರತದ ಭಾಷೆಗಳಲ್ಲಿದ್ದ

ಹಸ್ತಪ್ರತಿಗಳು, ಶಾಸನಗಳ ನಕಲುಗಳು, ಕೈಫಿಯತ್ತು, ಬಖೈರುಗಳು ವಂಶಾವಳಿ ವೃತ್ತಾಂತಗಳು ಮುಂತಾದವುಗಳನ್ನು ಮದ್ರಾಸ್‌ನಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಸಂಗ್ರಹಿಸಿ ಇಡಲಾಗಿತ್ತು. ಎಷ್ಟೋ ಕಾಲದವರೆಗೆ ಅವುಗಳು ಯಾರ ಗಮನಕ್ಕೂ ಬಾರದೆ, ಅಧ್ಯಯನಕ್ಕೆ ಒಳಗಾಗದೆ ಮೂಲೆ ಗುಂಪಾಗಿದ್ದವು. ಅವುಗಳ ಬಗೆಗೆ ಅನಾದರದಿಂದ ಹಾಗೆಯೇ ಇಟ್ಟಿದ್ದರೆ, ಬಹುಶಃ ಕರ್ನಲ್ ಮೆಕೆಂಝಿಯ ಅಮೂಲ್ಯ ಸಂಗ್ರಹಗಳು ನಮ್ಮ ಪಾಲಿಗೆ ಇಲ್ಲದೇ ಕೌತುಕಮಯವಾದ ಭಾರತೀಯ ಇತಿಹಾಸದ ಅದೆಷ್ಟೊ ವಿಷಯಗಳು ನಷ್ಟವಾಗಿ ಹೋಗುತ್ತಿದ್ದವೊ ಹೇಳಲಾಗದು.[೧೫] ೧೮೫೮ರಲ್ಲಿ ಪ್ರಾಚೀನ ಹಸ್ತಪ್ರತಿ ಭಂಡಾರ ಮದ್ರಾಸ್‌ನಲ್ಲಿ ಸ್ಥಾಪನೆಯಾದುದು ಸುದೈವ. ಅಸ್ತವ್ಯಸ್ತವಾಗಿ ಬಿದ್ದು, ಚೆಲ್ಲಾಡಿದ್ದ ಹಸ್ತಪ್ರತಿಗಳು ಭಂಡಾರದಲ್ಲಿ ವ್ಯವಸ್ಥಿತವಾಗಿ ಸಂರಕ್ಷಿಸಲ್ಪಟ್ಟವು. ಅದರ ಪರಿಣಾಮವಾಗಿ ಇಂದು ಸಂಶೋಧನೆಗೆ ಅನೇಕ ವಿಷಯಗಳು ತೆರೆದುಕೊಂಡಿವೆ. ಅಲ್ಲಿಯ ಸಂಗ್ರಹಗಳನ್ನು ಅಧ್ಯಯನ ಮಾಡಿದರೆ ನಮ್ಮ ಇತಿಹಾಸ ಸಂಶೋಧನಾ ಮಾರ್ಗಕ್ಕೊಂದು ಹೊಸ ರೂಪ ಬರುವುದರಲ್ಲಿ ಯಾವುದೇ ಸಂದೇಹವಿಲ್ಲ.[೧೬]

**ಶಾಸನಗಳು**

ಶಾಸನಗಳು ಇತಿಹಾಸದ ಅಧ್ಯಯನಕ್ಕೆ ಅತ್ಯಮೂಲ್ಯ ಆಧಾರಗಳಾಗಿರುವುದು ಸರ್ವವಿಧಿತ. ಒಂದು ದೇಶದ ಹಾಗೂ ಒಂದು ರಾಜ ವಂಶದ ಆಳ್ವಿಕೆಯನ್ನು ಅರಿಯಲು ಶಾಸನಗಳು ಅತ್ಯಗತ್ಯವಾಗಿವೆ. ಶಾಸನಗಳು ವರ್ತಮಾನ ಕಾಲದ ಘಟನೆಗಳನ್ನು ಪ್ರಸಕ್ತ ವಿದ್ಯಾಮಾನಗಳನ್ನು ತಿಳಿಸುವುದಲ್ಲದೆ, ಆಗಿಹೋದ ವಿಷಯಗಳನ್ನು ಕುರಿತ ಮಾಹಿತಿಯನ್ನು ನೀಡುವ ಪ್ರಮುಖ ಆಕರಗಳಾಗಿವೆ.[೧೭] ಶಾಸನಗಳು ಸಾಮಾನ್ಯವಾಗಿ ಒಂದು ನಾಡಿನ ಮತ್ತು ಜನಸಮುದಾಯದ ಇತಿಹಾಸವನ್ನು ಅರಿಯಲು ಇರುವ ಅತ್ಯಮೂಲ್ಯ ಆಧಾರಗಳೆಂಬುದರಲ್ಲಿ ಸಂಶಯವಿಲ್ಲ. ಒಂದು ಪ್ರದೇಶದಲ್ಲಿ ಆಳಿದ ರಾಜರ ಆಳ್ವಿಕೆ ಆಡಳಿತ ವೈಖರಿ, ಸಾಧನೆ, ಇತರ ರಾಜ್ಯಗಳೊಂದಿಗೆ ಸಂಬಂಧ, ಯುದ್ಧಗಳು ಒಪ್ಪಂದಗಳು ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿ ಸ್ಥಿತಿಗತಿಗಳು ಮುಂತಾದವುಗಳ ಬಗ್ಗೆ ಶಾಸನಗಳು ದಾಖಲೆ ನೀಡುತ್ತವೆ.[೧೮]

ರಾಜ್ಯಗಳ ಸ್ಥಾಪನೆ, ಬೆಳವಣಿಗೆ ವಿವಿಧ ರಾಜರ ರಾಜಕೀಯ ಸಾಧನಗಳು ಮುಂತಾದವುಗಳನ್ನು ಶಾಸನಗಳಲ್ಲಿ ದಾಖಲಿಸಲಾಗುತ್ತದೆ. ರಾಜಕೀಯ ವಿಷಯಗಳಲ್ಲದೆ ಸಾಮಾಜಿಕ ಧಾರ್ಮಿಕ, ಆರ್ಥಿಕ ವಿಷಯಗಳನ್ನೂ ಶಾಸನಗಳಲ್ಲಿ ದಾಖಲಿಸಲಾಗುತ್ತದೆ. ಶಾಸನಗಳು ಸಮಾಜದ ಕೆಲವು ಪ್ರಮುಖ ಚಟುವಟಿಕೆಗಳನ್ನು ತಿಳಿಸುವ

ಸಾಧನಗಳಾಗಿವೆ. ಕರ್ನಾಟಕದ ಶಾಸನಗಳಲ್ಲಿ ಅತಿ ಹೆಚ್ಚಿನವು ದಾನಶಾಸನಗಳಾಗಿವೆ. ರಾಜ, ಅಧಿಕಾರಿ, ರಾಣಿ ಮಂತ್ರಿ ಮುಂತಾದವರು ವಿವಿಧ ವ್ಯಕ್ತಿಗಳಿಗೆ, ಧಾರ್ಮಿಕ ಸಂಸ್ಥೆಗಳಿಗೆ ನೀಡಿದ ದಾನಗಳನ್ನು ಶಾಸನಗಳು ತಿಳಿಸುತ್ತವೆ.[೧೯] ಈ ಶಾಸನಗಳಲ್ಲಿ ರಾಜರ ವಂಶಾವಳಿಯನ್ನು ಆತನ ಮಹತ್ವದ ಸಾಧನೆಗಳನ್ನು ಅನೇಕ ವೇಳೆ ತಿಳಿಸಲಾಗಿರುತ್ತದೆ. ದೇವಾಲಯಗಳ ಸ್ಥಾಪನೆ ಅವುಗಳ ಉತ್ಸವ ಮುಂತಾದ ಚಟುವಟಿಕೆ, ದೇವಾಲಯಗಳ ನಿರ್ವಹಣೆಗೆ ಅನೇಕ ವ್ಯಕ್ತಿಗಳು ನೀಡುವ ದಾನ ಧರ್ಮಗಳನ್ನೂ ಶಾಸನಗಳು ತಿಳಿಸುತ್ತವೆ. ಅದರ ಪರಿಣಾಮವಾಗಿ ಒಂದು ದೇಶದ ಇತಿಹಾಸವನ್ನು ಅಧ್ಯಯನ ಮಾಡಲು ಶಾಸನಗಳು ಅತ್ಯಂತ ಪ್ರಮುಖವಾದ ಆಧಾರಗಳಾಗಿದೆ.[೨೦] ಇಂತಹ ಕಾರ್ಯದಲ್ಲಿ ಕರ್ನಲ್ ಮೆಕೆಂಝಿಯ ಸಂಗ್ರಹದಲ್ಲಿ ಸುಮಾರು ಮೂರು ಸಾವಿರಕ್ಕೂ ಹೆಚ್ಚು ಶಾಸನಗಳು ಸೇರಿವೆ. ಇದಲ್ಲದೆ ಎಂಟು ಸಾವಿರದ ಎಪ್ಪತ್ತಾರು ದಕ್ಷಿಣ ಭಾರತದ ಶಾಸನಗಳ ನಕಲುಗಳು, ಮೆಕೆಂಝಿ ಸಂಗ್ರಹದಲ್ಲಿ ಸೇರಿವೆ. ಇಲ್ಲಿ ಅಮರಾವತಿಯಲ್ಲಿನ ಹಳಗನ್ನಡ ಶಿಲಾಶಾಸನ, ತಾಮ್ರಶಾನಗಳು ಮುಂತಾದವು ಪ್ರಮುಖವಾದವು. ಈ ಶಾಸನಗಳು ಪ್ರಮುಖವಾಗಿ ವಿಜಯನಗರ ಅರಸರು, ಕೆಳದಿ ಅರಸರು, ಮೈಸೂರು ಒಡೆಯರು, ಚಿತ್ರದುರ್ಗದ ಪಾಳೆಗಾರರು, ಅಮರ ನಾಯಕರುಗಳಿಗೆ ಸಂಬಂಧಿಸಿದ್ದಾಗಿದೆ.

### ೪.೨ ನಾಣ್ಯಗಳು, ವಿಗ್ರಹಗಳು ಮತ್ತು ನಕಾಶೆಗಳು

ನಾಣ್ಯಗಳು ಒಂದು ದೇಶದ ರಾಜವಂಶದ ಇತಿಹಾಸವನ್ನು ಅರಿಯಲು ಮುಖ್ಯ ಆಧಾರಗಳಾಗಿವೆ. ನಾಣ್ಯಗಳನ್ನು ಕುರಿತು ಅಧ್ಯಯನ ಮಾಡುವ ಶಾಸ್ತ್ರವನ್ನು ನಾಣ್ಯ ಶಾಸ್ತ್ರ ಎಂದು ಕರೆಯುವರು. ಈ ನಾಣ್ಯಗಳು ಒಂದು ರಾಜ್ಯದ ವಿಸ್ತಾರ ಸರಹದ್ದು, ರಾಜರ ಉತ್ತರಾಧಿಕಾರ, ವಿವಿಧ ರಾಜರ ಬಿರುದುಗಳು ನಾಣ್ಯಗಳಲ್ಲಿ ಅಚ್ಚಾಗಿರುತ್ತದೆ. ನಾಣ್ಯಗಳು ಧಾರ್ಮಿಕ ಜೀವನವನ್ನು ತಿಳಿಯಲು ಸಹಾಯಕವಾಗುತ್ತವೆ. ನಾಣ್ಯಗಳಲ್ಲಿ ಉಪಯೋಗಿಸಿರುವ ಲೋಹದ ವಿವರ ತೂಕ ಇವುಗಳಿಂದ ಒಂದು ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ. ಶಾಸನ ಬರವಣಿಗೆ ಮುಂತಾದ ಆಧಾರಗಳು ದೊರಕದೇ ಇರುವಾಗ ನಾಣ್ಯಗಳು ಇತಿಹಾಸ ರಚನೆಗೆ ಉಪಯುಕ್ತವಾದ ಆಕರಗಳಾಗಿರುತ್ತವೆ. ಇಂತಹ ಕಾರ್ಯದಲ್ಲಿ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಸುಮಾರು ಆರು ಸಾವಿರ ಎರಡು ನೂರ ಹದಿನೆಂಟು ವಿವಿಧ ಕಾಲಕ್ಕೆ ಸೇರಿದ ದೇಶಿಯ, ವಿದೇಶಿಯ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳನ್ನು ಒಳಗೊಂಡಿವೆ.[೨೧]

### ವಿಗ್ರಹಗಳು

ಭಾರತವು ಪ್ರಾಚೀನ ಕಾಲದಿಂದಲೂ ವಾಸ್ತುಶಿಲ್ಪ ಮತ್ತು ಮೂರ್ತಿ ಶಿಲ್ಪಗಳಲ್ಲಿ ಅತ್ಯುತ್ತಮ ಸಾಧನೆಯನ್ನು ಮಾಡಿದ ದೇಶವಾಗಿದೆ. ಇಲ್ಲಿನ ಲೋಹ, ಶಿಲಾ, ಮರ ಮತ್ತಿತರ ವಸ್ತುಗಳಿಂದ ಮಾಡಿದ ವಿಗ್ರಹಗಳು, ಶಿಲ್ಪಿಗಳು ಸುಂದರವಾದ ದೇವತಾ ಮೂರ್ತಿಗಳನ್ನು ನಿರ್ಮಿಸುವುದರಲ್ಲಿ ಪ್ರಖ್ಯಾತರಾಗಿದ್ದರು. ಭಾರತೀಯ ಮೂರ್ತಿಶಿಲ್ಪಗಳು ವಿಶ್ವದಾದ್ಯಂತ ಮನ್ನಣೆಯನ್ನು ಗಳಿಸಿ ಜಗತ್ತಿನ ಅನೇಕ ವಸ್ತು ಸಂಗ್ರಹಾಲಯಗಳಲ್ಲಿ ಭಾರತದ ಮೂರ್ತಿಶಿಲ್ಪಗಳನ್ನು ಸಂಗ್ರಹಿಸಿಟ್ಟಿರುವುದನ್ನು ಕಾಣಬಹುದಾಗಿದೆ.[೨೨] ಸಾಮಾನ್ಯವಾಗಿ ವಿಗ್ರಹಗಳು ಇತರ ಮೂರ್ತಿಗಳು ದೇವಾಲಯ-ದಲ್ಲಿಯೇ ಹೆಚ್ಚು ಸ್ಥಾಪನೆಯಾಗಿರುತ್ತಿದ್ದವು. ಕೆಲವೊಮ್ಮೆ ಅವು ಭಗ್ನಗೊಂಡು ಅವುಗಳನ್ನು ರಕ್ಷಿಸದೆ ಹೊರಗೆ ಎಸೆಯುತ್ತಿದ್ದುದರಿಂದ ಅವುಗಳು ವಿನಾಶಕ್ಕೆ ಗುರಿಯಾಗುತ್ತಿದ್ದವು. ಅಪಾರ ಸಂಖ್ಯೆಯ ವಿಗ್ರಹಗಳನ್ನು ಸಂಗ್ರಹಿಸಿ ಸಂರಕ್ಷಿಸಿದ ಖ್ಯಾತಿ ಕರ್ನಲ್ ಮೆಕೆಂಝಿಗೆ ಲಭಿಸುತ್ತದೆ. ಕರ್ನಲ್ ಮೆಕೆಂಝಿ ಇವುಗಳನ್ನು ಸಂಗ್ರಹಿಸದೇ ಹೋಗಿದ್ದರೆ ಅವು ಸಂಪೂರ್ಣ ನಾಶವಾಗಿ ಇತಿಹಾಸ ಲೋಕಕ್ಕೆ ಅಪಾರವಾದ ಹಾನಿಯು ಸಂಭವಿಸುತ್ತಿದ್ದಿತು.

ಮೆಕೆಂಝಿ ಸಂಗ್ರಹದಲ್ಲಿ ಒಂದು ನೂರ ಆರು ಬೆಳ್ಳಿ, ಕಂಚು, ಹಿತ್ತಾಳೆ ಹಾಗೂ ತಾಮ್ರದ ಲೋಹ ಮೂರ್ತಿಗಳು ಸೇರಿಕೊಂಡಿವೆ. ಕರ್ನಲ್ ಮೆಕೆಂಝಿ ಸಂಗ್ರಹದಲ್ಲಿ ಅತ್ಯುತ್ತಮವಾದ ದೇವತಾಮೂರ್ತಿಗಳನ್ನು ಸಂಗ್ರಹಿಸಲಾಗಿದೆ. ಅವುಗಳಲ್ಲಿ ವಿಷ್ಣುವಿನ ಅವತಾರಗಳಾದ ರಾಮ, ಕೃಷ್ಣ, ನರಸಿಂಹ, ಹಯಗ್ರೀವ ವಿಗ್ರಹಗಳು ಜೈನತೀರ್ಥಂಕರರ ಮೂರ್ತಿಗಳು ಸೇರಿವೆ. ಇವೆಲ್ಲವೂ ಪ್ರಾಚೀನ ಕಾಲದ ಕಲಾಕೃತಿಗಳಾಗಿದ್ದು ಬಹು ಸುಂದರವಾದ ಮೂರ್ತಿಶಿಲ್ಪಗಳಾಗಿವೆ.

### ನಕಾಶೆಗಳು

ಕರ್ನಲ್ ಮೆಕೆಂಝಿ ಸಂಗ್ರಹದಲ್ಲಿನ ಬಹು ಅಮೂಲ್ಯ ವಸ್ತುಗಳೆಂದರೆ ನಕಾಶೆಗಳು, ನಕ್ಷೆಗಳು ಮತ್ತು ಭೂಪಟಗಳು, ಬ್ರಿಟೀಷರು ಭಾರತದ ಕೆಲವು ಪ್ರದೇಶಗಳಲ್ಲಿ ಸರ್ವೇಕ್ಷಣೆಯನ್ನು ಕೈಗೊಂಡು ಅಲ್ಲಿನ ಪ್ರದೇಶದ ನಕ್ಷೆಗಳನ್ನು ತಯಾರಿಸಲು ಕರ್ನಲ್ ಮೆಕೆಂಝಿಯನ್ನು ನೇಮಿಸಿದ್ದರು. ಕರ್ನಲ್ ಮೆಕೆಂಝಿ ಅಧಿಕ ಸಂಖ್ಯೆಯ ನಕಾಶೆಗಳನ್ನು ಪ್ರಾದೇಶಿಕ ಭೂಪಟ, ನಕ್ಷೆಗಳನ್ನು ತಯಾರಿಸಿ ಕಂಪನಿ ಸರ್ಕಾರಕ್ಕೆ ನೀಡಿದ್ದನು.[೨೩] ಈ ಕಾರ್ಯವನ್ನು ತನ್ನ ಭೂಸಮೀಕ್ಷೆಯ ಮೂಲಕ ದಕ್ಷಿಣ ಭಾರತದಲ್ಲಿ ಸುಮಾರು

ನಲವತ್ತು ಸಾವಿರ ಮೈಲು ಪ್ರದೇಶವನ್ನು ಸುತ್ತಿ, ಭೌಗೋಳಿಕ ಸ್ಥಿತಿಗತಿಯ ಬಗ್ಗೆ ಕಂಪನಿಗೆ ಬಹಳಷ್ಟು ಮಾಹಿತಿ ಒದಗಿಸಿದ ಕರ್ನಲ್ ಮೆಕೆಂಝಿ. ಇಡೀ ಭಾರತೀಯ ಪ್ರಾಂತ್ಯಗಳ ನಕಾಶೆಗಳನ್ನೂ ಸಹ ಕಂಪನಿಗೆ ಸಿದ್ಧಗೊಳಿಸಿ ಕೊಟ್ಟವನೆ ಕರ್ನಲ್ ಮೆಕೆಂಝಿ[೨೪] ಈತನೇ ವಸಾಹತುಶಾಹಿ ನೆಲೆಯಾದಡೆಯಲ್ಲೆಲ್ಲಾ ಸುತ್ತಾಡಿ ಕೇವಲ ಆ ಪ್ರದೇಶಗಳ ನಕಾಶೆಗಳನ್ನಷ್ಟೇ ತಯಾರಿಸದೆ, ಅಲ್ಲಿಯ ಸ್ಥಳನಾಮ, ಪುರಾಣ, ಚರಿತ್ರೆ, ಜನರ ಆಚಾರ, ನಂಬಿಕೆಗಳು, ಜಾತಿಪದ್ಧತಿಗಳ ಬಗ್ಗೆ ಚಾಚುತಪ್ಪದೆ ಮಾಹಿತಿಗಳನ್ನು ಸ್ಥಳೀಯರ ಮೂಲಕ ನೇರವಾಗಿ ಸಂಗ್ರಹಿಸಲಾರಂಭಿಸಿದನು.[೨೫] ಹೀಗೆ ಹೇಳುವಾಗ ಕರ್ನಲ್ ಮೆಕೆಂಝಿಯ ಸಂಗ್ರಹವೂ ಮಹತ್ವವಾದ ಐತಿಹಾಸಿಕ ದಾಖಲೆಯಾಗಿದೆ ಎಂದು ಅರ್ಥೈಸಬಹುದು. ಆತ ಜನರನ್ನು ಬಳಸಿಕೊಳ್ಳುವುದರಲ್ಲಿ ಪಳಗಿದವನು. ಆತನ ಸಂಗ್ರಹಕಾರ್ಯದಲ್ಲಿ ನೆರವಾದವರು ಸ್ಥಳೀಯರು. ಕನ್ನಡವನ್ನು ಬಹಳ ತೀವ್ರವಾಗಿ ಪರಿಗಣಿಸಿ ಅದಕ್ಕೊಂದು ನಿರ್ದಿಷ್ಟ ದೇಶೀ ರೂಪವನ್ನು ಆತ ಕಟ್ಟುತ್ತಾ ಸಾಗುತ್ತಾನೆ.

ಕರ್ನಲ್ ಮೆಕೆಂಝಿಯ ಸಂಗ್ರಹಿಸಿದ ಹಾಗೂ ತಯಾರಿಸಿದ ನಕ್ಷೆ ಮತ್ತು ಭೂಪಟಗಳು ಮಿಲಿಟರಿ ಕಾರ್ಯಾಚರಣೆಯ ದೃಷ್ಟಿಯಿಂದ ಮಾತ್ರವಲ್ಲದೆ ಭೌಗೋಳಿಕ ಶಾಸ್ತ್ರದ ಅಮೂಲ್ಯ ಆಧಾರಗಳಾಗಿ ಮಹತ್ವವನ್ನು ಪಡೆದುಕೊಂಡಿವೆ. ಕರ್ನಲ್ ಮೆಕೆಂಝಿ ತಯಾರಿಸಿದ ನಕ್ಷೆಗಳು ಭಾರತದಲ್ಲಿಯೇ ಪ್ರಥಮ ಕೃತಿಗಳಾಗಿದ್ದು ಮುಂದೆ ಬಂದ ಅಧಿಕಾರಿಗಳಿಗೆ ಮತ್ತು ಸಂಶೋಧಕರಿಗೆ ಉತ್ತಮವಾದ ಮಾದರಿಗಳಾಗಿದ್ದವು.[೨೬]

**ವಸ್ತುರೂಪ ಮತ್ತು ಲಿಖಿತರೂಪ**

ಕರ್ನಲ್ ಮೆಕೆಂಝಿಯ ಸಂಗ್ರಹವನ್ನು ಒಂದು ವಿಸ್ತಾರವಾದ ಸಂಶೋಧನೆ ಅಧ್ಯಯನಕ್ಕೆ ಒಳಪಡಿಸುವಷ್ಟು ಮಹತ್ವದ್ದಾಗಿದೆ. ಮೇಲ್ನೋಟಕ್ಕೆ ಆಕರಗಳ ಸಂಗ್ರಹ ಕಂಡರೂ ಅವುಗಳ ಮಹತ್ವ ವಿವಿದ ಪ್ರಾದೇಶಿಕ ಪ್ರದೇಶಗಳಿಗೆ ಸಂಬಂಧಪಟ್ಟಿದ್ದಾಗಿದೆ. ದುರ್ದೈವಕ್ಕೆ ಆ ಸಂಗ್ರಹ ಚದುರಿ ಹೋಗಿದೆ. ದಕ್ಷಿಣ ಭಾರತದ ಭಾಷೆಗಳಲ್ಲದ್ದವುಗಳು ಮದ್ರಾಸ್ ಕಲ್ಕತ್ತ ಮುಂತಾದ ಊರುಗಳಲ್ಲಿ ಉಳಿದವು. ಕಲ್ಕತ್ತ ಹೈದ್ರಬಾದ್‌ಗಳಲ್ಲಿಯೂ ಒಂದಷ್ಟು ಉಳಿದುಕೊಂಡವು. ಇದು ಒಟ್ಟಿನ ಸ್ಥೂಲವಾದ ಪರಿಸ್ಥಿತಿ. ೧೮೨೮ರಲ್ಲಿ ಮದ್ರಾಸ್ ಹಾಗೂ ಲಂಡನ್‌ಗಳಲ್ಲಿ ಸಂಗ್ರಹಗಳ ಕ್ಯಾಟರಾಗ್ ತಯಾರಿಸುವ ಕೆಲಸ ಆರಂಭವಾಯಿತು. ಆ ಕೆಲಸವೂ ನಿರಂತರವಾಗಿ ಇದುವರೆವಿಗೂ ನಡೆದುಕೊಂಡು ಬಂದಿದೆ. ಕರ್ನಲ್ ಮೆಕೆಂಝಿ ಕೇವಲ ಹಸ್ತಪ್ರತಿಗಳನ್ನು ವಸ್ತುಗಳನ್ನು ಮಾತ್ರ ಸಂಗ್ರಹಿಸಲಿಲ್ಲ. ಆತ ಕೆಲವು ಅನುಭವಿ ಹಾಗೂ ಪ್ರಾಜ್ಞರಾದ ಸ್ಥಳೀಯ ವ್ಯಕ್ತಿಗಳಿಂದ

ಅನೇಕ ವಿಷಯಗಳನ್ನು ಸಂಗ್ರಹಿಸಿಕೊಂಡನು. ಹಾಗೆಯೇ ಸ್ಥಳೀಯರಿಂದ ಅವರ ಪ್ರದೇಶಕ್ಕೆ ಸಂಬಂಧ ಪಟ್ಟ ಮಾಹಿತಿ ನೀಡುವ ಕೈಫಿಯತ್ತುಗಳನ್ನು ಬರೆಸಿದನು. ಹೀಗೆ ಅಗಾಧ ಪ್ರಮಾಣದಲ್ಲಿ ಆತ ದಾಖಲೆಗಳನ್ನು ಸಂಗ್ರಹಿಸಿ ನಾಡಿನ ಇತಿಹಾಸದ ಬೆಳವಣಿಗೆಗೆ ಉಪಯುಕ್ತವಾದ ಕೊಡುಗೆಯನ್ನು ನೀಡಿದ್ದಾನೆ.

**ವಸಾಹತು ಶೈಲಿಯ ಇತಿಹಾಸ ಕ್ರೋಢೀಕರಣದಲ್ಲಿ ಕರ್ನಲ್ ಮೆಕೆಂಝಿ**

ಕ್ರಿ.ಶ. ೧೭೯೯ರಲ್ಲಿ ಮೈಸೂರಿನ ಅರಸ ಟಿಪ್ಪು ಸುಲ್ತಾನನ ಮರಣದ ನಂತರ ಮೈಸೂರು ಪ್ರಾಂತ್ಯಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿದ ಬ್ರಿಟಿಷ್ ವಸಾಹತುಶಾಹಿ ಆಡಳಿತಕ್ಕೆ ಮೈಸೂರು ಪ್ರಾಂತ್ಯದ ಎಲ್ಲಾ ಪ್ರದೇಶಗಳ ಚಾರಿತ್ರಿಕ ಹಿನ್ನೆಲೆ, ಹಿಂದಿನ ಆಡಳಿತ ಕುರಿತ ಸ್ಥಳೀಯರ ಅಭಿಪ್ರಾಯಗಳು, ಭೌಗೋಳಿಕ ಸ್ಥಿತಿಗತಿಗಳನ್ನು ಸಂಪೂರ್ಣವಾಗಿ ತಿಳಿಯಲು ಸ್ಥಳೀಯ ಹಾಗೂ ಪ್ರಾದೇಶಿಕ ಭೌಗೋಳಿಕ ಮಾಹಿತಿಯ ಅಗತ್ಯ ಇದ್ದಿತು. ಆ ಕೊರತೆಯನ್ನು ನಿವಾರಿಸಿದವರು ಕರ್ನಲ್ ಮೆಕೆಂಝಿ ಅವರು. ಈಸ್ಟ್ ಇಂಡಿಯಾ ಕಂಪನಿ ಆಡಳಿತದ ಕರ್ತವ್ಯ ನಿರ್ವಹಿಸುವುದರ ಜೊತೆಗೆ ಪುರಾತನ ವಸ್ತುಗಳ ಸಂಗ್ರಹ ಕಾರ್ಯವನ್ನು ತಮ್ಮ ಹವ್ಯಾಸವಾಗಿ ಕರ್ನಲ್ ಮೆಕೆಂಝಿ ಅವರು ರೂಪಿಸಿಕೊಂಡರು.

ಕರ್ನಲ್ ಮೆಕೆಂಝಿ ಅವರು ಅಪರೂಪದ ಮತ್ತು ಪುರಾತನ ವಸ್ತುಗಳ ಸಂಗ್ರಹದ ಜತೆಗೆ ಸ್ಥಳನಾಮಗಳ ಹಿನ್ನೆಲೆ, ಸ್ಥಳ ಪುರಾಣಗಳ ಸಂಗ್ರಹ, ಸ್ಥಳ ಮಹಿಮೆಗಳ ಕುರಿತು ಇರುವ ಬರಹಗಳು ಮೊದಲಾದವುಗಳನ್ನು ತಿಳಿದುಕೊಳ್ಳುತ್ತ ತಾವೂ ಸಂಪೂರ್ಣವಾಗಿ ಅದರಲ್ಲಿ ತೊಡಗಿಕೊಂಡರು. ಸ್ಥಳೀಯರ ಸಹಾಯ ಪಡೆದು ಕೆಲವು ಮಾಹಿತಿಗಳನ್ನು ಅವರಿಂದಲೇ ಕೇಳಿ ಬರೆಯಿಸಿ ಇಟ್ಟು ಕೊಂಡರು. ಹಸ್ತಪ್ರತಿಯ ಪ್ರತಿ ರೂಪದಂತಿರುವ ಕೈಫಿಯತ್ತುಗಳನ್ನು ಕೆಲವು ಸ್ಥಳೀಯ ಶಿಕ್ಷಿತ ಜನರಿಂದ ಬರೆಸಿ ಸಂಗ್ರಹಿಸಿ ಇಟ್ಟರು. ಕನ್ನಡ ನಾಡಿನ ಇತಿಹಾಸದ ಪುಟಗಳಲ್ಲಿ ಮಹತ್ವಪೂರ್ಣ ಕಾಲಘಟ್ಟಗಳ ಬಗ್ಗೆ ಚಾರಿತ್ರಿಕ ಘಟನೆಗಳ ಬಗ್ಗೆ ಬೆಳಕು ಚೆಲ್ಲುವಂತೆ ಕರ್ನಲ್ ಮೆಕೆಂಝಿಯ ಆಕರಗಳ ಸಂಗ್ರಹ ಕಾರ್ಯದ ಮೂಲಕ ಭಾರತದ ಸಂಶೋಧನೆಯ ಮಾರ್ಗವನ್ನು ಸರಾಗವಾಗಿಸಿದರು.

## ೪.೩ ಇತರೆ ಸಂಗ್ರಹಗಳ ಆಕರಗಳ ಮಹತ್ವ

ಕರ್ನಲ್ ಮೆಕೆಂಝಿ ತಮ್ಮ ಸರ್ಕಾರಿ ಸೇವೆಯಲ್ಲಿದ್ದಾಗಲೇ ದಕ್ಷಿಣ ಭಾರತದ ಶಾಸನ ಹಸ್ತಪ್ರತಿ ಹಾಗೂ ಪುರಾತನ ವಸ್ತುಗಳನ್ನು ಜತೆಗೆ ಐತಿಹ್ಯ, ಸ್ಥಳ ಪುರಾಣ ಮೊದಲಾದವುಗಳನ್ನು ಕಲೆ ಹಾಕಿದ್ದನು.[೨೭] ಅಲ್ಲದೆ ತಾನು ಕಂಡದ್ದನ್ನು ಜನರ ಬಾಯಿಂದ ಕೇಳಿದ್ದನ್ನು ದಿನಚರಿಯಲ್ಲಿ ವಿವರವಾಗಿ ಬರೆದಿಟ್ಟುಕೊಳ್ಳುತ್ತಿದ್ದನು. ಕರ್ನಲ್ ಮೆಕೆಂಝಿ ಹಳೆಯ ಕಾವ್ಯ ಶಾಸನಾಧಿಗಳನ್ನು ಓದಿ ಕಾಗದದ ಮೇಲೆ ಬರೆದು, ತೆಗೆಯಲು ಮತ್ತು ಅವುಗಳ ಅರ್ಥವನ್ನು ಮನವರಿಕೆ ಮಾಡಿಕೊಳ್ಳಲು ಹಲವಾರು ಸಹಾಯಕರನ್ನು ನೇಮಿಸಿಕೊಂಡಿದ್ದನು.[೨೮] ಕರ್ನಲ್ ಮೆಕೆಂಝಿ ಭಾರತದಲ್ಲಿನ ತನ್ನ ದೀರ್ಘಾವಧಿಯ ಜೀವಿತದಲ್ಲಿ ಈ ದೇಶದ ಕಾವ್ಯ ಕಾವ್ಯೇತಿಹಾಸಗಳನ್ನೆಲ್ಲಾ ಬೆಳಕಿಗೆ ತಂದನು. ನಮ್ಮ ಪ್ರಾಚೀನ ವೈಭವವನ್ನು ಲೋಕಕ್ಕೆ ಪರಿಚಯ ಮಾಡಿ. ಭಾರತದ ದೇಶದ ಭೌಗೋಳಿಕ ಪ್ರಮಾಣವನ್ನು ಅಳೆದನು. ಅಖಂಡ ಭಾರತದ ಇತಿಹಾಸ ಭೂಗೋಳ ಮುಂತಾದ ಗ್ರಂಥಗಳನ್ನು ಮೊದಲ ಬಾರಿಗೆ ಸಂಗ್ರಹಿಸಿದನು.[೨೯]

ಇತಿಹಾಸಕಾರ ಮುತ್ತಣ್ಣ ಹೇಳುವಂತೆ ಕರ್ನಲ್ ಮೆಕೆಂಝಿ ಕಳೆದ ಇನ್ನೂರು ವರ್ಷಗಳ ಕಾಲದಲ್ಲಿ ನಮ್ಮ ಆರ್ಷೇಯ ಸಾಹಿತ್ಯ ಸಂಸ್ಕೃತಿಗಳನ್ನೆಲ್ಲಾ ಕಾಲಗರ್ಭದಿಂದ ಅಗೆದು ಬಯಲಿಗೆ ತಂದನು.[೩೦] ಇವರು ವೇದೋಪನಿಷತ್ತು ಪುರಾಣಗಳು, ಶಾಸ್ತ್ರಾದಿಗ್ರಂಥಗಳು, ಪ್ರಾಚೀನ ಸಾಹಿತ್ಯ, ಸಂಸ್ಕೃತಿಗಳ ಅವಶೇಷಗಳು ಅಸಂಖ್ಯ ಶಿಲಾಶಾಸನಗಳನ್ನು ಭೂಗರ್ಭದಿಂದ ಅಗೆದು ಬೆಳಕಿಗೆ ತಂದ ಅನ್ವೇಷಿಸಿ ವ್ಯಾಖ್ಯಾನಿಸಿ ಅವುಗಳನ್ನು ಉಳಿಸಿ ಮಹಾದುಪಕಾರವನ್ನು ಮಾಡಿದ ಖ್ಯಾತೆ ಕರ್ನಲ್ ಮೆಕೆಂಝಿಗೆ ಸಲ್ಲುತ್ತದೆ.[೩೧]

ಭಾರತೀಯ ಇತಿಹಾಸವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ ಬ್ರಿಟೀಷರಿಗೆ ಅನೇಕ ತೊಡಕುಗಳು ಎದುರಾದವು. ಇದನ್ನು ಕರ್ನಲ್ ಮೆಕೆಂಝಿಯು ಸಹ ಎದುರಿಸಿದನು. ದೇಶೀಯರ ಐತಿಹಾಸಿಕ ರಚನೆ, ಇತಿಹಾಸದ ವ್ಯಾಖ್ಯೆ ಹಾಗೂ ಅದರ ವಿವರಣೆ ಯೂರೋಪಿಯನ್ನರಿಗೆ ಅಭ್ಯಾಸ ಮಾಡಲು ಕಷ್ಟಕರವಾಗಿದ್ದಿತು. ಯೂರೋಪಿನಲ್ಲಿದ್ದಂತೆ ಪ್ರತಿಯೊಂದು ರಾಜಕೀಯ ಕ್ಷೇತ್ರದ ಬೆಳವಣಿಗೆಗಳನ್ನು ವಿವರವಾಗಿ ದಾಖಲಿಸುವ ಪದ್ಧತಿಗೆ ಬದಲಾಗಿ ಭಾರತೀಯರು ತಮ್ಮದೇ ಆದ ರೀತಿಯಲ್ಲಿ ಚರಿತ್ರೆಯನ್ನು ವ್ಯಕ್ತಪಡಿಸುವ ಮಾರ್ಗವನ್ನು ಅನುಸರಿಸುತ್ತಿದ್ದರು. ಎಲ್ಲಕ್ಕೂ ಮಿಗಿಲಾಗಿ ಕಾಲಮಾನದ ಪದ್ಧತಿ ಯೂರೋಪಿಯನ್ನರಿಗೆ ಕಠಿಣವಾದ

ವಿಷಯವಾಗಿದ್ದಿತು. ಇದನ್ನು ಕರ್ನಲ್ ಮೆಕೆಂಝಿ ಸ್ಥಳೀಯ ವಿದ್ವಾಂಸರಿಂದ ಮಾಹಿತಿಯನ್ನು ಸಂಗ್ರಹಿಸಿ ದಾಖಲೆ ಮಾಡಿದನು. ಪಾಶ್ಚಿಮಾತ್ಯರಂತೆ ಭಾರತೀಯರು ಪ್ರತಿಯೊಂದು ಘಟನೆಯನ್ನು ನಿಖರವಾಗಿ ಕಾಲಮಾನ ದೃಷ್ಟಿಯಿಂದ ದಾಖಲಿಸುವ ಅಭ್ಯಾಸವನ್ನು ಅನುಸರಿಸದಿದ್ದುದರಿಂದ ವಿದೇಶಿಯರಿಗೆ ಭಾರತದ ಇತಿಹಾಸವನ್ನು ಸ್ಪಷ್ಟವಾಗಿ ಅರಿತುಕೊಳ್ಳುವುದು ಕಷ್ಟಕರವಾಗಿದ್ದಿತು. ಭಾರತೀಯ ಇತಿಹಾಸ ರಚನೆಗೆ ಅನಗತ್ಯವಾದ ಮೂಲ ಆಧಾರಗಳೂ ಕೂಡ ಭಿನ್ನವಾಗಿದ್ದವು. ಮೇಲಾಗಿ ವಿವಿಧ ಭಾಷೆ, ಧರ್ಮ, ಜಾತಿ, ಸಂಸ್ಕೃತಿಗಳನ್ನು ಅನುಸರಿಸುತ್ತಿದ್ದ ಭಾರತೀಯರು ತಮ್ಮದೇ ಆದ ದೃಷ್ಟಿಯಿಂದ ಇತಿಹಾಸವನ್ನು ದಾಖಲಿಸಿಕೊಳ್ಳುವ ಪದ್ಧತಿಯನ್ನು ಅನುಸರಿಸುತ್ತ ಬಂದಿದ್ದರು.[೩೨] ಈ ಕಾರ್ಯದಲ್ಲಿ ಕರ್ನಲ್ ಮೆಕೆಂಝಿ ಆಕರಗಳನ್ನು ಸಂಗ್ರಹಿಸಿ ಭಾರತದ ಇತಿಹಾಸ ರಚನೆಗೆ ಹೊಸರೂಪವನ್ನು ಕೊಟ್ಟನೆಂದು ಹೇಳಬಹುದು. ಭಾರತದ ಇತಿಹಾಸ ಸಂಸ್ಕೃತಿ, ಜೀವನ ಕ್ರಮವನ್ನು ಅರಿತುಕೊಳ್ಳುವುದು ಕಷ್ಟಕರವಾಗಿದ್ದರೂ ಅನೇಕ ವಿದೇಶೀಯ ವಿದ್ವಾಂಸರು ಅತ್ಯಂತ ತಾಳ್ಮೆಯಿಂದ ಹಾಗೂ ಪರಿಶ್ರಮದಿಂದ ಈ ದೇಶದ ಚರಿತ್ರೆಯನ್ನು ಧರ್ಮ ಸಂಸ್ಕೃತಿಗಳನ್ನು ಅಭ್ಯಾಸ ಮಾಡುತ್ತಾ ಬಂದರು. ಅವರ ಪ್ರಯತ್ನ, ಪರಿಶ್ರಮ ಎಷ್ಟು ಫಲಪ್ರದವಾಗಿದ್ದಿತೆಂದರೆ ಭಾರತೀಯ ಧರ್ಮ ಸಾಹಿತ್ಯ ಇವುಗಳನ್ನು ಅತ್ಯಂತ ಪರಿಪೂರ್ಣವಾಗಿ ವಿಶ್ಲೇಷಣೆ ಮಾಡಿ ಅವುಗಳಲ್ಲಿ ಅಡಗಿದ್ದ ಸತ್ವವನ್ನು ಹೊರತೆಗೆಯುವುದರಲ್ಲಿ ಕೆಲವು ವಿದ್ವಾಂಸರು ಯಶಸ್ವಿಯಾಗಿದ್ದರು. ಅಂತಹ ಯಶಸ್ವಿ ವಿದ್ವಾಂಸರಲ್ಲಿ ಕರ್ನಲ್ ಮೆಕೆಂಝಿ ಒಬ್ಬರು. ಭಾರತವನ್ನು ಅದರ ಧರ್ಮ ಜೀವನ ಕ್ರಮವನ್ನು ಅರ್ಥಮಾಡಿಕೊಂಡು ಜಗತ್ತಿಗೆ ಅದರ ಶೈಕ್ಷಣಿಕ ಸಾಧನೆಗಳನ್ನು ಮಹತ್ವವನ್ನು ಎತ್ತಿತೋರಿಸುವಲ್ಲಿ ಮೇಲ್ಕಂಡ ಪಾಶ್ಚಿಮಾತ್ಯ ವಿದ್ವಾಂಸರು ಭಾರತೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತಾ ಹೋದರು.[೩೩]

ಕರ್ನಲ್ ಮೆಕೆಂಝಿ ತನ್ನ ಸಂಗ್ರಹ ಕಾರ್ಯವನ್ನು ಆರಂಭಿಸಿದಾಗ ಅವನಿಗೆ ಇಂತಹ ಯಾವುದೇ ನಿರ್ಬಂಧಗಳಾಗಲಿ, ನಿರ್ದಿಷ್ಟ ಗುರಿಯಾಗಲಿ ಇರಲಿಲ್ಲ. ಸರ್ವೇ ಕಾರ್ಯಕ್ಕೆ ಅವನನ್ನು ನೇಮಿಸಲಾಗಿದ್ದರೂ ತಮ್ಮ ಎದುರಾಳಿಗಳ ರಾಜಕೀಯ ಆರ್ಥಿಕ, ಸಾಮಾಜಿಕ ಲಕ್ಷಣಗಳನ್ನು ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಯೂರೋಪಿಯನ್ ವಸಾಹತುಶಾಹಿಗಳಿಗೆ ಅಗತ್ಯವಾಗಿದ್ದಿತು. ಕರ್ನಲ್ ಮೆಕೆಂಝಿ ಈ ಕಾರ್ಯವನ್ನು ಬಹು ಸಮರ್ಥವಾಗಿ ನಡೆಸಿಕೊಂಡು ಹೋದ ಅಧಿಕಾರಿಯಾಗಿ ಬ್ರಿಟೀಷ್ ಮೇಲಾಧಿಕಾರಿಗಳಿಗೆ ಮಾತ್ರವಲ್ಲದೆ ಭಾರತೀಯರಿಗೂ ಕೂಡ ಉಪಯುಕ್ತವಾದ ಕಾರ್ಯವನ್ನು ನಡೆಸಿಕೊಂಡು ಹೋಗಿದ್ದನೆಂದು ಹೇಳಬಹುದು. ಕರ್ನಲ್ ಮೆಕೆಂಝಿ ತನ್ನ ಸಂಗ್ರಹ ಕಾರ್ಯವನ್ನು

ಆರಂಭಿಸಿದಾಗ ಅವನಿಗೆ ಇಂತಹುದೇ ವಸ್ತುಗಳನ್ನು ಪಡೆದುಕೊಳ್ಳಬೇಕೆಂಬ ಸ್ಪಷ್ಟವಾದ ಉದ್ದೇಶವಿರಲಿಲ್ಲ. ತನಗೆ ಮತ್ತು ಸರ್ಕಾರಕ್ಕೆ ಎಂತಹ ವಸ್ತುಗಳು ಬೇಕೆಂಬ ಬಗ್ಗೆಯಾಗಿ ಕೂಡ ಖಚಿತವಾದ ಮಾಹಿತಿ ಇರಲಿಲ್ಲವಾದದ್ದರಿಂದ ಕರ್ನಲ್ ಮೆಕೆಂಝಿ ವ್ಯಾಪಕವಾಗಿ ವಸ್ತು ಸಂಗ್ರಹಣಾ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡನು. ಕರ್ನಲ್ ಮೆಕೆಂಝಿ ಈ ರೀತಿಯ ಸಂಗ್ರಹ ಕಾರ್ಯವನ್ನು ಕೈಗೊಂಡಾಗ ಅವನು ಹೆಚ್ಚು ಕಷ್ಟಪಡಬೇಕಾಗಿರಲಿಲ್ಲ. ತಮ್ಮಲ್ಲಿದ್ದ ಐತಿಹಾಸಿಕ ದಾಖಲೆಗಳನ್ನು ಕರ್ನಲ್ ಮೆಕೆಂಝಿಗೆ ನೀಡಲು ಭಾರತೀಯರಿಗೆ ಯಾವ ರೀತಿಯ ಅಡ್ಡಿ ಆತಂತಗಳು ಇರಲಿಲ್ಲ. ತಮ್ಮಲ್ಲಿದ್ದ ಹಸ್ತಪ್ರತಿ, ಶಾಸನ, ದಾಖಲೆ, ವಿಗ್ರಹ ಮುಂತಾದ ಅಮೂಲ್ಯ ಐತಿಹಾಸಿಕ ಆಧಾರಗಳ ಮೌಲ್ಯವನ್ನು ಭಾರತೀಯರು ಅರಿತುಕೊಂಡಿರಲಿಲ್ಲ.[೩೪] ಆದುದರಿಂದ ಕರ್ನಲ್ ಮೆಕೆಂಝಿಯ ಕಾರ್ಯ ಬಹಳ ಸುಲಭವಾಯಿತು. ಅನೇಕ ದೇಶೀಯರಿಗೆ ಇಂತಹ ಅಮೂಲ್ಯ ವಸ್ತುಗಳನ್ನು ಸಂರಕ್ಷಿಸಿ ಸಂಗ್ರಹಿಸಿ ಇಟ್ಟುಕೊಳ್ಳುವುದು ಸ್ವಲ್ಪ ಸಮಸ್ಯೆಯಾಗಿ ಕಂಡಿರಬಹುದು. ಮೇಲಾಗಿ ನಾಣ್ಯ, ಆಭರಣ, ವಿಗ್ರಹ ಮುಂತಾದ ಅಮೂಲ್ಯ ವಸ್ತುಗಳನ್ನು ಕರ್ನಲ್ ಮೆಕೆಂಝಿ ಹಣಕೊಟ್ಟು ಕೊಂಡುಕೊಳ್ಳುತ್ತಿದ್ದನು.[೩೫] ಹೀಗಾಗಿ ಕರ್ನಲ್ ಮೆಕೆಂಝಿ ಸಂಗ್ರಹ ದಿನೇ ದಿನೇ ಬೆಳೆಯುತ್ತಾ ಹೋಯಿತು. ಸರ್ಕಾರಿ ಅಧಿಕಾರಿಯಾಗಿದ್ದ ಕರ್ನಲ್ ಮೆಕೆಂಝಿ ಹಲವಾರು ಸ್ಥಳೀಯ ಅಧಿಕಾರಿಗಳು, ಪಂಡಿತರು, ಶ್ಯಾನುಭೋಗರು ಮತ್ತು ಸಹಾಯಕರು ಈ ಸಂಗ್ರಹ ಕಾರ್ಯದಲ್ಲಿ ಕೈ ಜೋಡಿಸಿದ್ದರಿಂದ ಅವನ ಕಾರ್ಯವು ಸುಲಭವಾದ್ದಿತು.[೩೬] ಈ ರೀತಿ ಐತಿಹಾಸಿಕ ಆಕರಗಳನ್ನು, ಅಮೂಲ್ಯವಾದ ವಸ್ತುಗಳನ್ನು ಸಂಗ್ರಹಿಸುತ್ತಾ ಹೋದಾಗ ಕರ್ನಲ್ ಮೆಕೆಂಝಿಗೆ ಅವುಗಳ ಉಪಯುಕ್ತತೆ ಹಾಗೂ ಮೌಲ್ಯದ ಬಗ್ಗೆ ಸ್ವಲ್ಪಮಟ್ಟಿನ ಪರಿಚಯವೂ ಉಂಟಾಯಿತು. ಕರ್ನಲ್ ಮೆಕೆಂಝಿ ತನ್ನ ಸಂಗ್ರಹಕಾರ್ಯವನ್ನು ಮಾಡುತ್ತಾ ಹೋದಂತೆ ಸ್ಥಳೀಯ ಸಹಾಯಕರನ್ನು ದ್ವಿಭಾಷಿಗಳನ್ನು ನೇಮಿಸಿಕೊಂಡಿದ್ದನು.[೩೭] ಅವರ ನೆರವಿನಿಂದ ಅವನಿಗೆ ಬೇಕಾದ ವಸ್ತುಗಳನ್ನು ಗುರುತಿಸಿ ಅವುಗಳನ್ನು ಸಂಗ್ರಹಿಸುವ ಕಾರ್ಯವನ್ನು ಮಾಡುವುದು ಸುಲಭವಾಗಿದ್ದಿತು.

ಕರ್ನಲ್ ಮೆಕೆಂಝಿ ಸಂಗ್ರಹಿಸಿದ ವಸ್ತುಗಳಲ್ಲಿ ದೇಶೀಯ ಭಾಷೆಗಳಲ್ಲಿನ ಹಸ್ತಪ್ರತಿಗಳು, ಶಾಸನಗಳು, ಅತ್ಯಂತ ಹೆಚ್ಚು ಸಂಖ್ಯೆಯಲ್ಲಿದ್ದವು.[೩೮] ಸ್ಥಳೀಯ ಇತಿಹಾಸದ ಪರಿಚಯ ಪಡೆದುಕೊಳ್ಳುವುದು ಅಗತ್ಯವಾಗಿದುದರಿಂದ ಹಸ್ತಪ್ರತಿಗಳನ್ನು ಸಂಗ್ರಹಿಸುವುದು ಅನಿವಾರ್ಯವಾಗಿದ್ದಿತು. ಬರವಣಿಗೆಯು ಪ್ರಾರಂಭವಾದ ನಂತರ ಮಾನವನ ಇತಿಹಾಸದಲ್ಲಿ ಬಹು ದೊಡ್ಡ ಬದಲಾವಣೆ ಉಂಟಾಯಿತು. ತಾನು ಕಂಡು ಕೇಳಿದ

ವಿಷಯವನ್ನು ಪ್ರಸಕ್ತ ವಿದ್ಯಮಾನಗಳನ್ನು ದಾಖಲಿಸುವ ಕಾರ್ಯಕ್ಕೆ ಬರವಣಿಗೆ ಅತ್ಯಗತ್ಯವಾಗಿದ್ದಿತು. ಬರವಣಿಗೆಯ ಸಾಮಾಗ್ರಿಗಳು ಕಲ್ಲು, ಲೋಹ, ಮರ, ಚಕ್ಕೆ, ಕಾಗದ ತಾಳೆಗರಿ ಮುಂತಾದ ವಸ್ತುಗಳ ಮೇಲೆ ಪ್ರಾಚೀನ ಮಾನವ ಬರವಣಿಗೆಯನ್ನು ಆರಂಭಿಸಿದ.[೩೯] ಹೀಗಾಗಿ ಈ ಬರವಣಿಗೆಯ ಆಧಾರಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡವು. ಬರವಣಿಗೆಯ ವಿಚಾರಗಳು ವಿಷಯಗಳು ಹೆಚ್ಚುತ್ತಾ ಹೋದಂತೆಲ್ಲಾ ಬರೆಯುವ ಸಾಮಾಗ್ರಿಗಳಲ್ಲಿಯೂ ಸುಧಾರಣೆ ಉಂಟಾಗಿ ಲೇಖನ ಕಾರ್ಯ ಮನುಷ್ಯ ಜೀವನದ ಬಹುಮುಖ್ಯವಾದ ಭಾಗವಾಗಿ ಪ್ರಾಮುಖ್ಯತೆಯನ್ನು ಪಡೆಯಿತು. ಭಾರತದಲ್ಲಿ ಕಾಗದ ಉಪಯೋಗ ಕಂಡು ಬರುವ ಮೊದಲೇ ಚರ್ಮ, ಎಲೆ, ಲೋಹದ ಹಾಳೆ ಮುಂತಾದ ವಸ್ತುಗಳ ಮೇಲೆ ಬರವಣಿಗೆ ಮುಂದುವರೆದು ಮಾನವ ಸಂಸ್ಕೃತಿ ಅಧ್ಯಯನಕ್ಕೆ ಉಪಯುಕ್ತ ಆಧಾರಗಳಾದವು.[೪೦]

ಕರ್ನಲ್ ಮೆಕೆಂಝಿಯು ಜೀವಮಾನದ, ಬದುಕಿನುದ್ದಕ್ಕೂ ಉತ್ತಮ ಕೆಲಸ ಕಾರ್ಯಗಳಲ್ಲೆ ತೊಡಗಿ ಕಂಪನಿಯ ಕರ್ತವ್ಯದ ಜೊತೆಗೆ ತನ್ನ ಹವ್ಯಾಸವನ್ನೂ ಮುಂದುವರಿಸಿದನು. ಯಾವ ಫ್ರಾನ್ಸಿಸ್ ಎಂಬಾತ ಈತನನ್ನು ಗಣಿತಶಾಸ್ತ್ರ ಮಾಹಿತಿ ಸಂಗ್ರಹಕ್ಕೆ ಭಾರತಕ್ಕೆ ಕಳುಹಿಸಿದ್ದನೋ, ಆಕರಗಳ ಸಂಗ್ರಹದ ದಿಕ್ಕು ಬದಲಾಗಿ, ಪ್ರಪಂಚದಲ್ಲೇ ಅತ್ಯುತ್ತಮ ಸಂಗ್ರಹಕಾರನೆಂಬ ಹೆಗ್ಗಳಿಕೆಗೆ ಕರ್ನಲ್ ಮೆಕೆಂಝಿ ಪಾತ್ರನಾದ.[೪೧] ಭಾರತದಲ್ಲಿ ೩೮ ವರ್ಷಗಳ ಸೈನಿಕ ಸೇವೆ ಸಲ್ಲಿಸಿದ ಕರ್ನಲ್ ಮೆಕೆಂಝಿ ಕಂಪನಿಯ ಕೆಲಸದ ಜೊತೆಗೆ ಇತಿಹಾಸ ಕ್ಷೇತ್ರಕಾರ್ಯವನ್ನೂ ಕೈಗೊಂಡು, ಸಾಹಿತ್ಯ ಸಂಬಂಧವಾದ ಒಂದು ಸಾವಿರದ ಐದುನೂರ ಅರವತ್ತೆಂಟು ಹಸ್ತಪ್ರತಿಗಳು, ಎರಡು ಸಾವಿರದ ಎಪ್ಪತ್ತು ಸ್ಥಳೀಯ ಪತ್ರಾವಳಿಗಳು (ಕೈಫಿಯತ್ತುಗಳು ಸೇರಿ), ಶಿಲಾಶಾಸನದ ಎಂಟು ಸಾವಿರದ ಎಪ್ಪತ್ತಾರು ಪ್ರತಿಗಳು, ಎರಡು ಸಾವಿರದ ಒಂದುನೂರ ಐವತ್ತು ಭಾಷಾಂತರಗಳು, ಎರಡು ಸಾವಿರದ ಏಳುನೂರು ನಕ್ಷೆಗಳು, ರೇಖಾಚಿತ್ರಗಳು, ಆರುಸಾವಿರದ ಒಂದು ನೂರ ಇಪ್ಪತ್ತೆಂಟು ನಾಣ್ಯಗಳು, ಒಂದುನೂರ ನಲವತ್ತಾರು ಪ್ರಾಚೀನ ವಿಗ್ರಹಗಳನ್ನು ಸಂಗ್ರಹಿಸಿದ್ದಾನೆ. ಇವೆಲ್ಲಾ ಸಂಗ್ರಹಕ್ಕಾಗಿ ತನ್ನ ಸಹಾಯಕರಿಗೆ ಸ್ವಂತ ಹಣವನ್ನೇ ಅಂದರೆ ಸುಮಾರು ಹದಿನೈದು ಸಾವಿರ ಪೌಂಡ್ ಖರ್ಚು ಮಾಡಿರುವುದು ಮತ್ತೊಂದು ವಿಶೇಷ.[೪೨] ಇಂತಹ ಸಂಗ್ರಹ ಕಾರ್ಯದಲ್ಲಿ ಶ್ರದ್ಧೆಯಿಂದ ನೆರವಾದ ಪ್ರಮುಖರೆಂದರೆ ಕಾವಲಿ ವೆಂಕಟ ಬೋರಯ್ಯ, ಈತನ ಸಹೋದರ ಲಕ್ಷ್ಮಯ್ಯ ಮತ್ತು ಪುಲಿಗಡ್ಡ ಮಲ್ಲಯ್ಯ ಎಂಬ ತೆಲುಗು ವಿದ್ವಾಂಸರು. ಈ ಎಲ್ಲ ಪ್ರಾಚೀನ ಅವಶೇಷಗಳು ಕರ್ನಲ್ ಮೆಕೆಂಝಿ ಆಕರ ಸಂಗ್ರಹವೆಂದು ಪ್ರಖ್ಯಾತಿಗೊಂಡಿವೆ.[೪೩]

## ೪.೩ ಆಕರಗಳ ಸಂಗ್ರಹಗಳಲ್ಲಿ ಸಹಾಯಕರಾಗಿದ್ದ ದೇಶೀಯ ಪಂಡಿತರು ಹಾಗೂ ಇತರೆ ಸಹಾಯಕರ ಪಾತ್ರ

ಕರ್ನಲ್ ಮೆಕೆಂಝಿಯ ಇತಿಹಾಸ ಆಕರಗಳ ಸಂಗ್ರಹಕ್ಕೆ ದೇಶೀಯ ವಿದ್ವಾಂಸರ ಪರಿಶ್ರಮದ ಹಾಗೂ ತಜ್ಞರು ಇಲ್ಲದಿದ್ದರೆ ಆಕರಗಳ ಸಂಗ್ರಹ ಕಾರ್ಯ ಸಮರ್ಥವಾಗಿ ಕೆಲಸ ಮಾಡಲು ಸಾಧ್ಯವಿರಲಿಲ್ಲ. ಅದಕ್ಕೆ ಕಾರಣರಾದವರು ಎನ್ನುವುದಕ್ಕೆ ಕಾವಲಿ ವೆಂಕಟಬೋರಯ್ಯ ಸಾಕ್ಷಿಯಾಗಿದ್ದಾರೆ.

### ಮೆಕೆಂಝಿ ಮತ್ತು ಕಾವಲಿ ವೆಂಕಟಬೋರಯ್ಯ

ಕಾವಲಿ ವೆಂಕಟ ಬೋರಯ್ಯ ಕ್ರಿ.ಶ. ೧೭೭೮ರಲ್ಲಿ ಜನಿಸಿದನು. ಇವನ ಊರು ಆಂಧ್ರದ ಪಶ್ಚಿಮ ಗೋದಾವರಿ ಜಿಲ್ಲೆಗೆ ಸೇರಿದ ಏಲೂರು. ಇಲ್ಲಿಯೇ ಕಾವಲಿ ವೆಂಕಟ ಬೋರಯ್ಯ ೧೦ ವರ್ಷಗಳ ಕಾಲ ವಿದ್ಯಾಭ್ಯಾಸ ನಡೆಸಿ ಬಾಲ್ಯದಲ್ಲಿಯೇ ಸಂಸ್ಕೃತ ಕಾವ್ಯಗಳನ್ನು ಅಧ್ಯಯನ ಮಾಡಿದ.[೪೪]

### ಭಾರತೀಯ ಪಂಡಿತರೊಡನೆ ಕರ್ನಲ್ ಮೆಕೆಂಝಿ

ಕಾವಲಿ ವೆಂಕಟ ಬೋರಯ್ಯನಿಗೆ ಐದು ಜನ ಅಣ್ಣತಮ್ಮಂದಿರು – ವೆಂಕಟನಾರಾಯಣ್, ವೆಂಕಟಬೋರಯ್ಯ, ವೆಂಕಟಲಕ್ಷ್ಮಯ್ಯ, ವೆಂಕಟಸ್ವಾಮಿ ಮತ್ತು ಸೀತಯ್ಯ. ಇವರು ಮೂಲತಃ ಪಶ್ಚಿಮ ಗೋದಾವರಿ ಜಿಲ್ಲೆ ಆರವೇಲ ನಿಯೋಗಿ ಬ್ರಾಹ್ಮಣರೆಂಬ ಪಂಗಡಕ್ಕೆ ಸೇರಿದವರು. ವೆಂಕಟನಾರಾಯಣ ಸರ್ಕಾರಿ ಸಂಸ್ಥೆಯ ಉದ್ಯೋಗಿ. ಅಣ್ಣನಂತೆ ತಾನು ದೊಡ್ಡ ಉದ್ಯೋಗಿಯಾಗಬೇಕೆಂದು ಅದಕ್ಕೆ ತಕ್ಕಂತೆ ಪಾರ್ಸಿ, ಹಿಂದೂಸ್ಥಾನಿ ಭಾಷೆಗಳನ್ನು ಕಲಿತು, ಸುಮಾರು ೧೮ನೇ ವರ್ಷದಲ್ಲಿ ಬಂದರಿನಲ್ಲಿದ್ದ ಇಂಗ್ಲಿಷ್ ಶಾಲೆಯಲ್ಲಿ ಇಂಗ್ಲೀಷ್ ಕಲಿತ. ಇವನ ಬುದ್ಧಿವಂತಿಕೆಯನ್ನು ಕಂಡು ಕರ್ನಲ್ ಪಿಯರ್ಸ್ ಎಂಬುವವನು ಕಾವಲಿ ವೆಂಕಟ ಬೋರಯ್ಯನಿಗೆ ಬಂದರಿನಲ್ಲಿಯೇ ಸಣ್ಣ ಉದ್ಯೋಗವನ್ನು ನೀಡಿದ. ಕಾವಲಿ ವೆಂಕಟ ಬೋರಯ್ಯ ಎಲ್ಲವನ್ನೂ ಕರಗತ ಮಾಡಿಕೊಂಡು ಅಧಿಕಾರಿಗಳ ವಿಶ್ವಾಸಕ್ಕೆ ಪಾತ್ರನಾದನು. ಮುಂದೆ ಕೊಂಡಪಲ್ಲಿ ಸುತ್ತಮುತ್ತಲ ಪ್ರದೇಶಗಳ ಸೈನಿಕರಿಗೆ ಸಂಬಳ ಕೊಡುವುದಕ್ಕೆ ಈತನನ್ನು ನೇಮಿಸಿದನು. ನಂತರ ಕರ್ನಲ್ ಮೆಕೆಂಝಿ ಪಿಯರ್ಸ್ ಬಳಿಯೇ ಹೆಡ್‌ರೈಟರ್ ಆಗಿ ಕಾವಲಿ ವೆಂಕಟ ಬೋರಯ್ಯ ನಿಯಮಿತನಾದನು. ಈ ಕೆಲಸದಲ್ಲಿ ಕಾವಲಿ ವೆಂಕಟ

ಬೋರಯ್ಯ, ಈತನ ತಮ್ಮ ಲಕ್ಷ್ಮಯ್ಯ ಮತ್ತು ಪುಲಿಗಡ್ಡ ಮಲ್ಲಯ್ಯ ಮೊದಲಾದ ಸ್ಥಳೀಯ ವಿದ್ವಾಂಸರು ಕರ್ನಲ್ ಮೆಕೆಂಝಿಗೆ ನೆರವಾದರು.[೪೫]

ಬ್ರಿಟಿಷರು ೧೭೯೯ರಲ್ಲಿ ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಸ್ವತಃ ಯುದ್ಧ ಭೂಮಿಯಲ್ಲಿ ಇದ್ದು, ವೀಕ್ಷಿಸಿ ಅಲ್ಲಿಯ ಕೋಟೆಯನ್ನು ಅಕ್ರಮಿಸಿದ ರೀತಿ, ಜರುಗಿದ ಭೀಬತ್ಸ ಯುದ್ಧದ ದೃಶ್ಯಗಳನ್ನು ನೋಡಿದ ಕಾವಲಿ ವೆಂಕಟ ಬೋರಯ್ಯ ಅದರ ಮೇಲೆ ಪದ್ಯಗಳನ್ನು ಬರೆದಿದ್ದಾನೆ. ಅದಲ್ಲದೆ ಕೋಟೆಯ ಬುರುಜಿನ ಮೇಲೆ ಬ್ರಿಟಿಷ್ ಸರ್ಕಾರದ ಪತಾಕೆಯನ್ನು ಪ್ರತಿಷ್ಠಾಪಿಸಿದುದನ್ನು ಅಮೋಘವಾಗಿ ವರ್ಣಿಸಿದ್ದಕ್ಕಾಗಿ ಕರ್ನಲ್ ಮೆಕೆಂಝಿ ಕಾವಲಿ ವೆಂಕಟ ಬೋರಯ್ಯನನ್ನು ಪ್ರಶಂಸಿಸಿ ಸತ್ಕರಿಸಿದನು. ಶ್ರೀರಂಗಪಟ್ಟಣದ ಈ ಘಟನೆಯನ್ನು, ಮೈಸೂರು ಅರಸರ ಚರಿತ್ರೆಯನ್ನು ತನ್ನ ಶ್ರೀರಂಗರಾಜ ಚರಿತಂನಲ್ಲಿ ವಿವರಿಸಿ ಬರೆದಿದ್ದಾನೆ. ಹೈದರಾಬಾದಿನಿಂದ ಶ್ರೀರಂಗಪಟ್ಟಣಕ್ಕೆ ಸೈನ್ಯ ಸಮೇತ ಬರುವಾಗ ದಾರಿಯಲ್ಲಿ ಗದ್ವಾಲ ಸೈನ್ಯದ ಕೆಲವರು ಕರ್ನಲ್ ಮೆಕೆಂಝಿಯ ಬಳಿ ಇದ್ದ ಸೈನ್ಯ ಹಾಗೂ ಕಛೇರಿಗೆ ಸಂಬಂಧಿಸಿದ ಪತ್ರಗಳನ್ನು ಕದ್ದಿದ್ದರು. ಅವುಗಳನ್ನು ಹೇಗಾದರೂ ಹುಡುಕಿ ತಂದು ಕೊಡಬೇಕೆಂದು ಕಾವಲಿ ವೆಂಕಟ ಬೋರಯ್ಯನಿಗೆ ಕರ್ನಲ್ ಮೆಕೆಂಝಿಯು ಹೇಳಿದ. ಈ ಕಾರ್ಯವನ್ನು ಸಾಧಿಸುವ ಪ್ರಯತ್ನದಲ್ಲಿದ್ದಾಗ ಕಾವಲಿ ವೆಂಕಟ ಬೋರಯ್ಯ ಗದ್ವಾಲದ ಸೈನಿಕರಿಗೆ ಸೆರೆಯಾದನು. ಕಾವಲಿ ವೆಂಕಟ ಬೋರಯ್ಯ ಸೌಮ್ಯವರ್ತನೆಯಿಂದ, ಸಾಹಿತ್ಯ ಪ್ರತಿಭೆಯಿಂದ, ಎಲ್ಲರನ್ನು ಒಳ್ಳೆಯವರನ್ನಾಗಿ ಮಾಡಿಕೊಂಡು ಗದ್ವಾಲ ಸಂಸ್ಥಾನಾಧಿಪತಿಯು ಮೇಲೆ ಪದ್ಯಗಳನ್ನು ಹೇಳಿ, ಅವರ ಕೃಪಾ ಕಟಾಕ್ಷಕ್ಕೆ ಪಾತ್ರನಾದನು. ಮುಂದೆ ಟೀಪ್ಪು ಸುಲ್ತಾನನ ಪತನವಾದ ನಂತರ ಬ್ರಿಟಿಷರು ಊರುಗಳನ್ನು ಸುತ್ತುತ್ತಾ ಅಲ್ಲಿನ ಸ್ಥಳೀಯ ಐತಿಹ್ಯಗಳನ್ನು ಸಂಗ್ರಹಿಸುವ ಉದ್ದೇಶ ಹೊಂದಿದ್ದರು. ಕಾವಲಿ ವೆಂಕಟ ಬೋರಯ್ಯನು ಕರ್ನಲ್ ಮೆಕೆಂಝಿಯೊಂದಿಗೆ ಭೂಪಟಗಳನ್ನು ರಚಿಸುತ್ತಾ ಅದರೊಂದಿಗೆ ದಕ್ಷಿಣ ಭಾರತದ ಚರಿತ್ರೆಗೆ ಸಂಬಂಧಿಸಿದ ಸಾಕಷ್ಟು ಮಾಹಿತಿಗಳನ್ನೂ ಸಂಗ್ರಹಿಸಿದನು. ಈ ಸಂಚಾರದ ಸಂದರ್ಭದಲ್ಲಿ ತಿಮ್ಮಪ್ಪ ಎಂಬುವವನು ಹೇಳಿದ ಕಥೆಯ ಆಧಾರದ ಮೇಲೆ ಆನೆಗೊಂದಿ ರಾಜನ ವೃತ್ತಾಂತವನ್ನು, ನಿಜಗಲ್ಲಿನ ಭಟ್ರಾಜಲ ವೃತ್ತಾಂತವನ್ನೂ, ಕಾವಲಿ ವೆಂಕಟ ಬೋರಯ್ಯ ಸಂಪಾದಿಸಿ, ಇಂಗ್ಲೀಷ್‌ಗೆ ಅನುವಾದಿಸಿ, ಅವುಗಳನ್ನು ಮುಂದೆ ರಾಯಲ್ ಏಷಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಪ್ರಕಟಿಸಿದನು. ಶ್ರೀರಂಗರಾಜ ಚರಿತ್ರೆಯನ್ನು ರಚಿಸಿದನು. ಇದರಲ್ಲಿ ಉಮ್ಮತ್ತೂರು ರಾಜ್ಯ ಸ್ಥಾಪನೆಯಿಂದ ಯಾದವ ರಾಜರ ಪ್ರಾಬಲ್ಯದವರೆಗೆ ಸವಿಸ್ತಾರವಾದ ಚರಿತ್ರೆ ಇದೆ.[೪೬]

ಹರಿಹರದಲ್ಲಿ ಸರ್ ಆರ್ಥರ್ ವೆಲ್ಲಸ್ಲಿ ಕ್ರಿ.ಶ.೧೮೦೦ರಲ್ಲಿ ಮಹಾರಾಷ್ಟ್ರ ನಾಯಕನಾದ ಧೋಂಡಿಯ ವಾಘನನ್ನು ಹಿಡಿದುಕೊಂಡ ಸಂದರ್ಭವನ್ನು ಕಾವಲಿ ವೆಂಕಟ ಬೋರಯ್ಯ ಪದ್ಯಗಳ ಮುಖಾಂತರ ಹೇಳಿದ್ದಾನೆ. ಆನಂತರ ಸತ್ಪುರುಷವರ್ಣನಂ ಎಂಬ ಸಂಸ್ಕೃತ ಶತಕವನ್ನು ರಚಿಸಿದನು. ಕಾವಲಿ ವೆಂಕಟ ಬೋರಯ್ಯನ ಪ್ರತಿಭಾ ವಿಶೇಷವನ್ನು ಕಂಡು ಜನರಲ್ ಕ್ಯಾಂಬೆಲ್, ಕರ್ನಲ್ ಥಾಮಸ್ ಹಾಗೂ ದಿವಾನ್ ಪೂರ್ಣಯ್ಯನವರು ಅಭಿನಂದಿಸಿದ್ದಾರೆ. ಕಾವಲಿ ವೆಂಕಟ ಬೋರಯ್ಯ ಈ ಓಡಾಟದಲ್ಲಿ ಹಳೆಯ ನಾಣ್ಯಗಳನ್ನು ಸಂಪಾದಿಸಿದನು. ಅನೇಕ ಪ್ರಾಚೀನ ಲಿಪಿಯ ಶಾಸನಗಳನ್ನು ನಕಲು ಮಾಡಿದನು. ಒಂದು ಹಳೆಗನ್ನಡ ಶಾಸನವನ್ನು ಸ್ಥಳದಲ್ಲಿಯೇ ಓದಿ, ಅದರ ಅರ್ಥವನ್ನು ಕರ್ನಲ್ ಮೆಕೆಂಝಿಗೆ ಹೇಳಿದನು. ಈ ನೈಪುಣ್ಯವನ್ನು ಪ್ರಶಂಸಿಸಿ ಕರ್ನಲ್ ಮೆಕೆಂಝಿ ಆ ಶಾಸನದ ಕೆಳಗೆ ಕಾವಲಿ ವೆಂಕಟ ಬೋರಯ್ಯನ ಹೆಸರನ್ನು ಕೆತ್ತಿಸಿದನು. ಈ ಶಿಲಾಶಾಸನವನ್ನು ಕಲ್ಕತ್ತಾದ ರಾಯಲ್ ಏಷಿಯಾಟಿಕ್ ಸೊಸೈಟಿಗೆ ಕಳುಹಿಸಿದನು.[೪೭] ಈ ಶಾಸನ ಕುರುಗೋಡಿನಿಂದ ಕಲ್ಕತ್ತೆಗೆ ತೆಗೆದುಕೊಂಡು ಹೋದ ಶಾಸನವಿರಬಹುದು. ಕಾವಲಿ ವೆಂಕಟ ಬೋರಯ್ಯನು ಕರ್ನಲ್ ಮೆಕೆಂಝಿ ಕೈಕೆಳಗೆ ಹೊಸದಾಗಿ ಗುಮಾಸ್ತನಾಗಿ ಬಂದು ಸೇರಿದವರಿಗೆಲ್ಲರಿಗೂ ವಿಷಯ ಸಂಗ್ರಹಣೆ ಮಾಡುವುದು. ಪ್ರತಿ ಯೋಜನೆಗಳು, ಡ್ರಾಯಿಂಗ್, ಪ್ರಾಚೀನ ವಸ್ತುಸಂಗ್ರಹ ಮುಂತಾದ ವಿವರಗಳನ್ನು ಸಂಗ್ರಹಿಸುವ ವಿಧಾನಗಳನ್ನು ಸಂಶೋಧನೆಯ ಪದ್ಧತಿಗಳನ್ನು ಕರ್ನಲ್ ಮೆಕೆಂಝಿಯೊಂದಿಗೆ ಚರ್ಚಿಸುತ್ತಿದ್ದನು ಮತ್ತು ಅವುಗಳನ್ನು ದಾಖಲಿಸಿದ್ದಾನೆ.

ಭಾರತದ ಪರ್ಯಾಯ ದ್ವೀಪಗಳಲ್ಲಿ ದೊರೆತ ಕೆಲವು ಶಾಸನಗಳನ್ನು ಕಾವಲಿ ವೆಂಕಟ ಬೋರಯ್ಯ ಹೊಸ ಲಿಪಿಗೆ ಹಾಗೂ ತೆಲುಗು ಮತ್ತು ಸಂಸ್ಕೃತ ಭಾಷೆಯಲ್ಲಿದ್ದ ಶಾಸನಗಳನ್ನು ಇಂಗ್ಲೀಷ್ ಭಾಷೆಗೆ ಅನುವಾದಿಸಿದ್ದಾನೆ. ಇವೆಲ್ಲವೂ ಕೂಡ ಲಂಡನ್‌ನಲ್ಲಿ ಇರುವ ಇಂಡಿಯ ಆಫೀಸ್‌ನ ಕರ್ನಲ್ ಮೆಕೆಂಝಿ ಸಂಗ್ರಹದಲ್ಲಿ ಇವೆ ಹಾಗೂ ೧೮೦೧, ನವೆಂಬರ್ ೬ರಲ್ಲಿ ಕಾವಲಿ ವೆಂಕಟ ಬೋರಯ್ಯ ಸಂಸ್ಕೃತ ತಾಮ್ರಪಟ ಶಾಸನವನ್ನು ಇಂಗ್ಲೀಷ್‌ಗೆ ಅನುವಾದಿಸಿದ್ದಾನೆ. ಇದು ವಿಜಯನಗರದ ಇಮ್ಮಡಿ ಹರಿಹರನ ಕ್ರಿ.ಶ. ೧೩೬೫ರ ದಾನಪತ್ರವಾಗಿದೆ. ಇದಲ್ಲದೆ ೧೮೦೨ರಲ್ಲಿ ಸಾಕಷ್ಟು ಶಾಸನಗಳನ್ನು ಇಂಗ್ಲೀಷ್ ಭಾಷೆಗೆ ಅನುವಾದಿಸಿದ್ದಾನೆ. ಕುರುಗೋಡಿನಲ್ಲಿ ಈಗಿನ ಬಳ್ಳಾರಿ ತಾಲ್ಲೂಕಿನಲ್ಲಿ ಇದ್ದ ಹಳಗನ್ನಡ ಅಕ್ಷರದ ಶಾಸನವನ್ನು ಕರ್ನಲ್ ಮೆಕೆಂಝಿ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್‌ಗೆ ಕಳುಹಿಸಿದನು. ಈ ಪಾಠವನ್ನು ಅನುವಾದಿಸಿದವನು ಕಾವಲಿ ವೆಂಕಟ ಬೋರಯ್ಯ ೧೮೦೧ರಲ್ಲಿ ಬ್ರಿಟಿಷ್ ಸರಕಾರವು ಕರ್ನಲ್

ಮೆಕೆಂಝಿಯವರನ್ನು ಮದರಾಸಿಗೆ ಹಿಂತಿರುಗಬೇಕೆಂದು ಆಜ್ಞಾಪಿಸಿತು. ಆಗ ಕಾವಲಿ ವೆಂಕಟ ಬೋರಯ್ಯ ಸಹ ಮದರಾಸಿನಲ್ಲಿ ೨ ವರ್ಷಗಳ ಕಾಲ ಇದ್ದು ಕೆಲವು ಕೃತಿಗಳನ್ನು ಅನುವಾದಿಸಿದ್ದನು.

ಕಾವಲಿ ವೆಂಕಟ ಬೋರಯ್ಯ ಕರ್ನಾಟಕ ಪ್ರದೇಶದ ಇತಿಹಾಸವನ್ನು ಸ್ಪಷ್ಟವಾಗಿ ರಚಿಸುವುದಕ್ಕೆ, ಸಾಂಸ್ಕೃತಿಕ ಪುನರ್ರಚನೆಯಲ್ಲಿ ಪುರಾತನ ವಾಸ್ತುಶಾಸ್ತ್ರ, ದೇವಾಲಯ ಮುಂತಾದ ಕಟ್ಟಡಗಳ ಬಳಿಯಿರುವ ಶಾಸನಗಳು, ನಾಣ್ಯಗಳು ಮತ್ತು ಸಾಹಿತ್ಯದ ದಾಖಲೆಗಳನ್ನು ಬಳಸಿಕೊಳ್ಳಬೇಕೆಂಬ ಕರ್ನಲ್ ಮೆಕೆಂಝಿಗೆ ಹೇಳಿದನು. ಇದರ ಆಧಾರದಲ್ಲಿ ೨ನೇ ಅಕ್ಟೋಬರ್ ೧೮೦೨ರಲ್ಲಿ ಕರ್ನಲ್ ಮೆಕೆಂಝಿಗೆ ಒಂದು ಪ್ರಬಂಧವನ್ನು ಆತ ಸಲ್ಲಿಸಿದ್ದ. ೨೫ ಶೀರ್ಷಿಕೆಗಳನ್ನೊಳಗೊಂಡ ಈ ಪ್ರಬಂಧದಲ್ಲಿ ದಕ್ಷಿಣ ಭಾರತವನ್ನು ಮುಖ್ಯವಾಗಿ ಕರ್ನಾಟಕವೆಂದು ಗುರುತಿಸುವ ಪ್ರದೇಶದ ವಿವರಗಳಿದ್ದವು. ಈ ಪ್ರಬಂಧದಲ್ಲಿ ಕಾವಲಿ ವೆಂಕಟ ಬೋರಯ್ಯ ದಕ್ಷಿಣ ಭಾರತವನ್ನಾಳಿದ ರಾಜರ ಇತಿಹಾಸವನ್ನು ಕಲಿಯುಗದಿಂದ ಆರಂಭಿಸಬೇಕೆಂದು ದಾಖಲಿಸಿದ್ದಾನೆ. ಜೊತೆಗೆ ಟಿಪ್ಪುಸುಲ್ತಾನನ ಪತನದ ಅನಂತರ ಬ್ರಿಟಿಷರು ಈ ಪ್ರದೇಶವನ್ನು ಆಳುವವರೆಗೆ ದಾಖಲಿಸಿದ್ದಾನೆ.[೪೮] ರಾಜಕೀಯ ಇತಿಹಾಸವಲ್ಲದೆ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಿವರಗಳನ್ನು ಕರ್ನಲ್ ಮೆಕೆಂಝಿ ಮತ್ತು ಕಾವಲಿ ವಎಂಕಟ ಬೋರಯ್ಯ ದಾಖಲಿಸಿದ್ದಾರೆ. ಧರ್ಮದ ವಿವರಣೆಯಲ್ಲದೆ ಜನರ ವಿಶಿಷ್ಟ ಆಚರಣೆಗಳನ್ನೂ ದಾಖಲಿಸಿದ್ದಾರೆ. ಕರ್ನಾಟಕ ಪ್ರದೇಶದ ವಿಭಾಗಗಳು ನಗರಗಳು, ಕಟ್ಟಳೆಗಳು, ಭಾಷೆ, ಸಾಹಿತ್ಯ,[೪೯] ಶಾಸನ ಕಟ್ಟಡಗಳ ವಿವರಗಳನ್ನು ವಿವರಿಸಬೆಕೇಂದಿದ್ದನು. ಆದರೆ ಕಾವಲಿ ವೆಂಕಟ ಬೋರಯ್ಯನ ಅನಾರೋಗ್ಯದ ಕಾರಣದಿಂದ ಇದನ್ನು ಸಾಧಿಸಲು ಸಾಧ್ಯವಾಗಲಿಲ್ಲ.

ಇದಲ್ಲದೆ ಕರ್ನಲ್ ಮೆಕೆಂಝಿಯೊಂದಿಗೆ ಸೇರಿ ಕಲಿಯುಗದಿಂದ ಆರಂಭಿಸಿ ತಾಳಿಕೋಟೆ ಅಥವಾ ರಕ್ಕಸತಂಗಡಿ ಯುದ್ಧದವರೆಗೆ ಇತಿಹಾಸ ಹೇಳುವ ವಿವರವುಳ್ಳ The Historical Collections of the Mysore ಎಂಬ ಪ್ರಬಂಧ ಬರೆದನು. ೧೮೦೬ರಲ್ಲಿ ಕಮಲಾಪುರ ಮತ್ತು ಆನೆಗೊಂದಿ ಗ್ರಾಮಗಳ ಜನರಿಂದ ಪಡೆದ ವಿವಿಧ ಮಾಹಿತಿ ಆಧಾರದ ಮೇಲೆ A History of the Kings of Beejanagar and Anegondy ಎಂಬ ಪ್ರಬಂಧ ರಚಿಸಿದನು. ಇದರಲ್ಲಿ ೨ನೆಯ ವೆಂಕಟಪತಿರಾಯನ ವಶದಲ್ಲಿದ್ದ ಬಹಳಷ್ಟು ಭಾಗವನ್ನು ಔರಂಗಜೇಬನು ಗೆದ್ದ ಬಗ್ಗೆ ಉಲ್ಲೇಖಿಸಿದ್ದಾನೆ. ೧೮೦೦-೧೮೦೧ರಲ್ಲಿ ಶ್ರವಣಬೆಳಗೊಳದ ಜೈನ ಸಮಾಜದವರೊಂದಿಗೆ ನಡೆಸಿದ

ಪ್ರಶ್ನಾವಳಿ ಮತ್ತು ಪಡೆದ ಉತ್ತರಗಳನ್ನು ಆಧಾರವಾಗಿಟ್ಟುಕೊಂಡು ಕರ್ನಲ್ ಮೆಕೆಂಝಿಯೊಡನೆ ಸೇರಿ ಶ್ರವಣಬೆಳಗೊಳದ ವಿವರಗಳನ್ನು ದಾಖಲಿಸಿದ್ದಾನೆ.

ಕಾವಲಿ ವೆಂಕಟ ಬೋರಯ್ಯ ಕರ್ನಲ್ ಮೆಕೆಂಝಿ ಜೊತೆ ಇದ್ದದ್ದು ಕೇವಲ ೬ ವರ್ಷಗಳ ಕಾಲ ಮಾತ್ರ. ಇಷ್ಟು ಕಡಿಮೆ ಅವಧಿಯಲ್ಲಿ ಸಾಧಿಸಿದ ಸಾಧನೆ ಕನ್ನಡ ನಾಡು ಹೆಮ್ಮೆ ಪಡುವಂತದ್ದಾಗಿದೆ. ಕಾವಲಿ ವೆಂಕಟ ಬೋರಯ್ಯ ಮಾನವ ಬದುಕಿರುವಷ್ಟು ಕಾಲದಲ್ಲಿಯೇ ಮಾಡಬಹುದಾದ ಕೆಲಸವನ್ನು ಕೇವಲ ೬ ವರ್ಷಗಳ ಕಾಲದಲ್ಲಿ ಮಾಡಿದ್ದಾನೆ. ಕ್ರಿ.ಶ ೧೮೦೩ರಲ್ಲಿ ಕಾವಲಿ ವೆಂಕಟ ಬೋರಯ್ಯ ತನ್ನ ೨೬ನೇ ವಯಸ್ಸಿನಲ್ಲಿ ಸನ್ನಿಪಾತದಿಂದ ಮರಣ ಹೊಂದಿದನು. ಕರ್ನಲ್ ಮೆಕೆಂಝಿ ಕಾವಲಿ ವೆಂಕಟ ಬೋರಯ್ಯನನ್ನು ದಹನ ಮಾಡಿದ ಸ್ಥಳದಲ್ಲಿ ಅವನ ಜ್ಞಾಪಕಾರ್ಥವಾಗಿ ಸಮುದ್ರ ತೀರದಲ್ಲಿ ಒಂದು ಶಿಲಾಶಾಸನವನ್ನು ಹಾಕಿಸಿದನು. ಈ ಶಿಲಾಶಾಸನವು ೧೮೪೭ರ ವರೆಗೆ ಮದರಾಸಿನಲ್ಲಿ ಇದ್ದು, ಅನಂತರ ದಾಖಲೆಗಳು ಲಭ್ಯವಾಗಿಲ್ಲ. ಕಾವಲಿ ವೆಂಕಟ ಬೋರಯ್ಯ ೧೮೦೩ರಲ್ಲಿ ಮರಣ ಹೊಂದಿದನು. ಕರ್ನಲ್ ಮೆಕೆಂಝಿ ತನ್ನ ಸ್ನೇಹಿತರಿಗೆ ೧೮೧೭ರ ಫೆಬ್ರವರಿಯಲ್ಲಿ ಬರೆದ ಪತ್ರವೊಂದರಲ್ಲಿ ಒಬ್ಬ ದೇಶಿಯ ಸಹಚರ್ಯದಿಂದ ಭಾರತೀಯ ಸಂಶೋಧನೆಯ ಬಾಗಿಲ ಮೂಲಕ ಪ್ರವೇಶಿಸುವುದಕ್ಕೆ ನನ್ನಿಂದ ಸಾಧ್ಯವಾಯಿತು. ಆ ದಿನಗಳಲ್ಲಿ ಇನ್ನೂ ಚಿಗುರುಮೀಸೆಯ ಯುವಕನಾಗಿದ್ದ ಕಾವಲಿ ವೆಂಕಟ ಬೋರಯ್ಯ ಅತ್ಯಂತ ಕುಶಾಗ್ರಮತಿ, ಪ್ರತಿಭಾಶಾಲಿ, ತನ್ನ ಕಾರ್ಯನಿರ್ವಹಣೆಯ ಎಲ್ಲ ವರ್ಗದಲ್ಲಿ ಸಮದೃಷ್ಟಿ, ಸಹನಶೀಲ, ಸಹೃದಯಿಯಾಗಿದ್ದ ಈ ಮನುಷ್ಯನು ಪ್ರತಿಭಾ ವಿಶೇಷದಿಂದ ಭಾರತೀಯ ಭಾಷಾಜ್ಞಾನದ ಅರಿವಿಲ್ಲದ ನನಗೆ ಅರಿವು ಮೂಡುವಂತೆ ಮಾಡಿದನು. ಕೆಲವು ಕಾಲದಿಂದ ಸಂಪಾದಿಸಿದ ಕನ್ನಡ, ತಮಿಳು ಸಂಸ್ಕೃತ ಶಾಸನಗಳಲ್ಲಿನ ಹಳೆ ಲಿಪಿಗಳು ಗೊತ್ತಿಲ್ಲದೇ ಪರದಾಡುತ್ತಿದ್ದ ನನಗೆ ಕಾವಲಿ ವೆಂಕಟ ಬೋರಯ್ಯ ತನ್ನ ಬುದ್ಧಿಶಕ್ತಿಯಿಂದ ಭಾರತೀಯ ಸಂಶೋಧನಾ ವಿಜ್ಞಾನಕ್ಕೆ ನೂತನ ಆಯಾಮಗಳನ್ನು ಗುರುತಿಸುವಂತೆ ಮಾಡಿದನು. ಇವನು ಕೊಟ್ಟಂತಹ ಶಿಕ್ಷಣದಿಂದ ಆತನ ಸೋದರರೂ, ಶಿಷ್ಯರೂ ಸಂತೋಷವಾಗಿ ಆತನನ್ನು ಅನುಸರಿಸುತ್ತ ನಡೆದಿದ್ದಾರೆ ಎಂದಿದ್ದಾನೆ. ಕಾವಲಿ ವೆಂಕಟ ಬೋರಯ್ಯ ಭಾರತದಲ್ಲಿ ಬಳಕೆಯಲ್ಲಿದ್ದ ತೆಲುಗು, ಕನ್ನಡ, ಮರಾಠಿ, ಸಂಸ್ಕೃತ, ಪರ್ಷಿಯನ್, ಹಿಂದೂಸ್ತಾನಿ, ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪರಿಣತನಾಗಿದ್ದ. ಇಷ್ಟು ಚಿಕ್ಕವಯಸ್ಸಿನಲ್ಲಿ ಏಳು ಭಾಷೆಗಳು ಇವನಿಗೆ ತಿಳಿದಿತ್ತೆಂಬುದು ಆತನ ಅಸಾಧಾರಣ ಬುದ್ಧಿಶಕ್ತಿಯನ್ನು ಸೂಚಿಸುತ್ತದೆ. ಇದು ಕರ್ನಲ್ ಮೆಕೆಂಝಿ ಆಕರ ಸಂಗ್ರಹಗಳಿಗೆ ಸಹಾಯಕವಾಯಿತು.

ಆದರೆ ಕರ್ನಲ್ ಮೆಕೆಂಝಿಗೆ ಸಂಬಂಧಿಸಿದಂತಹ ಯಾವ ಮಾಹಿತಿಯನ್ನು ತೆಗೆದುಕೊಂಡರೂ ಕರ್ನಲ್ ಮೆಕೆಂಝಿ ಇಲ್ಲದೆ ಕಾವಲಿ ಸಹೋದರರು ಇಲ್ಲ; ಕಾವಲಿ ಸಹೋದರರಿಲ್ಲದೆ ಕರ್ನಲ್ ಮೆಕೆಂಝಿ ಇಲ್ಲ –ಎನ್ನುವಷ್ಟರ ಮಟ್ಟಿಗೆ ಕರ್ನಲ್ ಮೆಕೆಂಝಿ ಮತ್ತು ಕಾವಲಿ ವೆಂಕಟ ಬೋರಯ್ಯ ಮತ್ತು ಸಹೋದರರು ಭಾರತದ ಇತಿಹಾಸ ಆಕರಗಳ ಸಂಗ್ರಹಣಕಾರರಲ್ಲಿ ಮಹತ್ವದ ಕಾರ್ಯ ನಿರ್ವಹಿಸಿದ್ದಾರೆ.

ಕರ್ನಲ್ ಮೆಕೆಂಜಿಝಿಯ ಮೈಸೂರು ಪ್ರಾಂತ್ಯದ ಮೋಜಿನಿ ಮಾಡುವ ಕಾಲದಲ್ಲಿ ಅಂದರೆ (೧೮೦೦–೧೮೦೪) ಕಾವಲಿ ವೆಂಕಟ ಬೋರಯ್ಯ ಕರ್ನಲ್ ಮೆಕೆಂಝಿಯ ಸ್ಥಳೀಯ ವಿಶ್ಲೇಷಣಕಾರನಾಗಿ, ವಿಷಯ ಸಂಗ್ರಹಕಾರನಾಗಿ ಕೆಲಸ ಮಾಡಿದನು. ಈ ಅವಧಿಯಲ್ಲಿ ಈತ ಅನೇಕ ಕೈಫಿಯತ್ತುಗಳನ್ನು ಸಂಗ್ರಹಿಸಿದನಲ್ಲದೆ ಕೆಲವನ್ನು ಸ್ಥಳೀಯರು ನೀಡಿದ ಮಾಹಿತಿಯನ್ನಾಧರಿಸಿ ತಾನೇ ರಚಿಸಿದ್ದಾನೆ. ಹೀಗೆ ಸಂಗ್ರಹಿಸಿದ ಕೈಫಿಯತ್ತುಗಳಲ್ಲಿ ಕನ್ನಡ, ತೆಲುಗು, ಮರಾಠಿಯವೂ ಇವೆ. ಕೆಲವು ಕೈಫಿಯತ್ತುಗಳನ್ನು ಸ್ಥಳೀಯ ಚರಿತ್ರೆಯಾಗಿ ರಚಿಸಿದ್ದಾನೆ. ಸಂಗ್ರಹಿಸಿದ ಕೆಲವು ಪ್ರಮುಖ ಕೈಫಿಯತ್ತುಗಳನ್ನು ಇಂಗ್ಲೀಷಿಗೆ ಅನುವಾದಿಸಿದ್ದಾನೆ. ಕೆಲವನ್ನು ಮರಾಠಿಯಿಂದ ಕನ್ನಡಕ್ಕೆ, ಕನ್ನಡದಿಂದ ಇಂಗ್ಲೀಷಿಗೆ, ತೆಲುಗಿನಿಂದ ಇಂಗ್ಲೀಷಿಗೆ ಅನುವಾದಿಸಿದ್ದಾನೆ. ಈತ ಕೆಲವಾರು ಜಾತಿ ಪಂಗಡಗಳ ಕುಲಾಚಾರಗಳ ಬಗ್ಗೆಯೂ ಬರೆದಿದ್ದಾನೆ.

ಕಾವಲಿ ವೆಂಕಟ ಬೋರಯ್ಯ ಮತ್ತು ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಪ್ರಮುಖ ಕೈಫಿಯತ್ತುಗಳು ಮತ್ತು ಇಂಗ್ಲೀಷ್‌ಗೆ ಅನುವಾದಗಳು : 50 An Account of Bellary (1800 A.D.), An Account of Savanur (1800 A.D.), An Account of Madhwaguru (1801 A.D.), Memoirs of the District of Herial in ceded Districts (1801), Narrative of Secular Affairs 1801, ನರಪತಿ ವಿಜಯಮು (ಮೈಸೂರು ದೇಶದ ಅರಸರ ಇತಿಹಾಸ) – ೧೮೦೦.

**ಶಿಲ್ಪ ಶಾಸ್ತ್ರದ ಲೇಖನಗಳು**[೫೧]

Iconographical Features of Vishnu Images, An illustrated article on the Sculptures in the Temple of Lingod Bhavesvara in Chandolu (ಇಂಗ್ಲೀಷ್ ಮತ್ತು ತೆಲುಗಿನಲ್ಲಿ), Manners and customs of the Jains (1803) Paper on Basavesvara (1802 A.D.). Many Sthalamahatmyams on Kanchi Sandur, Sriranga, etc, A Memoir on

the Hill Tribes of the Northern Circars (1797) A.D.,An Account of the Boyar war on Bedar Tribe in the Mysore State.

ಕಾವಲಿ ವೆಂಕಟ ಬೋರಯ್ಯನ ಮರಣದಿಂದ ಅಪೂರ್ಣವಾಗಿದ್ದ ಕೆಲವು ಲೇಖನಗಳನ್ನು ಆತನ ತಮ್ಮ ಕಾವಲಿ ವೆಂಕಟ ಲಕ್ಷ್ಮಯ್ಯ ಪೂರ್ಣ ಮಾಡಿ ಪ್ರಕಟಿಸಿದ್ದಾನೆ. ಹೀಗೆ ಕರ್ನಲ್ ಮೆಕೆಂಝಿಯ ಮತ್ತು ಕಾವಲಿ ವೆಂಕಟ ಬೋರಯ್ಯನವರ ಆಕರ ಸಂಗ್ರಹದ ಕಾರ್ಯ ಕನ್ನಡ ನಾಡಿಗೆ ಚರಿತ್ರೆಗೆ ದೊಡ್ಡಕೊಡುಗೆಯಾಗಿದೆ.

**ಕರ್ನಲ್ ಮೆಕೆಂಝಿಯ ಆಕರ ಸಂಗ್ರಹಣೆಯಲ್ಲಿ ಇತರ ಸಹಾಯಕರು**

ಟಿಪ್ಪು ಸುಲ್ತಾನನ ನಿಧನದ ನಂತರ ಮೈಸೂರು ಸಂಸ್ಥಾನ ಹಾಗೂ ಅದರ ಸುತ್ತಲಿನ ಪ್ರಾಂತ್ಯಗಳ ಭೂಸಮೀಕ್ಷೆಯನ್ನು ಕೈಗೊಳ್ಳುವ ಮೂಲಕ ಕರ್ನಲ್ ಮೆಕೆಂಝಿಯು ದಕ್ಷಿಣ ಭಾರತದ ಪುರಾತತ್ವ ಶೋಧನೆಗೆ ವ್ಯಾಪಕ ಕಾರ್ಯವನ್ನು ನಿರ್ವಹಿಸಿದನು. ಈ ಸಂದರ್ಭದಲ್ಲಿ ಈತನಿಗೆ ನೆರವಾದವನು ಕಾವಲಿ ವೆಂಕಟ ಬೋರಯ್ಯ ಎಂಬ ದೇಶೀಯ ವಿದ್ವಾಂಸ. ಆದರೆ ಈತ ಮಾತ್ರವಲ್ಲದೆ ಸುಮಾರು ೧೬–೧೮ ಮಂದಿ ದೇಶೀಯ ವಿದ್ವಾಂಸರ ನೆರವೂ ಕರ್ನಲ್ ಮೆಕೆಂಝಿಗೆ ಇತ್ತು ಎಂಬುದನ್ನು ಈ ಮುಂದಿನಂತೆ ನಿರೂಪಿಸಬಹುದು. ಕೃಷ್ಣರಾವ್, ಆನಂದರಾವ್, ವೆಂಕಟರಾವ್, ನಾರಾಯಣರಾವ್, ಕಾವಲಿ ವೆಂಕಟಲಕ್ಷ್ಮಯ್ಯ, ಕೆಲ್ಲಿ ವೆಂಕಟರಾಮಸ್ವಾಮಿ, ಮೋಬರಾವ್, ಸೇವರಾವ್, ಶ್ರೀನಿವಾಸಯ್ಯ, ಮಲ್ಲಯ್ಯ, ರಾಮದಾಸ್, ನಿತಾಲನಾಯನ, ಗುಂಡಪ್ಪ ಸಿಂಗ್ರಾಚಾರಿ, ಧರ್ಮಯ್ಯ (ಮತ್ತು ಅವನ ಮಗ), ಅಬ್ದುಲ್ ಅಜೀಜ್, ಸ್ವಾಮೀನಾಥಶಾಸ್ತ್ರೀ, ಇಂಗ್ಲೀಷ್ ಸುಬ್ಬರಾವ್ ಮೇಲ್ಕಂಡ ವಿದ್ವಾಂಸರಲ್ಲಿ ಕಾವಲಿ ವೆಂಕಟ ಬೋರಯ್ಯನ ಮತ್ತು ಅವನ ಸಹೋದರರೊಂದಿಗೆ ಕರ್ನಲ್ ಮೆಕೆಂಝಿಗೆ ಸಹಾಯಕರಾಗಿದ್ದಾರೆ.[೫೨]

ಒಟ್ಟಿನಲ್ಲಿ ಈ ಸಂಗ್ರಹಕಾರರ ಸಹಾಯ ಕರ್ನಲ್ ಮೆಕೆಂಝಿಗೆ ಆಕರಗಳ ಸಂಗ್ರಹಣೆಯಲ್ಲಿ ಅತ್ಯಂತ ಉಪಯುಕ್ತವಾಗಿ ನೆರವಾಗಿದ್ದಾರೆ. ತೆಲುಗು, ಕನ್ನಡ, ಸಂಸ್ಕೃತ, ಮರಾಠಿ ಮುಂತಾದ ಭಾಷೆಗಳನ್ನು ಬಹುಬೇಗ ಕರಗತ ಮಾಡಿಕೊಂಡು ಹಳೆಯದರ ಸಂಗ್ರಹ ಮಾಡುವುದರಲ್ಲಿ ಕಾವಲಿ ವೆಂಕಟ ಬೋರಯ್ಯ ಮತ್ತು ಅವನ ಸಹೋದರರು ಮತ್ತಿತರ ಸಹಾಯಕರು ದಾಖಲೆಗಳನ್ನು ಭಾಷಾಂತರಿಸಿದ್ದು ಕರ್ನಲ್ ಮೆಕೆಂಝಿಗೆ ವರದಾನವಾಗಿ ಪರಿಣಮಿಸಿತು. ಈ ರೀತಿಯಲ್ಲಿ ಭಾರತೀಯ ದ್ವಿಭಾಷಿಗಳು,

ಸಹಾಯಕರುಗಳು ಕರ್ನಲ್ ಮೆಕೆಂಝಿ ಮಾಡಿದ ಅದ್ಭುತವಾದ ಸಂಗ್ರಹಕಾಯದಿಂದಾಗಿ ಭಾರತದ ಇತಿಹಾಸ ರಚನೆಗೆ ಸುಲಭವಾಯಿತು.

## ೪.೪ ಆಕರಗಳ ಸಂಗ್ರಹಗಳ ಮಹತ್ವದ ಬಗ್ಗೆ ಕೆಲವು ಇತಿಹಾಸಕಾರರ ಅಭಿಪ್ರಾಯಗಳು

ಮೈಸೂರು ಗೆಜಿಯರ್ ಸಂಪಾದಕರಾದ ಸಿ. ಹಯವದನರಾವ್‌ರವರು ಮೆಕೆಂಝಿಯವರು ಸಂಗ್ರಹಿಸಿದ ಅಧಿಕ ಸಂಖ್ಯೆಯ ಶಾಸನಗಳು ಸಂಶೋಧಕರಿಗೆ, ಇತಿಹಾಸಕಾರರಿಗೆ ಉಪಯುಕ್ತವಾಗುತ್ತವೆ ಎಂದು ಹೇಳಿದ್ದಾರೆ.

ಬಿ.ಆರ್.ಮಹಾಲಿಂಗಂ ಪ್ರಸಿದ್ಧ ಇತಿಹಾಸಕಾರರೂ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಮತ್ತು ಅನುವಾದ ಮಾಡಿದ ಶಾಸನಗಳ ಮಹತ್ವವನ್ನು ಒತ್ತಿ ಹೇಳಿದ್ದಾರೆ.

ಟಿ.ಎನ್.ಸುಬ್ರಮಣಿಯವರು ಕರ್ನಲ್ ಮೆಕೆಂಝಿಯವರು ಅಪಾರ ಶ್ರಮದಿಂದ ಮಾಹಿತಿಯನ್ನು ಸಂಗ್ರಹಿಸಿದ್ದರು. ಇಲ್ಲದಿದ್ದರೆ ಅವು ನಾಶವಾಗುತ್ತಿದ್ದವು ಎಂದು ವಿಶ್ಲೇಷಿಸಿದ್ದಾರೆ.

ಶ್ರೀನಿವಾಸ ಹಾವನೂರರು ತಮ್ಮ ಹೊಸಗನ್ನಡ ಅರುಣೋದಯದಲ್ಲಿ ಕರ್ನಲ್ ಮೆಕೆಂಝಿ ಮೈಸೂರು ಕರ್ನಾಟಕದ ಇತಿಹಾಸಕ್ಕಾಗಿ ಮತ್ತು ಜನಜೀವನವನ್ನು ಅರ್ಥಮಾಡಿಕೊಳ್ಳಲು ಪ್ರಾಚೀನ ಅವಶೇಷಗಳನ್ನು ದೊರಕಿಸುವುದು ಮತ್ತು ಜನರು ಹೇಳಿದ್ದನ್ನು ದಾಖಲಿಸುವುದು ನಮ್ಮ ನಾಡಿನ ಅಭ್ಯಾಸದ ದೃಷ್ಟಿಯಿಂದ ಈ ಕೆಲಸವು ಅತ್ಯಪೂರ್ವವೆನಿಸಿದೆ.

**ಕೊನೆ ಟಿಪ್ಪಣಿ**

೧. ವಿಲ್ಸನ್.ಹೆಚ್.ಹೆಚ್.ಮೆಕೆಂಝಿ ಸಂಗ್ರಹಗಳು, ಪು. ೩೬
೨. ಅದೇ, ಪು. ೩೭
೩. ಕೇಶ್ವಾನಿ.ಕೆ.ಬಿ., ಹಿಸ್ಟರಿ ಆಫ್ ಮಾಡರ್ನ ಇಂಡಿಯಾ, ಪು. ೩
೪. ಅದೇ, ಪು. ೭
೫. ಅದೇ, ಪು. ೧೨
೬. ಹಾವನೂರು, ಹೊಸಗನ್ನಡ ಅರುಣೋದಯ, ಪು. ೨೭
೭. ಬರವಣಿಗೆಯ ಬೆಳವಣಿಗೆ
೮. ವಿಲ್ಸನ್.ಹೆಚ್.ಹೆಚ್, ಮೆಕೆಂಝಿ ಸಂಗ್ರಹಗಳು, ಪು. ೨೮
೯. ಹಾವನೂರು, ಪು. ೪೬
೧೦. ಮುತ್ತಣ್ಣ, ಪು. ೫೭
೧೧. ಬ್ಲೇಕ್.ಎಂ.ಡೇವಿಡ್, ಪು. ೭೮
೧೨. ಅದೇ, ಪು. ೭೯
೧೩. ವೆಂಕಟರತ್ನಂ.ಎ.ವಿ., ಇತಿಹಾಸ ಸಂಶೋಧನಾ ಮಾರ್ಗ, ಪು. ೧೨೬
೧೪. ಅದೇ, ಪು. ೧೩೨
೧೫. ಮುತ್ತಣ, ಪು. ೮೬
೧೬. ಹಾವನೂರು, ಪು. ೬೦
೧೭. ಎ.ವಿ.ವೆಂಕಟರತ್ನಂ, ಇತಿಹಾಸ ಸಂಶೋಧನ ಮಾರ್ಗ, ಪು. ೩೬
೧೮. B.L.Rice, EC Vol-II, P.14
೧೯. ಅದೇ, ಪು. ೧೯
೨೦. ಅದೇ, ಪು. ೧೯
೨೧. ಷೇಕ್ ಅಲಿ.ಬಿ., ಹಿಸ್ಟರಿ ಇಟ್ಸ್ ಮೀನಿಂಗ್, ಪು. ೨೪
೨೨. Wilson H.H., P. 48
೨೩. ಅದೇ, ಪು. ೫೬
೨೪. ಅದೇ, ಪು. ೬೩
೨೫. ಅದೇ, ಪು. xv
೨೬. ಅಜಿವಾಳ, ಕರ್ನಲ್ ಮೆಕೆಂಝಿ, ಪು. ೧೬
೨೭. ಜೆನ್ನಿಫರ್‌ಹೌಸ್, ಇಲಸ್ಟ್ರೇಟಿಂಗ್ ಇಂಡಿಯಾ, ಪು. ೧೨
೨೮. ಬ್ಲೇಕ್.ಎಂ. ಡೇವಿಡ್, ಕಾರ್ಲಿನ್ ಮೆಕೆಂಝಿ, ಕಲೆಕ್ಟರ್ ಎಕ್ಸಾರ್ಡಿನಂ, ಪು. ೧೨೯

೨೯. ಬರವಣಿಗೆ ಪ್ರಾರಂಬ, ಇತಿಹಾಸ ಪುಸ್ತಕ
೩೦. ಅದೇ, ಪು. ೨೩
೩೧. ಅದೇ, ಪು. ೧೦೩
೩೨. ಹೊಸಗನ್ನಡ ಅರುಣೋದಯ, ಪು. ೨೪
೩೩. ಗ್ರೋವರ್, ಮಾಡರ್ನರ್ ಇಂಡಿಯನ್ ಹಿಸ್ಟರಿ, ಪು. ೧೨೯
೩೪. ಕಲಬುರ್ಗಿ.ಎಂ.ಎಂ, ಕರ್ನಾಟಕ ಕೈಫಿಯತ್ತು, ಪು. xiii
೩೫. ಅದೇ, ಪು. xv
೩೬. ಅಜಿವಾಲ, ಕರ್ನಲ್ ಮೆಕೆಂಜಿ, ಪು. ೧೬
೩೭. ಜೆನ್ನಿಫರ್‌ಹೌಸ್, ಇಲಸ್ಟ್ರೇಟಿಂಗ್ ಇಂಡಿಯಾ, ಪು. ೧೨
೩೮. ಬ್ಲೇಕ್.ಎಂ. ಡೇವಿಡ್, ಕಾರ್ಲಿನ್ ಮೆಕೆಂಝಿ, ಕಲೆಕ್ಟರ್ ಎಕ್ಸಾರ್ಡಿನರಿ, ಪು. ೧೨೦
೩೯. ಬರವಣಿಗೆ ಪರಾರಂಬ–ಇತಿಹಾಸ ಪುಸ್ತಕ
೪೦. ಭಾರತದಲ್ಲಿ ಲಿಪಿಯ ಬಳಕೆ.
೪೧. ಜೆನ್ನಿಫರ್, ಪು. ೧೯
೪೨. ಬ್ಲೇಕ್.ಎಂ., ಡೇವಿಡ್, ಪು. ೧೨೨
೪೩. ಜೆನ್ನಿಫರ್, ಪು. ೨೦
೪೪. ಜೆನ್ನಿಫರ್, (ಎನ್.೭), ಪು. ೨೦೮
೪೫. ಅದೇ, ಪು. ೨೦೮
೪೬. ಕಾವಲಿ ವೆಂಕಟ ಬೋರಯ್ಯ, 'ಎ ಹಿಸ್ಟರಿ ಆಫ್ ದಿ ಕಿಂಗ್ಸ್ ಆಫ್ ಬಿಜನಗರ್ ಅಂಡ್ ಆನೆಗೊಂಡಿ', ಪು. ೪೨೧
೪೭. ಅದೇ, ಪು. ೪೨೧
೪೮. ಬೋರಯ್ಯ, ದಿ ಹಿಸ್ಟಾರಿಕಲ್ ಕಲೆಕ್ಷನ್ ಆಫ್ ದಿ ಮೈಸೂರು, JRAS-Vol-XII. P. 338
೪೯. ಅದೇ, ಪು. ೩೪೦
೫೦. ಕುಸುಮ, ಕಾವಲಿ ವೆಂಕಟಬೋರಯ್ಯ, ಡಾ. ದೇವರಕೊಂಡರೆಡ್ಡಿ ಆಫ್ ಬೀಜನಗರ್ ಅಂಡ್ ಮಧುರ, ಪು. ೭೨
೫೧. ಅದೇ, ಪು. ೭೯
೫೨. ವಿಲನ್ಸ್.ಹೆಚ್.ಹೆಚ್, ಮೆಕೆಂಝಿ ಕಲೆಕ್ಷನ್ ಕ್ಯಾಟಲಾಗ್

# ಅಧ್ಯಾಯ–೫

# ಕರ್ನಲ್ ಮೆಕೆಂಝಿ ಆಕರಗಳ ಸಂಗ್ರಹದ ಪ್ರಸ್ತುತತೆ, ಪ್ರಭಾವ, ಸಂದೇಶ ಹಾಗೂ ಸ್ಥಿತ್ಯಂತರಗಳು

## ೫.೧ ಆಕರಗಳ ಸಂಗ್ರಹಿಸಿದ ಆಕರಗಳ ಪ್ರಸ್ತುತತೆ

ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳಲ್ಲಿ ಇತರೆ ಪೂರಕ ಆಕರಗಳಲ್ಲಿ ನಿರ್ಲಕ್ಷಿಸಲ್ಪಟ್ಟಿರುವ ಅಥವಾ ಅಪೂರ್ಣವಾಗಿರುವ ಕನ್ನಡ ನಾಡಿನ ಮೇಲೆ ಮರಾಠ ಸೈನಿಕರ ನಿರಂತರ ಆಕ್ರಮಣಶೀಲತೆ, ಜನಜೀವನವನ್ನು ಅವು ಪ್ರಭಾವಿಸಿದ ವಿಧಾನಗಳು, ಅದರಿಂದುಂಟಾದ ಭೀಕರ ಪರಿಣಾಮಗಳು ಪ್ರತಿಬಿಂಬಿತವಾಗಿದೆ. ಇನ್ನು ಕನ್ನಡ ನಾಡಿನ ಆಡಳಿತ ಮತ್ತು ಒಳಾಡಳಿತ ನೀತಿಗಳಲ್ಲಿ ಭಾಗೀದಾರಾದ ಹಲವಾರು ಅಧಿಕಾರಿಗಳು, ಅವರ ಅಧಿಕಾರ ವ್ಯಾಪ್ತಿ ಮೊದಲಾದ ಕುರಿತು ಶಾಸನಗಳಲ್ಲಿ ದೊರಕುವ ಮಾಹಿತಿಗಳಂತೆಯೇ ಈ ಕೈಫಿಯತ್ತುಗಳ ಮಾಹಿತಿಯೂ ಪೂರಕವಾಗಿದೆ. ಕರ್ನಲ್ ಮೆಕೆಂಝಿ ಸಂಗ್ರಹಸಿದ ಕೈಫಿಯತ್ತುಗಳನ್ನು ಆಧುನಿಕ ಚಾರಿತ್ರಿಕ ದೃಷ್ಟಿಕೋನದಿಂದ ನೋಡಿದಾಗ ಕರ್ನಲ್ ಮೆಕೆಂಝಿ ಸಂಗ್ರಹದ ಕೈಫಿಯತ್ತುಗಳಲ್ಲಿ ಐತಿಹಾಸಿಕ ಸಾಮಗ್ರಿಗಳ ಕುರಿತು ಹಲವಾರು ಪ್ರಶ್ನಾರ್ಥಕ ಚಿನ್ಹೆಗಳು ಎದ್ದಿರುವುದು ಸಹಜವೇ ಆಗಿದೆ. ಕರ್ನಲ್ ಮೆಕೆಂಝಿ ಸಂಗ್ರಹದ ಕೈಫಿಯತ್ತುಗಳು ಆಧುನಿಕ ದೃಷ್ಟಿಕೋನ ಹೊಂದಿಲ್ಲ. ಇದರಲ್ಲಿ ಕೇವಲ ಆಯಾಕಾಲದ ಜನರ ವೈಯಕ್ತಿಕ ಮನೋಧರ್ಮ ಹೆಚ್ಚು ಪ್ರತಿಫಲಿತವಾಗಿದೆ. ಇವುಗಳು ನೈಜವಾದ ಮಾಹಿತಿ ಪ್ರತಿಗಳಲ್ಲ, ಘಟನೋತ್ತರ ಭಾವನೆಗಳ ಒಳ ಮೆಲುಕುಗಳಷ್ಟೇ, ಇಲ್ಲಿ ನೀಡಲಾದ ಮಾಹಿತಿಗಳು ಜನರ ವೈಯುಕ್ತಿಕ ಅಭಿಪ್ರಾಯಗಳೇ ಹೊರತು ಐತಿಹಾಸಿಕ ಹಿನ್ನೆಲೆಯ ಅಭಿಪ್ರಾಯಗಳೆ ಕೊರತೆ ಕಾಣುತ್ತದೆ. ಅಂದರೆ ಇವುಗಳಿಂದ ನಿರೀಕ್ಷಿತ ಐತಿಹಾಸಿಕ ಒಳಹರಿವುಗಳು ದೊರಕಿಲ್ಲ.

ಈ ಕೈಫಿಯತ್ತುಗಳ ಕುರಿತು ಇರುವ ಮತ್ತೊಂದು ವಿಮರ್ಶೆ ಎಂದರೆ ಅವುಗಳಲ್ಲಿ ಅತಿರೇಕ ಎನಿಸುವಷ್ಟರ ಮಟ್ಟಿಗೆ ದಾಖಲಾಗಿರುವ ವೈಯುಕ್ತಿಕ ಅಭಿಪ್ರಾಯಗಳು. ಅವುಗಳಲ್ಲಿ ಇತಿಹಾಸದ ಪೂರಕ ಮಾಹಿತಿಯನ್ನು ಕಂಡುಕೊಳ್ಳುವುದು ಕಷ್ಟ ಸಾಧ್ಯ. ಕರ್ನಲ್ ಮೆಕೆಂಝಿ ಸಂಗ್ರಹದ ಕೈಫಿಯತ್ತುಗಳು ಪಾಳೇಪಟ್ಟುಗಳ ಸ್ಥಾಪಕರು ಸಮಾಜದ ಕೆಳಸ್ತರದ ವರ್ಗಗಳಿಗೆ ಸೇರಿದ್ದು ಅವರಿಗೆ ಸಾಮಾಜಿಕ ಸ್ಥಾನಮಾನವನ್ನು ಗಳಿಸಿಕೊಡಲು ಪೂರಕವಾಗುವಂತಹ ಮಾಹಿತಿಗಳೇ ಹೆಚ್ಚಾಗಿ ಪ್ರತಿಫಲಿತವಾಗಿದೆ. ಕರ್ನಲ್ ಮೆಕೆಂಝಿ ಸಂಗ್ರಹದ ಕೈಫಿಯತ್ತುಗಳಲ್ಲಿ ಅಸ್ಪಷ್ಟ, ಅನಗತ್ಯ ಮತ್ತು

ಪೂರ್ವಾಗ್ರಹಪೀಡಿತ ಹೇಳಿಕೆಗಳೇ ಹೆಚ್ಚಾಗಿವೆ. ಆದ್ದರಿಂದ ಅಂತರಶಿಸ್ತೀಯ ಅಧ್ಯಯನಕ್ಕೆ ಅವಕಾಶ ಬೇಕು ಎನ್ನುವ ಧ್ವನಿಗಳೂ ಇವೆ. ಕರ್ನಲ್ ಕಾಲಿನ್ ಮೆಕೆಂಝಿ ಸಂಗ್ರಹದ ಕೈಫಿಯತ್ತುಗಳು ದೊರಕಿಸಿ ಕೊಟ್ಟಿರುವ ಮಾಹಿತಿಯ ಆಕರಗಳನ್ನು ಮತ್ತೊಮ್ಮೆ ತೌಲನಿಕ ನೆಲೆಗಳಿಂದ  ಅಧ್ಯಯನ ನಡೆಸಬೇಕು ನಂತರವಷ್ಟೇ ಕನ್ನಡ ನಾಡಿನ ಇತಿಹಾಸದ ಪುನರ್ ರಚನೆಗೆ ಬಳಸಿಕೊಳ್ಳಬೇಕು ಎಂಬ ವಿಮರ್ಶೆಯೂ ಇದೆ.

ಕರ್ನಲ್ ಮೆಕೆಂಝಿಗೆ ಆಕರಗಳ ಸಂಗ್ರಹದಲ್ಲಿ ಮಹತ್ವದ ಪಾತ್ರವಹಿಸಿದ ಕಾವಲಿ ವೆಂಕಟ ಬೋರಯ್ಯ ಸಹೋದರರು ಮತ್ತು ಅವರ ಸಾಹಿತ್ಯಿಕ ಸೇವೆಗಳ ಕುರಿತು ಆಳದ ಆಧ್ಯಯನದ ಅಗತ್ಯತೆ ಇದೆ.ಇತಿಹಾಸದ ಸಂಶೋಧನಾ ದೃಷ್ಟಿಯಿಂದ ಕರ್ನಲ್ ಮೆಕೆಂಝಿ ಸಂಗ್ರಹಿಸಿದ ರೇಖಾ ಚಿತ್ರಗಳ ಕುರಿತು ಬಹಳ ತಳಸ್ಪರ್ಶಿ ಅಧ್ಯಯನದ ಅಗತ್ಯವಿದೆ. ಪ್ರಾಚೀನ ಲೇಖನ ಸಾಮಾಗ್ರಿಗಳ ಕುರಿತು ಕರ್ನಲ್ ಮೆಕೆಂಝಿ ಸಮಗ್ರಹಿಸಿದ ಮಾಹಿತಿಯೇಬಹಳಷ್ಟಿದೆ· ಅವುಗಳ ಕುರಿತು ವಸ್ತುನಿಷ್ಟವಾಗಿ ಸಂಶೋಧನೆ ಆಗಬೇಕಿದೆ ಜೊನಾಥನ್ ಡಂಕನ್ ಸ್ಥಾಪಿಸಿದ ಮೊಟ್ಟ ಮೊದಲ ಸಾರ್ವಜನಿಕ ಗ್ರಂಥಾಲಯ ಅದರ ನಿರ್ವಹಣೆ ಅದರ ಸಾಹಿತ್ಯಿಕ ಕೊಡುಗೆಗಳು ಕುರಿತು ಮತ್ತಷ್ಟು ಮಾಹಿತಿ ಕಲೆ ಹಾಕಬಹುದಾಗಿದೆ.[೧] ಲಾರೆನ್ ಹೇಸ್ಟಿಂಗ್ಸ್ ಭಾರತದಲ್ಲಿ ಕೈಗೊಂಡ ಹಲವು ನಿರ್ಧಾರಗಳು ಭಾರತದ ಇತಿಹಾಸ ಸಂಶೋಧೆನಗೆ ಪೂರಕವಾಗಿದ್ದವು. ಸ್ಮಾರಕ ಸಂರಕ್ಷಣೆಯ ವಿಷಯದಲ್ಲಿ ಆತನು ಕೈಗೊಂಡ ಕೆಲವು ಪತ್ರ ವ್ಯವಹಾರಗಳ ಕುರಿತು ಇನ್ನೂ ಮಾಹಿತಿಗಳು ಲಭ್ಯವಿದ್ದು, ಅಧ್ಯಯನಕ್ಕೆ ಒಳಪಡಬೇಕಾಗಿದೆ. ಮದ್ರಾಸ್ ಲಿಟರರಿ ಸೊಸೈಟಿ ಮತ್ತು ಇತಿಹಾಸ ಸಂಶೋಧನೆಯಲ್ಲಿ ಅದರ ಪಾತ್ರ ಕುರಿತು ಮತ್ತಷ್ಟು ಸಂಶೋಧನೆಗೆ ಅವಕಾಶವಿದೆ. ಮೈಸೂರಿನಲ್ಲಿ ಮಹಾರಾಜಾ ಹೈಸ್ಕೂಲು ಮತ್ತು ಫಿಲೋಮಿನ ಶಾಲೆ ಮತ್ತು ಆಂಗ್ಲ ಮಾದರಿಯ ಶಿಕ್ಷಣ ಕಲಿಕೆ ಪ್ರಭಾವ ಕುರಿತು ಮತ್ತಷ್ಟು ಅಧ್ಯಯನದ ಅವಶ್ಯಕತೆ ಇದೆ.[೨]

ಕರ್ನಲ್ ಮೆಕೆಂಝಿಯ ಕಾರ್ಯದಲ್ಲಿ ಅವರಿಗೆ ಭಾಷಾಂತರದ ನೆರವಿಗೆ ಅಷ್ಟೇ ಅಲ್ಲದೇ ಅವರ ಸಹಾಯಕರಾಗಿ, ಅವರ ಅನುವಾದಕರಾಗಿ ಮತ್ತು ಸಂಶೋಧಕರಾಗಿ ದುಡಿದವರು ಕಾವಲಿ ಸಹೋದರರು. ಒಟ್ಟು ಮೂರು ಜನ. ಮೂವರೂ ಸಹ ಉತ್ತಮ ವಿದ್ವಾಂಸರಾಗಿದ್ದರು. ಸಂಗ್ರಹಕಾರನಾಗಿ ಕರ್ನಲ್ ಮೆಕೆಂಝಿಗೆ ಬೇಕಾದ ಸಂಶೋಧನಾ ನೆರವು ನೀಡಿದವರು ಈ ಸಹೋದರರು. ಇವರು ಸಾವಿರಾರು ಶಾಸನಗಳು, ತಾಳೆಗರಿಗಳು, ಹಸ್ತ ಪ್ರತಿಗಳು, ಪುರಾಣಗಳು ಮತ್ತು ನಾಣ್ಯಗಳನ್ನು ಓದುವಲ್ಲಿ ಕರ್ನಲ್ ಮೆಕೆಂಝಿಗೆ ಸಹಕರಿಸಿದವರು. ಇವರ ಕುರಿತು ಹೆಚ್ಚಿನ ಅಧ್ಯಯನ ಆಗ ಬೇಕಿದೆ.

ಕರ್ನಲ್ ಮೆಕೆಂಝಿ ಸಂಗ್ರಹದ ಬಹು ಮುಖ್ಯ ಸಾಮಗ್ರಿಗಳಲ್ಲಿ ಅವರು ಸಂಪಾದಿಸಿದ ೧೦೦೦ ಕ್ಕೂ ಮಿಗಿಲಾದ ಕೈಯಿಂದ ಬರೆದ ಚಿತ್ರಗಳು ಇವೆ. ತಾನು ಸಂಗ್ರಹಿಸಿದ ಮಾಹಿತಿಗಳನ್ನು ಮತ್ತು ತಾನು ಭೇಟಿ ನೀಡಿದ ದೇವಾಲಯಗಳ ಚಿತ್ರಗಳನ್ನು ಸ್ವತಃ ಕರ್ನಲ್ ಮೆಕೆಂಝಿ ಅವರೇ ಗೆರೆ / ಗೀರು ಚಿತ್ರಗಳಲ್ಲಿ ದಾಖಲಿಸಿರುವುದು ಇತಿಹಾಸದ ದೃಷ್ಟಿಯಿಂದ ಮತ್ತು ಸಂಶೋಧನಾ ದೃಷ್ಟಿಯಿಂದ ಬಹಳ ಪ್ರಾಮುಖ್ಯತೆ ಗಳಿಸಿದೆ. ಅಲ್ಲದೆ ಈ ಚಿತ್ರಗಳ ಹಿನ್ನೆಲೆ ಗಮನಿಸಿದಾಗ ಅಂದಿನ ಕಾಲದಲ್ಲಿ ದೇವಾಲಯಗಳ ಸಮಗ್ರ ಕಾರ್ಯ ಚಟುವಟಿಕೆಗಳ ಮೇಲೆ ಬೆಳಕು ಬೀರುವುದು. 'ದೇವಚಂದ್ರ' ಎಂಬ ಜೈನಕವಿಯ ಜ್ಞಾನ ಭಂಡಾರವು ಪ್ರಕಾಶಗೊಳ್ಳಲು ಪ್ರೇರಣೆ ನೀಡಿದವರು ಕರ್ನಲ್ ಮೆಕೆಂಝಿ. ಈ ಅಂಶವನ್ನು ದೇವಚಂದ್ರನು ತನ್ನ ರಾಜಾವಳಿ ಕಥಾಸಾರ ಎಂಬ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ. ಹಾಗಾಗಿ ಇವನ ಕುರಿತು ಮತ್ತಷ್ಟು ಆಳದ ಸಂಶೋಧನೆಯ ಅಗತ್ಯವಿದೆ.

ಪ್ರಾಚೀನ ಕಾಲದಲ್ಲಿ ಜ್ಞಾನವನ್ನು ಬರಹದ ರೂಪದಲ್ಲಿ ಸಂಗ್ರಹಿಸುವ ಮನೋಸ್ಥಿತಿ ಅನೇಕ ವೈವಿದ್ಯಮಯ ಬರಹ ಸಾಮಗ್ರಿಗಳ ಶೋಧನೆಗೆ ಕಾರಣವಾಯಿತು. ತನ್ನ ಜ್ಞಾನದ ಅನುಭವವನ್ನು ತಾಳೆಗರಿಗಳು, ಭೂರ್ಜಪತ್ರಗಳು, ಜೇಡಿಮಣ್ಣಿನ ಫಲಕಗಳು, ಚರ್ಮದ ರಟ್ಟುಗಳು, ಗಟ್ಟಿಶಿಲೆಗಳು, ಬಂಡೆಗಲ್ಲುಗಳು, ತಾಮ್ರದ ಹಾಳೆಗಳು, ಬೆಳ್ಳಿಯ ಕರಂಡಕ ಪಾತ್ರೆಗಳು, ಸುಟ್ಟ ಮಣ್ಣಿನ ಫಲಕಗಳು, ಒರಟು ಬಟ್ಟೆಗಳು ಇತ್ಯಾದಿಗಳ ಮೇಲೆ ಬರೆಯುವ ಪದ್ಧತಿ ಇದ್ದಿತು ಕರ್ನಲ್ ಮೆಕೆಂಝಿ ಈ ಎಲ್ಲಾ ರೂಪದ ಬರಹಗಳನ್ನು ಆಧರಿಸಿ ಸ್ಥಳೀಯ ಇತಿಹಾಸ ರಚನೆಗೆ ಆದ್ಯತೆ ನೀಡಿದ್ದು ಬಹಳ ಮಹತ್ವದ ಕಾರ್ಯವಾಗಿದೆ. ಸ್ಥಳೀಯ ಜ್ಞಾನಾಕಾಂಕ್ಷಿಯಾಗಿ ಭಾರತಕ್ಕೆ ಬಂದಿದ್ದ ಲಾರೆನ್ ಹೇಸ್ಟಿಂಗ್ಸ್ ತನ್ನ ಅಧಿಕಾರಾವಧಿಯಲ್ಲಿ ಹಲವು ಐತಿಹಾಸಿಕ ನಿರ್ಣಯಗಳಿಗೆ ಸಾಕ್ಷಿಯಾಗಿದ್ದನು. ಅವನು ಭಾರತೀಯ ವಿಚಾರಧಾರೆಗಳಿಂದ ಪ್ರಭಾವಿತನಾಗಿದ್ದನು. ಕ್ರಿ.ಶ. ೧೮೨೧ರಲ್ಲಿ ಕರ್ನಲ್ ಮೆಕೆಂಝಿ ಅವರು ಮರಣಿಸಿದಾಗ ಅವನ ಹೆಂಡತಿ ಪೆಟ್ರೋನೆಲ್ಲಾ ಅವರಿಂದ ಹತ್ತು ಸಾವಿರ ಪೌಂಡ್ ಹಣ ಕೊಟ್ಟು ಗವರ್ನರ್ ಜನರಲ್ ಲಾರ್ಡ್ ಹೇಸ್ಟಿಂಗ್ಸ್ ಅವನ ಎಲ್ಲಾ ಸಂಗ್ರಹಗಳನ್ನೂ ಕೊಂಡು ಕೊಂಡನು. ಇದಕ್ಕೆ ಕೋರ್ಟ್ ಆಫ್ ಡೈರೆಕ್ಟರ್ಸ್ ಅವರ ಪೂರ್ವಾನುಮತಿ ಪಡೆಯಲು ತನ್ನ ಅಧಿಕಾರದ ಅವಧಿಯಲ್ಲಿ ಪತ್ರವ್ಯವಹಾರ ನಡೆಸಿದನು. ಕರ್ನಲ್ ಮೆಕೆಂಝಿ ಅವರ ಐತಿಹಾಸಿಕ ದಾಖಲೆಗಳನ್ನು ಸಂರಕ್ಷಿಸಲು ಅನುವು ಮಾಡಿ ಕೊಡಬೇಕೆಂದು ಪತ್ರ ಮುಖೇನ ಕೋರ್ಟ್ ಆಫ್ ಡೈರೆಕ್ಟರ್‌ನ ಅನುಮತಿ ಕೋರಿದನು. ಇವನ ಈ ಮನವಿಯನ್ನು

ಕೋರ್ಟ್ ಆಫ್ ಡೈರೆಕ್ಟರ್‌ನ ಸದಸ್ಯರು ಅನುಮೋದಿಸಿದರು. ಇದು ಭವಿಷ್ಯದಲ್ಲಿ ಬ್ರಿಟಿಷ್ ವಸಾಹತುಶಾಹಿ ಸರ್ಕಾರ ಪುರಾತತ್ವ ವಿಷಯಗಳ ಶಾಸ್ತ್ರೀಯ ಅಧ್ಯಯನಕ್ಕೆ ನಾಂದಿ ಹಾಡಲು ಮೂಲ ಪ್ರೇರಕವಾಯಿತು.

ಮದ್ರಾಸ್ ಲಿಟರರಿ ಸೊಸೈಟಿ ಇತಿಹಾಸ ಸಂಶೋಧನಾ ಕ್ಷೇತ್ರದ ಮತ್ತೊಂದು ಅದ್ಭುತ ಸಂಘಟನೆಯಾಗಿ ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಮುಖವೆನಿಸಿದೆ. ವೆಂಕಟ ಲಕ್ಷ್ಮಯ್ಯ ಬೋರಯ್ಯ ಇವರು ಮದ್ರಾಸ್ ಲಿಟರರಿ ಸೊಸೈಟಿಗೆ ಸದಸ್ಯರಾದ ಮೊಟ್ಟ ಮೊದಲ ಲೇಖಕರು. ಇದಕ್ಕೆ ಬೆಂಬಲವಾಗಿದ್ದವರು ಕರ್ನಲ್ ಮೆಕೆಂಝಿ ಎಂದು ಹೇಳಬಹುದು.

## ೫.೨ ಆಕರಗಳಸಂಗ್ರಹದ ಪ್ರಭಾವ

ಕರ್ನಲ್ ಮೆಕೆಂಝಿ ಅವರ ಕಾರ್ಯಸಾಧನೆಯ ವಿದ್ವತ್ ಪ್ರೇರಣೆ ಇತಿಹಾಸದ ಆಕರಗಳನ್ನು ಸಂಗ್ರಹಿಸುವ, ಸಂರಕ್ಷಿಸುವ ಮತ್ತು ಸಂಪಾದಿಸುವ ಪುರಾತತ್ವಜ್ಞರ ಒಂದು ಸಮೂಹವೇ ಸೃಷ್ಟಿಯಾಗಲು ಮೂಲ ಪ್ರೇರಣೆಯಾಯಿತು. ಶಾಸನಗಳನ್ನು ಸಂಗ್ರಹಿಸುವುದು ಅವುಗಳ ಭಾಷಾನುವಾದ ಮಾಡುವುದು, ಪಠ್ಯಾಂತರ ಮಾಡುವುದು, ಪ್ರತಿ ಮಾಡುವುದು, ಇವೇ ಮೊದಲಾದ ಕಾರ್ಯಗಳಲ್ಲಿ ನೈಪುಣ್ಯತೆ ಸಾಧಿಸಿದ ಪುರಾತತ್ವಜ್ಞರ ಸಮೂಹ ಭಾರತಾದ್ಯಂತ ಸಂಚಲನಾತ್ಮಕವಾದ ಕಾರ್ಯದಲ್ಲಿ ತೊಡಗಿಸಿಕೊಂಡಿತು. ನಾಣ್ಯಗಳ ಸಂಗ್ರಹ, ಶಿಲಾಯುಧಗಳ ಸಂಗ್ರಹ, ಪ್ರಾಚೀನ ಅವಶೇಷಗಳ ಸಂಗ್ರಹ ಇವೇ ಮೊದಲಾದ ಕಾರ್ಯದಲ್ಲಿ ಸಕಾರಾತ್ಮವಾಗಿ ತೊಡಗಿಕೊಂಡ ಕಾರ್ಯಪಡೆ ಸಿದ್ದವಾಗಲು ಕರ್ನಲ್ ಮೆಕೆಂಝಿ ಅವರ ಪ್ರಾಥಮಿಕ ಸಂಗ್ರಹ ಕಾರ್ಯಗಳೇ ಮೂಲ ಪ್ರೇರಣೆಯಾಯಿತು. ಭಾರತದ ಇತಿಹಾಸವನ್ನು ಅರಿಯುವ, ಆಳವಾಗಿ ಅಧ್ಯಯನದಲ್ಲಿ ತೊಡಗಿಕೊಳ್ಳುವ ಸಂಕಲ್ಪಿತ ಮನಸ್ಸುಗಳನ್ನು ಹೊಂದಿದ ಯುವ ಸಮೂಹವನ್ನು ಇದು ಸೃಷ್ಟಿಸಿತು. ಭಾರತದ ರಾಷ್ಟ್ರೀಯ ಹೋರಾಟವಾದ ಸ್ವತಂತ್ರ್ಯ ಚಳುವಳಿಯಲ್ಲಿ ಯುವ ಸಮೂಹದೊಂದಿಗೆ ವಿವಿಧ ಸ್ಥರದ ಜನರು ಪಾಲ್ಗೊಳ್ಳಲು ಕರ್ನಲ್ ಮೆಕೆಂಝಿಯ ಆರಕಗಳ ಸಂಗ್ರಹದಿಂದ ದೇಶಪ್ರೇಮದ ಭಾವನೆಯಿಂದ ಪ್ರೇರಿತರಾಗಿ ದೇಶ ಕಟ್ಟುವ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಮುಂದಾದರು. ಇದು ಭಾರತ ರಾಷ್ಟ್ರಿಯ ಚಳುವಳಿಗೆ ದೊಡ್ಡ ಮಾರ್ಗವಾಯಿತು.

ಭಾರತದ ಇತಿಹಾಸವನ್ನು ಹೊಸ ದೃಷ್ಟಿಕೋನದಿಂದ ನೋಡುವ ಕೆಲಸ ಮುಂದುವರಿದಂತೆ ಭಾರತೀಯರೂ ಸಹ ಇತಿಹಾಸದ ಬೆಳವಣಿಗೆಯ ಹಾದಿಯನ್ನು

ಪುನರ್ ಅವಲೋಕಿಸುವಂತಾಯಿತು. ಭಾರತದ ಸಮೃದ್ಧ ಇತಿಹಾಸವನ್ನು ವಿವಿಧ ಆಯಾಮಗಳಿಂದ ಪುನರ್ ಮನನ ಮಾಡಿಕೊಳ್ಳಲು ಮುಂದಾದ ಈ ಯುವ ಜನತೆ ಪ್ರಜ್ಞಾಪೂರ್ವಕವಾಗಿ ಭಾರತವನ್ನು ವಸಾಹತುಶಾಹಿ ಆಡಳಿತದ ದಾಸ್ಯಶೃಂಖಲೆಗಳಿಂದ ಮುಕ್ತವಾಗಿಸಿ ಹೊಸ ದೇಶ ಹೊಸ ಇತಿಹಾಸವನ್ನು ಕಟ್ಟುವ ಕಾರ್ಯದಲ್ಲಿ ಮಗ್ನರಾದರು. ಆಂಗ್ಲ ಪುರಾತತ್ವಜ್ಞರೊಡನೆ ಸೇರಿಕೊಂಡು ತಾವೂ ಸಂಶೋಧನೆಗಳನ್ನು ಕೈಗೊಂಡರು. ಆರ್.ಶಾಮಶಾಸ್ತ್ರಿಗಳು, ನರಸಿಂಹ ಶಾಸ್ತ್ರಿಗಳು, ಕೃಷ್ಣಶಾಸ್ತ್ರಿಗಳು, ಮೊದಲಾದವರ ಸಂಶೋಧನೆ ಕಾರ್ಯ ಸಾಧನೆಗಳು ಇದಕ್ಕೆ ಪುಷ್ಟಿಕೊಡುತ್ತವೆ. ಇವರೊಂದಿಗೆ, ಎಮ್.ಎಚ್.ಕೃಷ್ಣ, ಎನ್.ಲಕ್ಷ್ಮೀನಾರಾಯಣ್ ರಾವ್, ಆರ್.ಎಸ್.ಪಂಚ ಮುಖಿ, ಪಿ.ಬಿ.ದೇಸಾಯಿ, ಬಾ.ರಾ.ಗೋಪಾಲ್, ಎಂ.ಶೇಷಾದ್ರಿ, ಜಿ.ಎಸ್. ಗಾಯಿ, ಶ್ರೀನಿವಾಸರಿತ್ತಿ.ಎಸ್, ಇ.ಸಿ.ನಂದೀಮಠ, ಕೆ.ಜಿ.ಕುಂದಣಗಾರ ಮೊದಲಾದವರು ಶಾಸನಗಳ ಕುರಿತು ಪುನರ್ ಅಧ್ಯಯನ ಮಾಡುವುದೂ ಸಹ ಇದರಿಂದ ಪ್ರೇರಿತವಾದ ಕಾರ್ಯ.

ಕರ್ನಲ್ ಮೆಕೆಂಝಿ ಅವರ ಕೈಫಿಯತ್ತುಗಳ ಪ್ರಾಮುಖ್ಯತೆ ಇತರೆ ಇತಿಹಾಸ ಅಧ್ಯಯನದ ಆಕರಗಳಿಗಿಂತ ಭಿನ್ನ ಮತ್ತು ಪೂರಕ ಆಕರವಾಗಿ ಲಭ್ಯವಾಗಿದ್ದು, ಮುಂಬರುವ ಯುವ ಸಂಶೋಧಕರಿಗೆ ಮಹತ್ವದ ಆಕರಗಳಾಗಿವೆ. ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಮೂಲಕ ದೊರೆತಿರುವ ಮಾಹಿತಿಗಳು ಕರ್ನಾಟಕ ಇತಿಹಾಸ ಪುನರ್ ರಚಿಸಿಲು ಬಹಳ ಸಹಕಾರಿಯಾಗಿವೆ. ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಮೂಲಕ ಕರ್ನಾಟಕವನ್ನು ಆಳಿದ ನಂದ, ಗಂಗ, ಚಾಲುಕ್ಯ, ಕದಂಬ, ಚೋಳ, ಕಲಚೂರಿ, ಹೊಯ್ಸಳ, ಕಂಪಿಲ, ವಿಜಯನಗರ, ಒಡೆಯರ್, ಹೈದರಾಲಿ, ಟಿಪ್ಪು ಸುಲ್ತಾನ್ ಮತ್ತು ಸ್ಥಳೀಯ ಪಾಳೇಗಾರರ ಕುರಿತು ದೊರೆಯುವ ಮಾಹಿತಿ ಇತಿಹಾಸದ ಕೊಂಡಿಗಳನ್ನು ಕಾಲಾನುಕ್ರಮದಲ್ಲಿ ಬೆಸೆಯಲು ಅತ್ಯಂತ ಉಪಯುಕ್ತವಾಗಿದೆ. ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಮಾಹಿತಿಯ ಭಂಡಾರದಲ್ಲಿ ಹೊಯ್ಸಳರ ಬಗ್ಗೆ ವಿಸ್ತೃತವಾಗಿ ಮಾಹಿತಿ ಇದೆ ಹಾಗೂ ಮೌರ್ಯ ಅರಸರ ಸಾಮ್ರಾಜ್ಯದ ವಿಸ್ತಾರದ ಬಗ್ಗೆ ವಿಶೇಷವಾಗಿ ದಕ್ಷಿಣ ಭಾರತದ ಉಲ್ಲೇಖವು ಇದೆ.

ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳಲ್ಲಿ ವಿಜಯನಗರ ಕಾಲದ ಮಾಹಿತಿ ಇವರ ಬಗ್ಗೆ ವಸ್ತುನಿಷ್ಠವಾಗಿ ಅಧ್ಯಯನ ಮಾಡಲು ಸಹಾಯಕವಾಗಿದೆ. ಅಲ್ಲದೆ ಈ ಕೈಫಿಯತ್ತುಗಳಲ್ಲಿ ನಂದ ಅರಸರ ಹೆಸರುಗಳಲ್ಲಿ ಕೆಲವು ಬದಲಾವಣೆ ಇದ್ದರೂ ನಂದರ ಕಾಲದಲ್ಲಿ ಆಡಳಿತ ದೃಷ್ಟಿಯಿಂದ ಕರ್ನಾಟಕದ ಸಂಬಂಧಗಳ ಬಗ್ಗೆ

ಉಲ್ಲೇಖವಿದೆ. ನಂದ ಅರಸರು ಮತ್ತು ಅಂದಿನ ಕರ್ನಾಟಕದ ಜೊತೆ ಪ್ರಾದೇಶಿಕ ಮತ್ತು ಆಡಳಿತಾತ್ಮಕ ಸಂಬಂಧಗಳ ಕುರಿತು ಮಾಹಿತಿ ದೊರೆಯುವುದೂ ಸಹ ಕರ್ನಾಟಕ ಇತಿಹಾಸವನ್ನು ಕ್ರಿಸ್ತ ಪೂರ್ವ ಯುಗದಿಂದ ಆರಂಭವಾಗುತ್ತದೆ. ಸಣ್ಣ-ಪುಟ್ಟ ಸ್ಥಳೀಯ ಅರಸರ ಬಗ್ಗೆಯೂ ಕುರಿತು ಮಾಹಿತಿ ಹೊರಹಾಕುವ ಈ ಕೈಫಿಯತ್ತುಗಳ ವಿಷಯ ವಿಸ್ತಾರ ಸಂಶೋಧನೆಗೆ ಸಹಾಯಕವಾಗಿದೆ.

ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಭಾಗವಾಗಿ ರಾಜಕೀಯ ಮೇಲಾಟಗಳು, ಪಿತೂರಿಗಳು ಮತ್ತು ರಾಜಕೀಯ ಪ್ರೇರಿತ ಒಳಸಂಚುಗಳು ಹೆಚ್ಚು ವರ್ಣಿತವಾಗಿರುವುದು ಜನ ಸಾಮಾನ್ಯರ ಮೇಲೆ ಅಂತಹ ಘಟನೆಗಳೂ ಬೀರಿದ ಪ್ರತಿಕೂಲ ಪ್ರಭಾವವನ್ನು ಪ್ರತಿಫಲಿಸುತ್ತದೆ. ಇತರೆ ಇತಿಹಾಸದ ಆಕರಗಳಲ್ಲಿ ತೀರಾ ನಿರ್ಲಕ್ಷಕ್ಕೆ ಒಳಗಾಗಿರುವ ಕಂಪಿಲ ಅರಸರ ಬಗ್ಗೆ ಮಾಹಿತಿ ದೊರೆಯುವುದು ಕರ್ನಾಟಕದ ಪ್ರಾದೇಶಿಕ ರಾಜಕೀಯ ಸ್ಥಿತ್ಯಂತರಗಳ ಪ್ರಭಾವವೇ ಆಗಿದೆ. ರಕ್ಕಸತಂಗಡಿ ಯುದ್ಧದ ನಂತರ ಸಾಮಾನ್ಯ ಜನ ಜೀವನ ಏರು-ಪೇರಾದುದರ ಕುರಿತು ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಮೂಲಕವೇ ಮಾಹಿತಿ ದೊರಕುತ್ತದೆ.

ಕನ್ನಡ ನಾಡಿನ ಇತಿಹಾಸದಲ್ಲಿ ವಿಜಯನಗರೋತ್ತರ ಕಾಲ ರಾಜಕೀಯವಾಗಿ ಬಹಳ ಮಹತ್ವದ್ದು. ಈ ಕಾಲವು ಕೇಂದ್ರೀಕೃತ ಆಡಳಿತ ವಿಘಟನೆ ಗೊಂಡು ಹಲವಾರು ಸಣ್ಣಪುಟ್ಟ ನಾಯಕರ ನಾಯಕತ್ವದ ಪಾಳೆಪಟ್ಟುಗಳ ಉದಯಕ್ಕೆ ಕಾರಣವಾಗಿದೆ. ತರೀಕರೆ, ಚಿತ್ರದುರ್ಗ, ಕೆಳದಿ ಮೊದಲಾದ ಪಾಳೆಯಪಟ್ಟುಗಳ ಬೆಳವಣಿಗೆಗೆ ಹೇಗೆ ಕಾರಣವಾಯಿತು[೩] ಎಂಬ ಕುರಿತು ಮಾಹಿತಿ ಇದ್ದು, ಇದು ಉತ್ತರ ಮತ್ತು ದಕ್ಷಿಣ ಭಾರತದ ತದ್ವಿರುದ್ದ ರಾಜಕೀಯ ಪರಿಸ್ಥಿತಿಗಳಿಗೆ ಕೈಗನ್ನಡಿಯಂತಿದೆ. ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಮೂಲಕ ಸ್ತ್ರೀಯರು ರಾಜಕೀಯ ಕ್ಷೇತ್ರದಲ್ಲಿ ಹೊಂದಿದ್ದ ಸಮಕಾಲೀನ ಸ್ಥಾನಮಾನಗಳು ಮತ್ತು ಆಡಳಿತಾತ್ಮಕ ಕಾರ್ಯಗಳಲ್ಲಿ ಸ್ವಯಂಪ್ರೇರಿತರಾಗಿ ಪಾಲ್ಗೊಳ್ಳುವಿಕೆ ಕುರಿತು ಅತ್ಯುಪಯುಕ್ತವಾದ ಮಾಹಿತಿ ಇದ್ದು ಇತರೆ ಶಾಸನಾಧಾರಗಳಿಗೆ ಪೂರಕವಾಗಿದೆ. ಕರ್ನಲ್ ಮೆಕೆಂಝಿ ಅವರ ಈ ಕೈಫಿಯತ್ತುಗಳ ಮೂಲಕ ದೊರೆಯುವ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿನ ಯುಧ್ಧೋತ್ಸಾಹ ಮತ್ತು ರಣತಂತ್ರಗಳ ಮಾಹಿತಿ ಅಪೂರ್ವವಾದುದೂ ಸಹ ಅನನ್ಯವಾದ ಇತಿಹಾಸಿಕ ಅಂಶಗಳನ್ನು ಒಳಗೊಂಡಿದ್ದೂ ಆಗಿದೆ.[೪]

## ೫.೩ ಆಕರಗಳು ನೀಡುವ ಸಂದೇಶ

ಕರ್ನಲ್ ಮೆಕೆಂಝಿ ಅವರ ಸಂಶೋಧನೆಗಳು ಆಧುನಿಕ ಇತಿಹಾಸ ಪುನರ್ರಚನೆಯ ಸಂದರ್ಭದಲ್ಲಿ ಆಧುನಿಕ ಸಂಶೋಧಕರಿಗೆ ಬಹಳಷ್ಟು ಪಾಠಗಳನ್ನು ಕಲಿಸುತ್ತವೆ. ಇತಿಹಾಸದ ರಚನೆಯಲ್ಲಿ ದೊರೆಯುವ ಯಾವುದೇ ಆಕರವನ್ನು ಆಧುನಿಕ ಇತಿಹಾಸ ಸಂಶೋಧಕ ನಿರ್ಲಕ್ಷಿಸಬಾರದು. ದೊರಕಿದ ಆಕರಗಳನ್ನು ವಿಶ್ಲೇಷಣೆಗೊಳಪಡಿಸಬೇಕು. ಅವುಗಳ ಕಾಲ, ಸ್ಥಳ, ವ್ಯಕ್ತಿ ಸಂಬಂಧಿಸಿದಂತೆ ವಸ್ತುನಿಷ್ಠವಾಗಿ ಅಧ್ಯಯನಕ್ಕೆ ಒಳಪಡಿಸಬೇಕು. ಇತಿಹಾಸದ ರಚನೆಯಲ್ಲಿ ಪೂರಕವಾದ ಆಕರಗಳನ್ನು ಸಂಗ್ರಹಿಸುವುದು ಯಾವುದೇ ಆಧುನಿಕ ಇತಿಹಾಸ ಸಂಶೋಧಕನ ಉದ್ದೇಶವಾಗಿರಬೇಕು. ಇತಿಹಾಸದ ರಚನೆಯಲ್ಲಿ ನಿರ್ದೇಶಿತ ಗುರಿಸಾಧನೆಯಲ್ಲಿ ಸಂಶೋಧಕ ತಾಳ್ಮೆಯಿಂದ ಕಾರ್ಯ ನಿರ್ವಹಿಸಬೇಕು. ಈ ಕಾರ್ಯದಲ್ಲಿ ಕರ್ನಲ್ ಮೆಕೆಂಝಿಯ ಜೀವನವೇ ಉತ್ತಮ ಉದಾಹರಣೆಯಾಗಿದೆ. ಇತಿಹಾಸದ ಪುನರ್ ರಚನೆಗೆ ಅವಕಾಶ ನೀಡುವ ಯಾವುದೇ ಮಾಹಿತಿಂಯನ್ನು ಆಧುನಿಕ ಇತಿಹಾಸ ಸಂಶೋಧಕ ಕಡೆಗಣಿಸಬಾರದು. ಆ ಮಾಹಿತಿಯನ್ನು ಪ್ರಾಥಮಿಕ ದ್ವಿತೀಯ ಆಕರಗಳನ್ನಾಗಿ ವಿಂಗಡಿಸಿ ಹೆಚ್ಚಿನ ಸಂಶೋಧನೆಗೆ ಒಳಪಡಿಸುವ ಮೂಲಕ ಇತಿಹಾಸ ರಚನೆಗೆ ಮಹತ್ವದ ಕೊಡುಗೆ ನೀಡಬಹುದು.

ದೊರೆಕುವ ಇತಿಹಾಸದ ಮಾಹಿತಿಗಳನ್ನು ಇತರೆ ಜನಪ್ರಿಯ ಮಾಹಿತಿ ಆಕರಗಳೊಂದಿಗೆ ತೌಲನಿಕವಾಗಿ ತುಲನೆ ಮಾಡದೇ ದೊರಕುವ ಎಲ್ಲಾ ಮಾಹಿತಿಯನ್ನು ಸಂಗ್ರಹಿಸುತ್ತಾ ಹೋಗಬೇಕು. ಅದು ಮೌಖಿಕ ಮಾಹಿತಿಯಾಗಿದ್ದರೆ ಇನ್ನೂ ಹೆಚ್ಚು ಜನರಿಂದ ಅದನ್ನು ಸಂಗ್ರಹಿಸಬೇಕು ಹಾಗೂ ವಸ್ತುನಿಷ್ಠವಾಗಿ ವಿಶ್ಲೇಷಿಸಿ ದಾಖಲಿಸಬೇಕು. ಸ್ಥಳೀಯರಿಂದ ಲಭ್ಯವಾಗುವ ಆಸಕ್ತಿ ಕೆರಳಿಸುವಂತಹ ಮಾಹಿತಿಗಳನ್ನು, ಇತಿಹಾಸದ ಗತಿ ಬದಲಿಸುವ ಮಾಹಿತಿಗಳನ್ನು, ಹೊರ ಜಗತ್ತಿಗೆ ಪ್ರಕಾಶಿತವಾಗಿಲ್ಲದ ಮಾಹಿತಿಯನ್ನು ಆಧುನಿಕ ಇತಿಹಾಸ ಸಂಶೋಧಕ ಕಾಲಾನುಕ್ರಮದಲ್ಲಿ ದಾಖಲಿಸಬೇಕಾಗಿದೆ. ಇತಿಹಾಸದ ರಚನೆಯಲ್ಲಿ ಇತಿಹಾಸದ ವಿವಿಧ ಆಕರದ ಮೂಲಗಳನ್ನು ಪರಿಶೋಧಿಸುವ ಪ್ರವೃತ್ತಿಗೆ ಜನ ಸಮುದಾಯಗಳು ಪೂರಕವಾಗಿ ಸ್ಪಂದಿಸುವಂತಹ ಮನೋವೃತ್ತಿಯನ್ನು ಆಧುನಿಕ ಇತಿಹಾಸ ಸಂಶೋಧಕ ಮುಕ್ತವಾಗಿ ಚರ್ಚಿಸಬೇಕು. ಅದಕ್ಕಾಗಿ ಆಧುನಿಕ ಇತಿಹಾಸ ಸಂಶೋಧಕ ಆಸಕ್ತಿಯಿಂದ ಇತಿಹಾಸದ ಹೊರ ಮತ್ತು ಒಳ ಹರಿವುಗಳನ್ನು ಸಮಗ್ರವಾಗಿ ಅಭ್ಯಸಿಸಿ ಮಾಹಿತಿ ಸಂಗ್ರಹ ಕಾರ್ಯದಲ್ಲಿ ತೊಡಗಿಕೊಳ್ಳಬೇಕು

ಅಪ್ರಯೋಜಕ, ಅನುಪಯುಕ್ತ, ಅನಗತ್ಯ ಮಾಹಿತಿಗಳು ಎಂಬದು ಇತಿಹಾಸದಲ್ಲಿ ಇಲ್ಲ. ಹಾಗಾಗಿ ಯಾವುದೇ ಕೆಲಸಕ್ಕೆ ಬಾರದ ಮಾಹಿತಿಗಳು ಎಂದು ಲಘುವಾಗಿ ಪರಿಗಣಿಸಿಕೊಂಡಿರುವ ಮಾಹಿತಿಗಳೂ ಸಹ ಇತಿಹಾಸದ ಪುನರ್ ನಿರ್ಮಾಣದಲ್ಲಿ ಬಹಳ ಉಪಯೋಗಿಯಾಗುತ್ತವೆ ಎಂಬುದನ್ನು ಆಧುನಿಕ ಇತಿಹಾಸ ಸಂಶೋಧಕ ಮನವರಿಕೆಯಲ್ಲಿಟ್ಟು ಕೊಳ್ಳಬೇಕು. ಆಧುನಿಕ ಇತಿಹಾಸ ಸಂಶೋಧಕನು ಮೂಲದಿಂದ ಇತಿಹಾಸ ಆಧಾರವಿಲ್ಲದೇ ಸೃಷ್ಟಿಯಾಗುವುದಿಲ್ಲ ಎಂಬ ನಿಜವನ್ನು ತಿಳಿದುಕೊಳ್ಳಬೇಕು ಹಾಗೂ ಮೇಲ್ನೋಟಕ್ಕೆ ಕಾಣಸಿಗದ ಹಲವಾರು ಮಾಹಿತಿಗಳು ತಾಳ್ಮೆಯಿಂದ ಪರಿಶೀಲಿಸಿದಾಗ ದೊರಕುತ್ತವೆ ಎಂಬ ಮಾಹಿತಿಯನ್ನು ಸಂಶೋಧಕ ಕರ್ನಲ್ ಮೆಕೆಂಝಿಯ ಆಕರಗಳ ಸಂಗ್ರಹದಿಂದ ತಿಳಿಯಬೇಕು.

## ೫.೪ ಭಾರತದ ಇತಿಹಾಸ ಆಕರಗಳ ಸಂಗ್ರಹಗಳಲ್ಲಿ ಕರ್ನಲ್ ಮೆಕೆಂಝಿಯ ನಂತರದಲ್ಲಾದ ಸ್ಥಿತ್ಯಂತರಗಳು

ಕರ್ನಲ್ ಮೆಕೆಂಝಿ ಅವರ ಸಾವಿನ ನಂತರ ಐತಿಹಾಸಿಕ ಆಕರಗಳ ಸಂಗ್ರಹ ಕಾರ್ಯ ಮುಂದುವರೆಯಲಿಲ್ಲ. ಕಾರಣ ವಸಾಹತು ಆಡಳಿತ ಅಂತಹ ಸರ್ವೇಯರ್‌ಗಳ ನೇಮಕಕ್ಕೆ ಹೆಚ್ಚು ಆಸಕ್ತಿ ತೋರಲಿಲ್ಲ. ಕರ್ನಲ್ ಮೆಕೆಂಝಿ ಅವರ ಪ್ರಮುಖ ಸಹಾಯಕನಾಗಿ ಕಾರ್ಯನಿರ್ವಹಿಸಿದ ಲಕ್ಷ್ಮಯ್ಯ ಅವರು ವಸಾಹತು ಆಡಳಿತಕ್ಕೆ ಅನೇಕ ಪತ್ರಗಳನ್ನು ಬರೆದು ಸಂಗ್ರಹ ಕಾರ್ಯದಲ್ಲಿ ತಮ್ಮನ್ನು ಮುಂದುವರೆಸುವಂತೆ ಆಗ್ರಹಿಸಿದರೂ ಸಹ ವಸಾಹತು ಆಡಳಿತ ಸಕಾರಾತ್ಮಕವಾಗಿ ಸ್ಪಂದಿಸಲಿಲ್ಲ. ನಿಮ್ಮ ಶೈಕ್ಷಣಿಕ ಅರ್ಹತೆಗಳು ಸಾಲದು ಎಂಬ ಕಾರಣ ಒಂದಾದರೆ, ಬ್ರಿಟಿಷ್ ಆಡಳಿತದ ಪೂರ್ವಾನುಮತಿಬೇಕು, ಆಲೋಚಿಸಿ ಉತ್ತರಿಸುತ್ತೇವೆ ಎಂಬಿತ್ಯಾದಿ ಕುಂಟು ನೆಪ ಕಾರಣಗಳನ್ನು ಹೇಳಿ ಕಂಪೆನಿ ಸರ್ಕಾರ ಲಕ್ಷ್ಮಯ್ಯ ಅವರನ್ನು ಕೆಲಸ ಮುಂದುವರೆಸದಂತೆ ತಡೆಯಿತು.

ಪ್ರಾರಂಭಿಕ ವಸಾಹತು ಕಾಲದ ಐತಿಹಾಸಿಕ ಅರಿವು ಮತ್ತು ಜ್ಞಾನ ಕುರಿತು ಮತ್ತಷ್ಟು ಸಂಶೋಧನೆಗಳೂ ನಡೆಯಬೇಕಿದೆ ಸ್ಥಳೀಯ ಭಾಷಾಂತರದಲ್ಲಿ ಕರ್ನಲ್ ಮೆಕೆಂಝಿಗೆ ನೆರವಾದ ಈ ೧೭ ಮಂದಿಯ ಕುರಿತು ಹೊಸದಿಕ್ಕಿನಲ್ಲಿ ಸಂಶೋಧನೆ ನಡೆಯಬೇಕಿದೆ. ಕಲ್ಕತ್ತಾದ ಏಷ್ಯಾಟಿಕ್ ಜರ್ನಲ್ ಪ್ರಕಟಣೆಯಲ್ಲೂ ಸಹ ಇಂತಹ ಭೂ ಸಮೀಕ್ಷೆ ಮೂಲಕ ಸಂಗ್ರಹಿಸಲ್ಪಟ್ಟ ಇತಿಹಾಸದ ಆಕರಗಳು ಬಾಲಿಶ ಮತ್ತು ಮೂಢನಂಬಿಕೆಗಳ ಹೆಣೆದಿರುಪಿಕೆ ಅಷ್ಟೇ ಎಂಬ ಲೇಖನಗಳು ಪ್ರಕಟವಾಗದವು.

ಭಾರತೀಯರ ಇತಿಹಾಸ ಪ್ರಜ್ಞೆಯನ್ನು ಪ್ರಶ್ನಿಸುವ ಲೇಖನಗಳೂ ಸಹ ಪ್ರಕಟವಾದವು. ಭಾರತೀಯರಿಗೆ ಇತಿಹಾಸದ ನೈಜ ಘಟನೆಗಳನ್ನು, ಸತ್ಯ ಮಿಥ್ಯೆಗಳ ನಡುವಿನ ವ್ಯತ್ಯಾಸವನ್ನು ಕೂಲಂಕುಷವಾಗಿ ಪರಾಮರ್ಶಿಸುವ ಅಭ್ಯಾಸವೇ ತಿಳಿದಿಲ್ಲ ಎಂಬ ಅಪಾದನೆಯೂ ಸೇರಿಕೊಂಡಿತು. ಭಾರತೀಯ ಸನಾತನ ಸಂಪ್ರದಾಯಗಳನ್ನು ಅಲ್ಲಗಳೆಯುವುದು ಸೇರಿದಂತೆ ಮೂರ್ತಿಪೂಜೆ, ಸ್ತ್ರೀಯರ ಸ್ಥಾನಮಾನ, ಶಿಕ್ಷಣ ಪದ್ಧತಿ, ಸಂಸ್ಕೃತ ಕಲಿಕೆ, ಹಸ್ತಪ್ರತಿಗಳ ಸಂರಕ್ಷಣೆ ಮೊದಲಾದವುಗಳೆಲ್ಲವೂ ಹೀಯಾಳಿಕೆಯ ವಸ್ತುಗಳಾದವು. ಭಾರತೀಯರಿಗೆ ಇತಿಹಾಸ ಪ್ರಜ್ಞೆ ಇಲ್ಲ ಎಂಬುದು ಸಾಬೀತಾಗಿದೆ ಎಂದು ಕರ್ನಲ್ ಮೆಕೆಂಝಿ ಅವರ ಸಂಗ್ರಹ ಕಾರ್ಯವನ್ನೇ ಪ್ರಶ್ನಿಸುವ ಮಟ್ಟಕ್ಕೂ ಮುಂದುವರೆಯಿತು.

ಈ ವಸಾಹತು ವೈರುಧ್ಯತೆಗಳು ಭಾರತೀಯ ಇತಿಹಾಸ ಲೇಖನಕ್ಕೆ ಭವಿಷ್ಯದಲ್ಲಿ ತೊಡಕಾಯಿತು. ಸಂಸ್ಕೃತ ಕಲಿಸುತ್ತಿದ್ದ ಪಾಠಶಾಲೆಗಳು ಮುಚ್ಚಿದವು, ಆಂಗ್ಲಮಾದರಿ ಶಿಕ್ಷಣ ಜನಪ್ರಿಯವಾಗತೊಡಗಿತು. ಮೂರ್ತಿಪೂಜೆಯನ್ನು ಸಂಪ್ರದಾಯವಾದಿ ಭಾರತೀಯರೇ ಪ್ರಶ್ನಿಸುವಂತಾಯಿತು. ಭಾರತೀಯರ ಉಡುಪು, ಆಹಾರ ಪದ್ದತಿ, ಜೀವನಶೈಲಿ, ಶಿಕ್ಷಣ, ಭಾಷಾವ್ಯವಸ್ಥೆ ಎಲ್ಲವೂ ಕಟು ವಿಮರ್ಶೆಗೆ ಒಳಗಾಗಿ ವಸಾಹತು ದೃಷ್ಟಿಕೋನ ಹೆಚ್ಚು ಸಕಾರಾತ್ಮಕವಾಯಿತು. ಭಾರತೀಯರಿಗೆ ಏನೂ ತಿಳಿದಿಲ್ಲ ಎಂದು ಭಾರತೀಯರನ್ನು ಮೂಲೆಗುಂಪು ಮಾಡಿ ವಸಾಹತು ಅಧಿಕಾರಿಗಳು ಪಾಶ್ಚಿಮಾತ್ಯ ಮಾದರಿ ಜೀವನ ದೃಷ್ಟಿಕೋನವನ್ನು ಹೇರಿದರು. ಇದರಿಂದ ಭವಿಷ್ಯದಲ್ಲಿ ಭಾರತೀಯತೆ ವಸಾಹತು ದೃಷ್ಟಿಕೋನದ ಅಧ್ಯಯನವು ಅವಸಾನದತ್ತ ಸಾಗಿತ್ತು. ಈ ವಸಾಹತು ವೈರುಧ್ಯತೆಗಳು ಭಾರತೀಯತೆಯ ಮೇಲೆ ವಸಾಹತು ಹಿಡಿತವನ್ನು ಬಿಗಿಗೊಳಿಸಿ ಭಾರತೀಯ ಸನಾತನ ಸಂಪ್ರದಾಯಗಳ ಹಿಂದಿನ ವೈಜ್ಞಾನಿಕತೆಯನ್ನು ಮರೆಸುವಂತೆ ಮಾಡಿದ್ದು ಇತಿಹಾಸದ ಘನ ಘೋರ ಸತ್ಯವೇ ಆಗಿದೆ.

ಇಂತಹ ವಿಶೇಷ ವಿಷಯಗಳಿಂದ ಕೂಡಿದ ನಮ್ಮ ನಾಡಿನ ಕೈಫಿಯತ್ತುಗಳನ್ನು ಭಾರತಕ್ಕೆ ಬಂದ ಯೂರೋಪಿಯನ್ನರು, ೧೭೯೯ರ ನಂತರ ತಮ್ಮ ಆಡಳಿತ ನೆಲೆಗೊಳಿಸಿದ ಬಳಿಕ, ವಾಣಿಜ್ಯ, ವ್ಯವಹಾರ, ಧರ್ಮಪ್ರಸಾರ, ವಿದ್ಯಾಪ್ರಸಾರಗಳ ಜೊತೆಗೆ ಐತಿಹಾಸಿಕವಾದ ಎಲ್ಲಾ ಆಕರಗಳ ಸಂಗ್ರಹ ಕಾರ್ಯವನ್ನೂ ಕೈಗೊಂಡರು. ಭಾರತದ ಸಮಗ್ರಚರಿತ್ರೆ ನಿರ್ಮಿಸುವುದರ ಕಡೆಗೆ ಹೆಚ್ಚು ಗಮನ ಹರಿಸಿ, ಭಾರತದ ಚಾರಿತ್ರಿಕ, ಸಾಂಸ್ಕೃತಿಕ ಅಧ್ಯಯನ, ಸಂಶೋಧನೆ ಪ್ರಾರಂಭಿಸಿದರು. ಹಳೆಯ ಗ್ರಂಥಗಳ, ಹಸ್ತಪ್ರತಿಗಳ ಸಂಪಾದನೆ, ಪ್ರಕಟಣೆ, ಶಬ್ದಕೋಶಗಳ ನಿರ್ಮಾಣ, ಶಾಸನಗಳ, ಶಿಲ್ಪಗಳ ಅಧ್ಯಯನ ಹೀಗೆ ಹಲವು ಯೋಜನೆಗಳನ್ನು ಶಾಸ್ತ್ರೀಯವಾಗಿ, ಕ್ರಮಬದ್ಧವಾಗಿ

ನಡೆಸಿಕೊಂಡು ಬಂದರು. ಸ್ಥಳಪುರಾಣ, ಸ್ಥಳೀಯ ಚರಿತ್ರೆ, ವ್ಯಕ್ತಿ, ಘಟನೆ, ಸಂಸ್ಕೃತಿ, ಭಾಷೆಗಳ ಬಗ್ಗೆ ಸ್ಥಳೀಯರಿಂದಲೇ ಸಂಗ್ರಹಿಸಿ ದಾಖಲು ಮಾಡತೊಡಗಿದರು. ಇಂತಹ ಕಾರ್ಯದಲ್ಲಿ ಮೊದಲಿಗೆ ತನ್ನನ್ನು ತೊಡಗಿಸಿಕೊಂಡವನೆಂದರೆ ಕರ್ನಲ್ ಮೆಕೆಂಝಿ. ಆತ ದಕ್ಷಿಣ ಭಾರತವನ್ನೆಲ್ಲಾ ಸುತ್ತಾಡಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತೃತಗೊಳಿಸಿ, ಭಾರತದ ಬಹುದೊಡ್ಡ ಪ್ರಾಚೀನ ವಸ್ತು ಸಂಗ್ರಹಕಾರನಾದ. ಒಂದು ಸಂಸ್ಥೆ ಮಾಡುವ ಕೆಲಸ ಕಾರ್ಯಗಳನ್ನು ಒಬ್ಬ ವ್ಯಕ್ತಿ, ಕಂಪನಿ ಸರಕಾರದಲ್ಲಿ ಕರ್ತವ್ಯ ನಿರ್ವಹಿಸುತ್ತಾ, ಬಿಡುವಿನ ವೇಳೆಯಲ್ಲಿ ಹಾಗೂ ಸರ್ಕಾರಿ ಕೆಲಸದ ಜೊತೆಜೊತೆಗೆ ತನ್ನ ಸ್ವಂತ ಹಣದ ವೆಚ್ಚದಲ್ಲಿ ಸಂಗ್ರಹಕಾರ್ಯ ನಡೆಸಿದ ವ್ಯಕ್ತಿ ಎನಿಸಿದನು.

ಕೈಫಿಯತ್ತುಗಳು ಸಂಶೋಧಕ ವಿದ್ವಾಂಸರಿಗೆ ಲಭ್ಯವಾಗುವ ಮುನ್ನ ಕರ್ನಾಟಕದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಪುನರ್ ರಚಿಸಲು ಪ್ರಯತ್ನಪಟ್ಟ ಸಂಶೋಧಕರಿಗೆ ಪ್ರಧಾನವಾಗಿ ಮಾಹಿತಿ ಲಭ್ಯವಿದ್ದುದು ಶಿಲಾ ಶಾಸನ ಹಾಗೂ ತಾಮ್ರ ಶಾಸನಗಳಿಂದ ಮಾತ್ರ. ಶಾಸನಾಧಾರಗಳಿಗೆ ಪೂರಕವಾಗಿ ಸಾಹಿತ್ಯ ಕೃತಿಗಳು ಸಹಾಯಕವಾಗಿದ್ದವು, ವಿದೇಶಿ ಬರವಣಿಗೆಗಳು ಅಲ್ಲಲ್ಲಿ ಬೆಳಕು ಚೆಲ್ಲುತ್ತಿದ್ದವು. ಆದಾಗ್ಯೂ ಲಭ್ಯವಿದ್ದ ಕರ್ನಾಟಕದ ಆಧುನಿಕ ಹಾಗೂ ಪೂರ್ವಕಾಲದ ಅನೇಕ ವಿಷಯಗಳು ಅಸಮರ್ಪಕವಾಗಿಯೇ ಉಳಿದುಕೊಂಡಿದ್ದವು.[೫] ಕರ್ನಾಟಕದಾದ್ಯಂತ ಶಾಸನಗಳ ಸಂಗ್ರಹಣೆಯ ಕಾರ್ಯ ಐರೋಪ್ಯ ಅಧಿಕಾರಿ/ವಿದ್ವಾಂಸರಿಂದಲೇ ಆರಂಭವಾಗುತ್ತದೆ. ಚರಿತ್ರೆ–ರಚನಾ ಕಾರ್ಯಗಳಿಗೆ, ಸಂಶೋಧಕರಿಗೆ ಆಸಕ್ತಿ ಹುಟ್ಟಿಸುವಂತಹ ನಿಗೂಢ ವಿಷಯಗಳು, ಗೊತ್ತಿಲ್ಲದ ಹಲವಾರು ವಿಷಯಗಳು ಶಾಸನಗಳಿಂದ ಲಭ್ಯವಾದುವು. ಈ ಕಾರ್ಯದಲ್ಲಿ ಬಿ.ಎಲ್.ರೈಸ್, ರಾಬರ್ಟ್ ಸೀವೆಲ್, ಜೆ.ಎಫ್.ಫ್ಲೀಟ್, ವಾಲ್ಟರ್, ಈಲಿಯಟ್, ಜಾನ್ ಬರ್ಗೆಸ್, ಎಫ್.ಕೀಲ್‌ಹಾರ್ನ್, ಡಬ್ಲ್ಯೂ. ಟೇಲರ್, ಮೆಡೋಸ್ ಟೇಲರ್ ಇವರೆಲ್ಲರಿಗೂ ಪ್ರೇರಣೆದಾಯಕರಾದವರು ಕರ್ನಲ್ ಮೆಕೆಂಝಿ.[೬]

ಭಾರತದಲ್ಲಿ ಒಂದುಕಡೆ ದೇಶೀಯ ರಾಜರುಗಳು ತಮ್ಮ ಒಳ ಜಗಳಗಳಿಂದ ಮತ್ತು ಆಡಳಿತದ ದೌರ್ಬಲ್ಯದಿಂದ ವಿನಾಶದ ಅಂಚಿನಲ್ಲಿ ಸಾಗುತ್ತಿರುವಾಗ ಸಾಂಸ್ಕೃತಿಕ ಕ್ಷೇತ್ರವೂ ಕೂಡ ಒಂದು ರೀತಿಯಲ್ಲಿ ನಿರ್ಲಕ್ಷ್ಯ ವಿನಾಶಕ್ಕೆ ಗುರಿಯಾಗುವ ಪರಿಸ್ಥಿತಿಯಲ್ಲಿದ್ದಿತು. ಭಾರತೀಯರಿಗೆ ತಮ್ಮ ಇತಿಹಾಸ ಸಂಸ್ಕೃತಿ, ಕಲೆ, ಇವುಗಳ ಬಗ್ಗೆ ಆಸಕ್ತಿ ಇಲ್ಲದೆ ಅವುಗಳ ರಕ್ಷಣೆಗೆ ಸೂಕ್ತವಾದ ವ್ಯವಸ್ಥೆ ಇರಲಿಲ್ಲ. ಒಂದು ಕಾಲದಲ್ಲಿ ಭಾರತೀಯ ವಿದ್ವಾಂಸರು ಸಾಹಿತಿಗಳು ವಿಜ್ಞಾನಿಗಳು ರಚಿಸಿದ್ದ ಶ್ರೇಷ್ಠ ಗ್ರಂಥಗಳನ್ನು ಆಸಕ್ತಿಯಿಂದ ಅಭ್ಯಾಸ ಮಾಡುವುದನ್ನು ಭಾರತೀಯರು ಮರೆತಿದ್ದರು. ಹಾಗೆಯೇ ನಾಡಿನ

ಇತಿಹಾಸ ಸಂಸ್ಕೃತಿ ಸಾಹಿತ್ಯಕ್ಕೆ ಸಂಬಂಧಿಸಿದ ಶಾಸನಗಳು, ಗ್ರಂಥಗಳು, ಹಸ್ತಪ್ರತಿಗಳು ಮತ್ತು ಪ್ರಾಚ್ಯವಸ್ತುಗಳನ್ನು ಜೋಪಾನವಾಗಿ ರಕ್ಷಿಸದೆ ಅವು ಕೂಡ ವಿನಾಶಕ್ಕೆ ತುತ್ತಾಗುತ್ತಿದ್ದವು. ಅಧಿಕ ಸಂಖ್ಯೆಯ ಭಾರತೀಯರು ಅಜ್ಞಾನ, ಮೂಢನಂಬಿಕೆ, ಸ್ವಾರ್ಥ, ದುರಾಸೆ ಮುಂತಾದ ದುರ್ಗುಣಗಳ ಪರಿಣಾಮವಾಗಿ ಅಮೂಲ್ಯವಾದ ಸಾಂಸ್ಕೃತಿಕ ಸಂಪತ್ತು ಹಾಳಾಗುವ ಸ್ಥಿತಿಯನ್ನು ತಲುಪಿದ್ದಿತು. ನಾಡಿನ ಜನರು ಈ ರೀತಿಯಲ್ಲಿ ತಮ್ಮ ದೇಶದ ಇತಿಹಾಸವನ್ನು ಸಂಸ್ಕೃತಿಯನ್ನು ಮರೆತುಹೋಗಿ ಪರೋಕ್ಷವಾಗಿ ಅವುಗಳ ನಾಶಕ್ಕೆ ಕಾರಣರಾಗಿದ್ದಾಗ ಅನೇಕ ವಿದೇಶಿಯರು ಇಂತಹ ಅಮೂಲ್ಯ ದಾಖಲೆಗಳು ಮತ್ತು ಪ್ರಾಚ್ಯ ವಸ್ತುಗಳನ್ನು ಸಂಗ್ರಹಿಸಿ ಸಂರಕ್ಷಿಸಲು ಮುಂದಾದರು.

ವ್ಯಾಪಾರಕ್ಕೆ ಸಂಬಂಧಿಸಿದ ಅಳತೆ ಮಾಪನಗಳಾದ ಸೇರು, ಪಾವು, ಅಬ್ಬೇರು, ಚಟಾಕು, ಕೊಳಗ, ಇಬ್ಬಳಿಗೆ ವ್ಯವಸಾಯ ಉಪಕರಣಗಳು, ಗೃಹೋಪಕರಣಗಳನ್ನು ಅಧಿಕ ಸಂಖ್ಯೆಯಲ್ಲಿ ಸಂಗ್ರಹಿಸುತ್ತಾ ಹೋಗಿದ್ದು ಮೆಕೆಂಝಿಯ ವಿಶಿಷ್ಟ ಸಾಧನೆ ಎನ್ನಬಹುದು. ನಲವತ್ತು ವರ್ಷಗಳ ದೀರ್ಘಕಾಲಸದ ಪ್ರಾಚ್ಯವಸ್ತುಗಳನ್ನು ಅಮೂಲ್ಯ ದಾಖಲೆಗಳನ್ನು ಸಂಗ್ರಹಿಸಿ ಇತಿಹಾಸ ರಚನೆಗೆ ಅವಕಾಶ ಮಾಡಿಕೊಟ್ಟ ಕರ್ನಲ್ ಮೆಕೆಂಝಿಗೆ ತನ್ನ ಕಾರ್ಯದ ಬಗ್ಗೆ ಸಮಾಧಾನವಿರಲಿಲ್ಲ. ತಾನು ಸಂಪಾದಿಸಿ ಸಂಗ್ರಹಿಸಿದ ಎಷ್ಟೋ ಪ್ರಾಕ್ತನ ವಸ್ತುಗಳನ್ನು ಯೋಗ್ಯ ರೀತಿಯಲ್ಲಿ ಪರಿಶೀಲಿಸಲು ಸಾಧ್ಯವಾಗದೇ ಬಿಟ್ಟುಹೋದ ಬಗ್ಗೆ ಆತ ಕಳಕಳಿಯನ್ನು ವ್ಯಕ್ತ ಪಡಿಸಿದ್ದಾನೆ. ಈ ಕಾಲಾವಧಿಯಲ್ಲಿ ನಾನು ಅಲೆದಾಡಿದ ಸ್ಥಳಗಳಲ್ಲಿ ಇನ್ನು ಉಳಿದಿರುವ ಪ್ರಾಚ್ಯವಸ್ತುಗಳನ್ನು ಸೂಕ್ತವಾಗಿ ಪರಿಶೀಲಿಸಲು ಸಾಧ್ಯವಾಗದಿದಕ್ಕೆ ವಿಷಾದಿಸುತ್ತೇನೆ ಎಂದು ಕರ್ನಲ್ ಮೆಕೆಂಝಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದನು.

**ಕೊನೆ ಟಿಪ್ಪಣಿ**

೧. ಕಲ್ಬುರ್ಗಿ.ಎಂ.ಎಂ. ಕರ್ನಾಟಕದ ಕೈಫಿಯತ್ತುಗಳು, ಪು.ಸಂ. xiii

೨. ಅದೇ, ಪು.ಸಂ. xv

೩. ಅದೇ, ಪು.ಸಂ. ೧೨೨

೪. ಅದೇ, ಪು.ಸಂ. ೨೦

೫. ಅದೇ, ಪು.ಸಂ. ೧೪೬-೧೪೭

೬. ಅದೇ, ಪು.ಸಂ. ೧೩

# ಅಧ್ಯಾಯ–೬

# ಉಪಸಂಹಾರ

ಕರ್ನಲ್ ಮೆಕೆಂಝಿ ಭಾರತ ಇತಿಹಾಸ ರಚನೆಯಲ್ಲಿ ಆಕರಗಳ ಸಂಗ್ರಹಗಳ ಮೂಲಕ ಹಾಗೂ ಪ್ರಕಟಣೆಗಳ ಕಾರ್ಯಕ್ಕೆ ಅಡಿಪಾಯವನ್ನು ಹಾಕಿದ ಪ್ರಥಮ ವ್ಯಕ್ತಿ ಎಂದು ಹೇಳಬಹುದು. ಅವನ ಆಕರಗಳ ಸಂಗ್ರಹಗಳು ಮುಂದೆ ಮುದ್ರಣಕ್ಕೆ ಪ್ರೇರಣೆದಾಯಕವಾದವು. ಹಾಗೆಯೇ ಕರ್ನಲ್ ಮೆಕೆಂಝಿಯ ಸಂಗ್ರಹ ಅನುವಾದ ಟಿಪ್ಪಣಿ, ಪ್ರಕಟಣೆಗಳು ಗ್ರಂಥೋದ್ಯಮಕ್ಕೂ ಅವಕಾಶ ಮಾಡಿಕೊಟ್ಟವು. ಕರ್ನಲ್ ಮೆಕೆಂಝಿ ಮೌಖಿಕ ಇತಿಹಾಸದ ಮಹತ್ವವನ್ನು ತೋರಿಸಿಕೊಟ್ಟ ಒಬ್ಬ ಪ್ರಸಿದ್ಧ ವಿದ್ವಾಂಸ. ಹಸ್ತಪ್ರತಿ ಗ್ರಂಥಗಳನ್ನು ಸಂಗ್ರಹಿಸಿದ್ದಲ್ಲಿದೆ ತಿಳಿದವರಿಂದ ಅವರ ಅನುಭಗಳನ್ನು ಮತ್ತು ವಿಷಯಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ದಾಖಲಿಸುವ ಕೆಲಸ ಹೊಸರೀತಿಯ ಸಂಶೋಧನಾ ವಿಧಾನವೆಂದೇ ಹೇಳಬಹುದು. ಕರ್ನಲ್ ಮೆಕೆಂಝಿ ಕೆಲವು ಅತ್ಯಮೂಲ್ಯವಾದ ಭಾರತದ ಯಾವ ಭಾಷೆಯಲ್ಲಿಲ್ಲದ ಗ್ರಂಥಗಳನ್ನು ಬಹು ಪ್ರಯಾಸಪಟ್ಟು ಸಂಗ್ರಹಿಸಿ ಬೆಳಕಿಗೆ ತಂದಿದ್ದಾನೆಂದು ವಿಲ್ಸನ್ ಹೇಳುತ್ತಾರೆ. ಈ ರೀತಿಯಲ್ಲಿ ಅಮೂಲ್ಯ ಸಂಗ್ರಹಗಳನ್ನು ಕ್ರೋಢೀಕರಿಸುತ್ತಾ ಹೋದ ಕರ್ನಲ್ ಮೆಕೆಂಝಿ ಅವುಗಳನ್ನು ನಕಲು ಮಾಡಲು, ಅನುವಾದ ಮಾಡಲು ಅಗತ್ಯವಾದ ದೇಶಿಯ ಪಂಡಿತರ ಒಂದು ಗುಂಪನ್ನೇ ಸೃಷ್ಟಿಸಿದನು. ಕರ್ನಲ್ ಮೆಕೆಂಝಿ ಒಂದು ಸಂಶೋಧನಾ ಸಂಸ್ಥೆಯನ್ನು ಪ್ರಾರಂಭಿಸಿ ಅದರ ಮೂಲಕ ಅನೇಕ ಉಪಯುಕ್ತ ಕೃತಿಗಳು ಹೊರಬರುವಂತೆ ಮಾಡಿದನು.

ಕರ್ನಲ್ ಮೆಕೆಂಝಿ ಭಾರತೀಯರಿಗೆ ಹೊಸದಾದ ಅನೇಕ ವಿಧಾನಗಳನ್ನು ಬರವಣಿಗೆಯ ಮಾರ್ಗಗಳನ್ನು ಸೂಚಿಸಿದ್ದು ಅವನ ಮತ್ತೊಂದು ಪ್ರಮುಖ ಕೊಡುಗೆಯಾಗಿದೆ. ದೇವಚಂದ್ರನೆಂಬ ಪ್ರಸಿದ್ಧ ಪಂಡಿತನನ್ನು ಸಂಧಿಸಿದಾಗ ಕರ್ನಾಟಕದಲ್ಲಿ ಹಲವು ವಿಷಯಗಳನ್ನೊಳಗೊಂಡಂತೆ ಒಂದು ವಿಶ್ವಕೋಶವನ್ನು ತಯಾರಿಸುವಂತೆ ಕರ್ನಲ್ ಮೆಕೆಂಝಿ ಸಲಹೆಯನ್ನು ನೀಡಿದನು. ಹೀಗೆ ಕರ್ನಲ್ ಮೆಕೆಂಝಿಯು ತನ್ನ ಜೀವಿತಾವಧಿಯಲ್ಲಿ ಅನೇಕ ಲೇಖಕರ ಮತ್ತು ವಿದ್ವಾಂಸರ ಸೃಷ್ಟಿಗೆ ಕಾರಣನಾದನು. ಮುತ್ತಣ್ಣನವರು ಹೇಳಿರುವಂತೆ ಕರ್ನಾಟಕ ಇತಿಹಾಸ ಹಾಗೂ ಸಾಹಿತ್ಯಕ್ಕೆ ಮೆಕೆಂಝಿಯ ಕೊಡುಗೆ ಅಪಾರವಾದದು. ಕನ್ನಡ ಸಾಹಿತ್ಯ ರಚನೆ ಕೃಷಿಯಲ್ಲಿ ಮೊಟ್ಟಮೊದಲಿಗೆ ಕಾಣಿಸಿಕೊಂಡವನೇ ಕರ್ನಲ್ ಮೆಕೆಂಝಿ. ಸಾಹಿತ್ಯವಲ್ಲದೆ ಐತಿಹಾಸಿಕ ಕೃತಿಗಳು ಜನಮನ ತಲುಪವಂತೆ ಮಾಡಿದ ಕೀರ್ತಿಯು ಮೆಕೆಂಝಿಗೆ ಸಲ್ಲಬೇಕು.

೧೯ನೇ ಶತಮಾನದ ಉತ್ತರಾರ್ಧದಲ್ಲಿ ಕನ್ನಡಿಗರಲ್ಲಿ ಇತಿಹಾಸಪ್ರಜ್ಞೆ ತಲೆದೋರುತ್ತಾ ನಡೆದು ಬ್ರಿಟಿಷರ ಆಳ್ವಿಕೆಯ ಆರಂಭದ ಹೊತ್ತಿಗೆ ವಿವಿಧ ರಾಜಮನೆತನಗಳ, ಪಾಳೆಯಗಾರರ ವಂಶಾವಳಿಗಳು ಹಾಗೂ ಇತರ ವೃತ್ತಾಂತಗಳು ನಾಡಿನಲ್ಲಿ ಲಭ್ಯವಿದ್ದವನ್ನು ಕರ್ನಲ್ ಮೆಕೆಂಝಿ ಸಂಗ್ರಹಿಸಿದ. ಕರ್ನಲ್ ಮೆಕೆಂಝಿ ಸಂಗ್ರಹಿಸಿದ ಗ್ರಂಥಗಳ ಜನಪ್ರಿಯತೆಗೆ ಇದೊಂದು ನಿದರ್ಶನ. ಒಟ್ಟಿನಲ್ಲಿ ಕರ್ನಲ್ ಮೆಕೆಂಝಿ ಇತಿಹಾಸ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿ ಅದಕ್ಕೆ ಚೇತನವನ್ನು ನೂತನ ಅರ್ಥವನ್ನು, ರಚನಾ ವಿಧಾನವನ್ನೂ ತೋರಿಸಿಕೊಟ್ಟು ಚರಿತ್ರೆ ರಚನೆಯಲ್ಲಿ ಪ್ರಥಮನೆನಿಸಿಕೊಂಡಿದ್ದಾನೆ.

ಭಾರತೀಯರಲ್ಲಿ ತಮ್ಮ ದೇಶದ ಇತಿಹಾಸ ಸಂಸ್ಕೃತಿ, ಬಗ್ಗೆ ಇದ್ದ ತಪ್ಪು ಗ್ರಹಿಕೆ, ಆಲಸ್ಯವನ್ನು ತೊಡೆದು ಹಾಕಿ ಅವರಲ್ಲಿ ನಾಡಿನ ಇತಿಹಾಸದ ಬಗ್ಗೆ ಹೊಸ ಆಸಕ್ತಿ ಶ್ರದ್ಧೆ ಕುತೂಹಲ ಮೂಡುವಂತೆ ಮಾಡಿದ್ದು ಕರ್ನಲ್ ಮೆಕೆಂಝಿಯ ಬಹುಮುಖ್ಯ ಸಾಧನೆ. ಕರ್ನಲ್ ಮೆಕೆಂಝಿಯ ಆಸಕ್ತಿ ಮತ್ತು ಆತನ ಅಧ್ಯಯನದ ಕ್ಷೇತ್ರ ಬಹು ವಿಸ್ತರವಾದುದು. ಏಕಕಾಲಕ್ಕೆ ಆತ ಹಲವಾರು ಶಾಸ್ತ್ರಗಳು ಜ್ಞಾನ ಶಾಖೆಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಅವುಗಳನ್ನು ನಿಖರವಾಗಿ ನಿರೂಪಿಸಿ ಹಲವಾರು ಶಾಸ್ತ್ರಗಳು ವಿಕಾಸಗೊಳ್ಳಲು ಕಾರಣನಾಗಿದ್ದಾನೆ. ಇತಿಹಾಸಶಾಸ್ತ್ರವಲ್ಲದೆ ಮಾನವಶಾಸ್ತ್ರ, ಸಮಾಜಶಾಸ್ತ್ರ, ಭಾಷಾಶಾಸ್ತ್ರ. ಇವೇ ಮೊದಲಾದ ವಿಶಿಷ್ಟ ಶಾಸ್ತ್ರಗಳನ್ನು ಕುರಿತು ಅಮೂಲ್ಯವಾದ ದಾಖಲೆಗಳನ್ನು ಸಂಗ್ರಹಿಸಿದನು. ಅದರಲ್ಲಿ ನಮ್ಮ ದೇಶದಲ್ಲಿದ್ದ ವಿವಿಧ ಜಾತಿಗಳನ್ನು ಕುರಿತು ಕೈಫಿಯತ್ತು, ಬಖೈರು, ಐತಿಹ್ಯಗಳನ್ನು ಸಂಗ್ರಹಿಸಿದ್ದು. ಆತನ ಬಹುಮುಖ್ಯವಾದ ಸಾಧನೆ. ಮೇಲ್ಜಾತಿಯವರ ನಿರ್ಲಕ್ಷ್ಯ ಮತ್ತು ಅಸಡ್ಡೆಗೆ ಒಳಗಾಗಿದ್ದ ಅನೇಕ ಕೆಳಸ್ತರದ ಸಮುದಾಯಗಳ ಬಗ್ಗೆ ಲಭ್ಯವಿದ್ದ ಎಲ್ಲಾ ಮಾಹಿತಿಯನ್ನು ಆತ ಆಸಕ್ತಿಯಿಂದ ಸಂಗ್ರಹಿಸುತ್ತಾ ಹೋದುದು ಚರಿತ್ರೆಯ ನಿರ್ಮಾಣಕ್ಕೆ ಕಾರಣವಾಗಿದೆ. ಕೆಳಸ್ತರ ಕೊಂಚ, ಕೊರಮ, ಈಡಿಗ, ಬಣಜಿಗ, ಕುಂಬಾರ, ಮಣ್ಣುವೊಡ್ಡಿ, ಬಂಜಾರಿ ಇನ್ನು ಮುಂತಾದ ಎಲ್ಲಾ ಜಾತಿಗಳ ಬಗ್ಗೆ ಅಮೂಲಾಗ್ರವಾಗಿ ಆತ ಮಾಹಿತಿ ಸಂಗ್ರಹಿಸಿದನು. ಇಂತಹ ಅನೇಕ ಜಾತಿ ಉಪಜಾತಿ, ಉಪಸಂಸ್ಕೃತಿ, ಪಂಗಡ, ಒಳಪಂಗಡ, ಜೀವನ ವಿಧಾನ, ಆಹಾರ, ವಿಧಾನ, ವಿಚಾರ, ಹುಟ್ಟಿನಿಂದ ಅಂತ್ಯದವರೆಗೂ ನಡೆಯುವ ಆಚಾರ-ವಿಚಾರ, ಆಚರಣೆ, ನಂಬಿಕೆ, ಕಾರ್ಯಗಳನ್ನು ಸಮಗ್ರವಾಗಿ ಸಂಗ್ರಹಿಸಿ ಕೊಟ್ಟಿದುದು ಈ ಆಂಗ್ಲ ವಿದ್ವಾಂಸನ ಒಂದು ಮಹತ್ವದ ಸಾಧನೆ. ಇದರಿಂದ ಮಾನವಿಕ ವಿಜ್ಞಾನ ವೇಗವಾಗಿ ಬೆಳೆಯಲು ಅವಕಾಶವಾಯಿತು. ಜೈನಧರ್ಮಕ್ಕೆ ಸಂಬಂಧಿಸಿರುವಂತೆ ಆತನ ಕೊಡುಗೆಯೂ ವೈಶಿಷ್ಟ್ಯಪೂರ್ಣವಾದುದು. ಜೈನ ಮತ್ತು ಬೌದ್ಧ ಧರ್ಮಗಳು ಎರಡೂ

ಭಿನ್ನವಾದ ಧರ್ಮಗಳು ಎಂಬುದನ್ನು ಎತ್ತಿತೋರಿಸಿ ಅವುಗಳಲ್ಲಿರುವ ಸಾಮ್ಯ ಮತ್ತು ಭಿನ್ನತೆಯನ್ನು ವಿವರವಾಗಿ ತಿಳಿಸಿಕೊಟ್ಟಿದ್ದು ಕರ್ನಲ್ ಮೆಕೆಂಝಿಯ ಮತ್ತೊಂದು ಮಹತ್ವಪೂರ್ಣ ಕೊಡುಗೆಯಾಗಿದೆ.

ಕರ್ನಲ್ ಮೆಕೆಂಝಿ ತನ್ನ ೪೦ ವರ್ಷಗಳ ಜೀವಿತ ಅವಧಿಯಲ್ಲಿ ಮಾಹಿತಿ ಮತ್ತು ವಸ್ತುಗಳನ್ನು ಸಂಗ್ರಹಿಸಿದ್ದು ಸರ್ಕಾರದ ಯಾವುದೇ ಅನುದಾನ ಅಥವಾ ವೇತನದ ಸಹಾಯದಿಂದಲ್ಲ. ಆತ ಎಲ್ಲಾ ಅಮೂಲ್ಯ ಸಂಗ್ರಹಗಳನ್ನೂ ಸ್ವಂತ ಖರ್ಚಿನಿಂದ ಪಡೆದುಕೊಂಡನೆಂಬುದು ಗಮನಿಸಬೇಕಾದ ಸಂಗತಿ. ಹಾಗೆಯೇ ಅನೇಕ ದೇಶೀಯ ಪಂಡಿತರಿಗೂ ಸಹಾಯಕರಿಗೂ ಸೂಕ್ತವಾದ ವೇತನವನ್ನು ಸಹಾಯಧನವನ್ನು ನೀಡುತ್ತಿದ್ದುದು ತನ್ನ ಸ್ವಂತ ಹಣದಿಂದ ಎಂಬುದು ಗಮನಾರ್ಹ ಸಂಗತಿ. ಇತಿಹಾಸಕ್ಕೆ ಈ ಏಕವ್ಯಕ್ತಿಯ ಸಾಧನೆ, ಅತ್ಯಾಶ್ಚರ್ಯಕರವೂ ಅಸಾಧಾರಣಕರವಾದ ಸಂಗತಿಯಾಗಿದೆ. ಇಷ್ಟು ಶ್ರಮದಿಂದ ತನ್ನ ಸ್ವಂತ ಖರ್ಚಿನಿಂದ ಅಂದರೆ ಕಂಪನಿ ಸರ್ಕಾರ ನೀಡಿದ ವೇತನದಿಂದ ಸಂಗ್ರಹಿಸಿದ ಅಮೂಲ್ಯ ಕಲಾವಸ್ತುಗಳನ್ನು ನಾಣ್ಯಗಳು, ಗ್ರಂಥಗಳು, ವಿಗ್ರಹಗಳು, ಶಾಸನಗಳು, ತಾಮ್ರಪಟ ಹಾಗೂ ಗೃಹೋಪಯೋಗಿ ವಸ್ತುಗಳನ್ನು ಲಾಭಕ್ಕಾಗಿ ಮಾರಿಕೊಳ್ಳುವುದು ಆತನ ಉದ್ದೇಶವಾಗಿರಲಿಲ್ಲ. ಭಾರತದ ಇತಿಹಾಸ ಸಂಗ್ರಹಕ್ಕಾಗಿ ತನ್ನ ಎಲ್ಲಾ ತ್ಯಾಗಕ್ಕೂ ಸಿದ್ಧನಾಗಿ ತನ್ನ ಸರ್ವಸ್ವವನ್ನು ಈ ಸಂಗ್ರಹಾಲಯಕ್ಕೆ ಮೀಸಲಿರಿಸಿ ಜಗತ್ಪ್ರಸಿದ್ಧನಾದ. ಇಂದು ಭಾರತದ ಹಾಗೂ ಜಗತ್ತಿನ ಪ್ರಸಿದ್ಧ ಮ್ಯೂಸಿಯಂಗಳಲ್ಲಿ ಭಾರತೀಯ ತಾಳೆಗರಿಗಳು ಶಿಲಾ/ಲೋಹ ವಿಗ್ರಹಗಳು ಇನ್ನಿತರ ಕಲಾತ್ಮಕ ವಸ್ತುಗಳು ಕಂಗೊಳಿಸುತ್ತಾ ನೋಡುವವರ ಕುತೂಹಲವನ್ನು ತಣಿಸುತ್ತಿದ್ದರೆ ಅದು ಕರ್ನಲ್ ಮೆಕೆಂಝಿ ಮಾಡಿದ ಮಹತ್ಕಾರ್ಯದ ಕಾರಣವೆಂದು ತಿಳಿಯಬೇಕಾಗಿದೆ.

ಕರ್ನಲ್ ಮೆಕೆಂಝಿ ಒಬ್ಬ ಇತಿಹಾಸ ಆಕರಗಳ ಸಂಗ್ರಹಣೆಯಲ್ಲಿ ಅಸಾಮಾನ್ಯ ವ್ಯಕ್ತಿ ಹಾಗೂ ಅಪರಿಮಿತ ಆಸಕ್ತಿ, ಅಪೂರ್ವವಾದ ಕಾರ್ಯಕ್ಷಮತೆಯನ್ನು ಹೊಂದಿದ್ದನು. ಅವನ ಬಗೆಗೆ ಸವಿಸ್ತಾರವಾದ ಮಾಹಿತಿ ನೀಡುವ ಗ್ರಂಥಗಳಾಗಲಿ ಅಥವಾ ಲೇಖನಗಳಾಗಲಿ ಪ್ರಟಕಣೆಯಾಗಿದ್ದುದು ತೀರಾ ಕಡಿಮೆ. ಆದ್ದರಿಂದಲೇ ಆತನ ಬಾಲ್ಯಜೀವನದ ಬಗೆಗೆ ನಮಗೆ ಹೆಚ್ಚಿನ ಸಂಗತಿಗಳು ಲಭ್ಯವಿಲ್ಲ. ಆದರೆ ಆತ ನೂರಾರು ಜನ ವಿದ್ವಾಂಸರು ದೀರ್ಘಕಾಲದವರೆಗೆ ಮಾಡಬಹುದಾದ ಈ ಸಂಗ್ರಹ–ಸಂಶೋಧನಾ ಕೆಲಸವನ್ನು ಏಕಾಂಗಿಯಾಗಿ ಮಾಡಿದ ಧೀರ ವ್ಯಕ್ತಿ. ಆತ ಸಂಗ್ರಹಿಸಿದಷ್ಟು ಪ್ರಾಚ್ಯವಸ್ತುಗಳನ್ನು ಅಧ್ಯಯನ ಮಾಡಿದರೆ ಸಾಕು ನೂರಾರು ಸಂಶೋಧನಾತ್ಮಕ

ಪ್ರಬಂಧಗಳು, ಗ್ರಂಥಗಳು ಹೊರಬರಬಹುದು. ಕರ್ನಲ್ ಮೆಕೆಂಝಿಯ ಈ ಸಾಧನೆ ಮತ್ತು ಕೊಡುಗೆ ಮೌಲಿಕವಾದವು. ಆತನ ಕಾರ್ಯವನ್ನು ಉಲ್ಲೇಖಿಸದ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ವಿದ್ವಾಂಸರೇ ಇಲ್ಲವೆನ್ನಬಹುದು. ಇಂದಿಗೂ ಅವೆಲ್ಲ ಪುನರ್ ಸಂಶೋಧನೆಗೆ ಪ್ರೇರಕ ಆಕರಗಳಾಗಿವೆ.

ಭಾರತದಲ್ಲಿ ವಸಹತುಷಾಹಿ ಆಡಳಿತದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಅಸಂಖ್ಯಾತ ಬ್ರಿಟಿಷ್ ಅಧಿಕಾರಿಗಳು ಭಾರತಕ್ಕೆ ಬಂದು ತಮ್ಮ ಕರ್ತವ್ಯ ನಿರ್ವಹಿಸಿದ್ದರ ಬಗ್ಗೆ ದಾಖಲೆ ಇದೆ. ಅವರಲ್ಲಿ ಹೆಚ್ಚಿನವರು ಕಂಪನಿ ಕೆಲಸನಿರ್ವಹಿಸಿ ಉಳಿದ ಕಾಲಾವಧಿಯಲ್ಲಿ ಭಾರತದಲ್ಲಿ ಲಭ್ಯವಾಗಬಹುದಾದ ದೇಶೀಯ ಸಂಸ್ಥಾನಗಳಿಂದ ಬಳಸಿಕೊಂಡು ಐಷಾರಾಮಿ ಜೀವನವನ್ನು ಕಳೆದಿದ್ದಾರೆ. ಭಾರತದ ಗಿರಿಧಾಮಗಳಲ್ಲಿ ಭವ್ಯ ಬಂಗಲೆಯನ್ನು ನಿರ್ಮಿಸಿಕೊಂಡು ಸ್ಥಳೀಯ ಜನಗಳಿಂದ ಸೇವೆಯನ್ನು ಪಡೆದುಕೊಂಡಿದ್ದಾರೆ. ಇಂತಹ ಐಷಾರಾಮಿ ಜೀವನ ಕಳೆದ ಯುರೋಪಿಯನ್ನರು ತಮ್ಮ ಸ್ವಾರ್ಥ ಸುಖಗಳಿಗೆ ಸೀಮಿತವಾಗಿದ್ದರು. ಕರ್ನಲ್ ಮೆಕೆಂಝಿ ಇವೆಲ್ಲದಕ್ಕೂ ಅಪವಾದ. ಆತ ತನ್ನ ಜೀವಮಾನದಲ್ಲಿ ಸಿಕ್ಕ ಕಾಲಾವಧಿಯೆಲ್ಲವನ್ನು ಸದುಪಯೋಗ ಪಡಿಸಿಕೊಂಡನು. ಭಾರತದ ಅಪ್ರತಿಮ ಪ್ರಾಚ್ಯವಸ್ತು ಸಂಗ್ರಹಕಾರ ನೆಂದು ಹೆಸರು ಪಡೆಯುವಲ್ಲಿ ಯಶಸ್ವಿಯಾದನು. ಭಾರತದಲ್ಲಿ ಬೌದ್ಧಿಕ ವರ್ಗದ ಸ್ನೇಹಿತರ, ಹಿತೈಷಿಗಳ, ವಿದ್ವಾಂಸರ, ದ್ವಿಭಾಷಿಗಳ, ನಿಷ್ಠಾವಂತ ಸಹಾಯಕರ, ದೊಡ್ಡ ಬಳಗದ ಮೂಲಕ ಇತಿಹಾಸ ಆರಕಗಳ ಸಂಗ್ರಹಗಳ ಕಾರ್ಯನಿರ್ವಹಿಸಿದನು. ಈ ಮೂಲಕ ತನ್ನದೇ ಆದ ಕಾರ್ಯಪಡೆಯನ್ನು ಹೊಂದಿದ್ದನು ಎಂದು ಹೇಳಬಹುದು. ಇಡೀ ದಕ್ಷಿಣ ಭಾರತವನ್ನೆಲ್ಲಾ ಕುದುರೆ ಸವಾರಿಯಲ್ಲೇ ಸಾಗಿ ಇಲ್ಲಿನ ಪರಿಸರಕ್ಕೆ ತಕ್ಕಂತೆ ತನ್ನ ಮನೋಭಿಲಾಷೆಯನ್ನು ಒಗ್ಗಿಸಿಕೊಂಡಿದ್ದನು. ಎಲ್ಲರೊಂದಿಗೂ ಬೆರೆತು ಹಾಗೂ ಜನ ಜೀವನದ ಬಗೆಗೆ ತಿಳಿದುಕೊಳ್ಳುವ ಕುತೂಹಲ ಆತನಲ್ಲಿ ಹೆಚ್ಚಾಗಿತ್ತು. ಬದುಕಿನ ಬಗ್ಗೆ ಆತನಿಗೆ ಅಪಾರವಾದ ಶ್ರದ್ಧೆ ಇತ್ತು. ಆತನಲ್ಲಿದ್ದ ಸ್ನೇಹ ಹಾಗೂ ಆತ್ಮೀಯತೆಗಳಿಂದಾಗಿಯೇ ಜನರ ಪ್ರೀತಿ ಗಳಿಸಿದುದರಿಂದ ಹಳ್ಳಿಗಳಲ್ಲಿ ಆತನ ಕೆಲಸ ಸುಲಭವಾಗಲು ಸಾಧ್ಯವಾಯಿತು. ಈ ಮೂಲಕ ಭಾರತದ ಚರಿತ್ರೆಯಲ್ಲಿ ಅದರಲ್ಲೂ ವಿಶೇಷವಾಗಿ ಕನ್ನಡ ನಾಡಿನ ಚರಿತ್ರೆಯ ರಚನೆಗೆ ದೊಡ್ಡ ಕೊಡುಗೆಯನ್ನು ನೀಡಿದ್ದಾನೆಂದು ಹೇಳಬಹುದು. ಕರ್ನಲ್ ಮೆಕೆಂಝಿ ಭಾರತದಲ್ಲಿದ್ದ ಬ್ರಿಟೀಷ್ ಹಾಗೂ ಸ್ಥಳೀಯರ ನಡುವೆ ಸ್ನೇಹ ಸೌಹಾರ್ದ ಬೆಳೆಯಲು ಕಾರಣನಾಗಿದ್ದನು. ಸ್ಥಳೀಯ ಜನರ ಬಗ್ಗೆ ನಿರ್ಲಕ್ಷ್ಯ, ತಾತ್ಸಾರ ಹೊಂದಿದ್ದ ಬ್ರಿಟೀಷ್

ಅಧಿಕಾರಿಗಳು ಹಾಗೂ ನಾಗರೀಕರ ಬಗ್ಗೆ ಇದ್ದ ತಪ್ಪು ಗ್ರಹಿಕೆಗಳನ್ನು ತಿದ್ದಿ ಜನಾಂಗ ದ್ವೇಷವನ್ನು ನಿರ್ಮೂಲ ಮಾಡಲು ಪ್ರಾಮಾಣಿಕವಾಗಿ ಪ್ರಯತ್ನವನ್ನು ನಡೆಸಿದನು.

ಕರ್ನಲ್ ಮೆಕೆಂಝಿ ತಾನು ಸ್ವತಃ ಇತಿಹಾಸ ತಜ್ಞನಾಗಿರದಿದ್ದರೂ ಇತಿಹಾಸದ ಅಧ್ಯಯನ ಮತ್ತು ರಚನೆಯ ಪ್ರಾಮುಖ್ಯತೆಯನ್ನು ಅರಿತುಕೊಂಡಿದ್ದನು. ಯಾವುದೇ ಒಂದು ದೇಶದ ಇತಿಹಾಸವನ್ನು ದಾಖಲು ಮಾಡುವುದು ಅತ್ಯಮೂಲ್ಯವಾದ ಕರ್ತವ್ಯವೆಂದು ಅವನು ತಿಳಿದಿದ್ದನು. ಭಾರತ ಒಂದು ಪುರಾತನ ದೇಶವಾಗಿದ್ದು ಅದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದ್ದಿತು. ಇಷ್ಟು ಸುದೀರ್ಘ ಕಾಲದ ಇತಿಹಾಸವುಳ್ಳ ದೇಶದಲ್ಲಿ ಹಿಂದಿನ ಜನರು ಬಿಟ್ಟು ಹೋಗಿದ್ದ ಅಮೂಲ್ಯವಾದ ಚಾರಿತ್ರಿಕ ದಾಖಲೆಗಳನ್ನು ಸಂಗ್ರಹಿಸುವುದು ಅದನ್ನು ಅನುವಾದ ಮಾಡುವುದು, ಅದನ್ನು ಪ್ರಕಟಿಸುವುದು ಅತ್ಯಗತ್ಯವೆಂದು ಆತ ಮನಗಂಡಿದ್ದನು. ಭಾರತೀಯರಿಗೆ ತಮ್ಮ ನಾಡಿನ ಇತಿಹಾಸ ಎಷ್ಟು ಮುಖ್ಯವೋ ಬ್ರಿಟೀಷರಿಗೂ ಈ ದೇಶದ ಭಾಷೆ ಸಾಹಿತ್ಯ ಇತಿಹಾಸ ಸಂಸ್ಕೃತಿಯ ಪರಿಚಯ ಅತ್ಯಗತ್ಯವೆಂಬ ಅಂಶವನ್ನು ಎಲ್ಲರಿಗೂ ಮನದಟ್ಟು ಮಾಡಿಕೊಟ್ಟಿದ್ದನು. ಭಾರತ ದೇಶವನ್ನು ಗೆದ್ದು ವಶಪಡಿಸಿಕೊಳ್ಳಬೇಕಾದರೆ ದೇಶದ ಸಂಪನ್ಮೂಲಗಳು ಜನರ ಸ್ವಭಾವ ಅವರ ಶಕ್ತಿ ದೌರ್ಬಲ್ಯ ಇವುಗಳನ್ನು ತಿಳಿದುಕೊಳ್ಳುವುದು ಅಗತ್ಯವಾದ ವಿಷಯವೆಂದು ಕರ್ನಲ್ ಮೆಕೆಂಝಿ ನಂಬಿಕೆ ಇಟ್ಟಿದ್ದನು.

ಕರ್ನಲ್ ಮೆಕೆಂಝಿ ಹೆಚ್ಚು ವಿದ್ಯಾವಂತನಲ್ಲದಿದ್ದರೂ ಒಂದು ನಾಡಿನ ಇತಿಹಾಸದ ಅಧ್ಯಯನ ಅತ್ಯಮೂಲ್ಯವಾದುದೆಂದು ಇತಿಹಾಸಜ್ಞಾನ ಎಲ್ಲರಿಗೂ ಅತ್ಯಗತ್ಯವಾಗಿದುದೆಂದು ಕರ್ನಲ್ ಮೆಕೆಂಝಿ ನಂಬಿದ್ದನು. ಕರ್ನಲ್ ಮೆಕೆಂಝಿ ತಾನು ಐತಿಸಾಹಿಕ ದಾಖಲೆಗಳನ್ನು ಸಂಗ್ರಹಿಸಿ ಅವುಗಳನ್ನು ಪ್ರಕಟಿಸುವುದು ಜ್ಞಾನ ಪ್ರಸಾರದ ಉದ್ದೇಶಕ್ಕಾಗಿ ಎಂದು ತಿಳಿಸಿದ್ದಾನೆ. ಹಲವಾರು ಕಷ್ಟು ಕೋಟಲೆಗಳ ಮಧ್ಯೆ ಕರ್ನಲ್ ಮೆಕೆಂಝಿ ತನ್ನ ಸಂಗ್ರಹ ಸಂಶೋಧನೆಯನ್ನು ಕೈಗೊಳ್ಳಬೇಕಾಗಿದ್ದಿತು. ಅವನ ಕಾರ್ಯಕ್ಕೆ ಈಸ್ಟ್ ಇಂಡಿಯಾ ಕಂಪನಿಯ ಬೋರ್ಡ್ ಆಫ್ ಡೈರಕ್ಟರ್ಸ್ ಸಾಕಷ್ಟು ಧನ ಸಹಾಯ ಮಾಡುತ್ತಿರಲಿಲ್ಲ.

ಕರ್ನಲ್ ಮೆಕೆಂಝಿ ಹಲವಾರು ಸಹಾಯಕರನ್ನು ನೇಮಿಸಿಕೊಂಡು ತನ್ನ ಸಂಶೋಧನಾ ಕಾರ್ಯಗಳಿಗೆ ಅನೇಕರನ್ನು ಬಳಸಿಕೊಂಡು ಐತಿಹಾಸಿಕ ದಾಖಲೆಗಳ ಸಂಗ್ರಹವನ್ನು ಕೈಗೊಂಡನು. ಹಲವಾರು ಬ್ರಿಟೀಷ್ ಅಧಿಕಾರಿಗಳು ಭಾರತೀಯರ ಬಗ್ಗೆ ಕೀಳು ಮನೋಭಾವವನ್ನು ತೋರಿಸುತ್ತಿದ್ದಾಗ ಕರ್ನಲ್ ಮೆಕೆಂಝಿ ಅವರನ್ನು ತನ್ನ

